ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೨೩.

# ಲಲಿತಾ ತ್ರಿಶತೀ ಭಾಷ್ಯಂ

(ನಾಮಾವಳೀ - ಕನ್ನಡ ಅನುವಾದ ಸಹಿತ)

ಅನುವಾದಕ:

ಆಸ್ಥಾನ ವಿದ್ವಾನ್ ಪಾಟಣಕರ ಚಂದ್ರಶೇಖರಭಟ್ಟ



ಬೆಂಗಳೂರು ಪ್ರೆಸ್ ಬ್ರಾಂಚ್, ಮೈಸೂರು

೧೯೪೫

# ಮುನ್ನುಡಿ.

ಲಲಿತಾ ತ್ರಿಶತೀ ನಾಮ ಸ್ತೋತ್ರವು ಬ್ರಹ್ಮಾಂಡ ಪುರಾಣದ ಉತ್ತರಖಂಡ ದಲ್ಲಿರುವ ಲಲಿತೋಪಾಖ್ಯಾನಕ್ಕೆ ಸೇರಿಕೊಂಡಿರುವುದು. ಇದರಲ್ಲಿ ಭೂಮಿಕೆ, ಸ್ತೋತ್ರ ಮತ್ತು ಫಲಶ್ರುತಿ ಭಾಗಗಳು ಸೇರಿ ಸುಮಾರು ಒಂದು ನೂರು ಐವತ್ತು ಶ್ಲೋಕಗಳಿವೆ. ಉಪಕ್ರಮ ಉಪಸಂಹಾರಗಳು ನಾಮಾವಳಿಯ ಪೂರ್ವ–ಉತ್ತರ ಪ್ರಸಂಗಗಳನ್ನು ನಿರೂಪಣ ಮಾಡುತ್ತ ಇದರ ಮಹಿಮಾತಿ ಶಯವನ್ನು ಪ್ರಶಂಸೆ ಮಾಡುತ್ತಿವೆ.

ಅಗಸ್ತ್ಯಮುನಿಯು ಹಯಗ್ರೀವ ಗುರುವಿನಿಂದ ಲಲಿತಾ ಸಹಸ್ರನಾಮ ಸ್ತೋತ್ರವನ್ನೂ,ಅನೇಕ ರಹಸ್ಯ ಅರ್ಥಗಳನ್ನೂ,ತಿಳಿದರೂ, ಕೃತಕೃತ್ಯತೆಯು ಲಭಿಸ ದಿರುವುದರಿಂದ ಶೋಚಿಸುತ್ತ ಇನ್ನಾವದಾದರೂ ಜ್ಞಾತವ್ಯಾಂಶವು ಇದ್ದರೆ ಉಪ ದೇಶಿಸಬೇಕೆಂದು ಗುರು ಪಾದಾರವಿಂದಗಳಲ್ಲಿ ಪ್ರಣಾಮ ಮಾಡಿ ಕೇಳಿಕೊಂಡನು. ಆದರೆ ಗುರುವು ಅತಿ ರಹಸ್ಯವಾದ ಲಲಿತಾ ತ್ರಿಶತೀ ನಾಮ ಸ್ತೋತ್ರವನ್ನು ಮಾತ್ರ ಶ್ರೀ ಲಲಿತಾಂಬಿಕೆಯ ಆದೇಶದಂತೆ ಉಪದೇಶಿಸತಕ್ಕದಲ್ಲವೆಂದು ದೃಢ ನಿಶ್ಚಯಮಾಡಿ ಅದನ್ನು ಉಪದೇಶ ಮಾಡದೆ ಪಾದಗಳನ್ನು ಬಿಡೆಂದು ಶಿಷ್ಯನಿಗೆ ಹೇಳಿದನು. ಶಿಷ್ಯನು ಮೂರು ವರ್ಷಗಳಾದರೂ ಗುರುಪಾದಗಳನ್ನು ಬಿಡಲಿಲ್ಲ. ಹಾಗೆ ಗುರು–ಶಿಷ್ಯರ ಸುದೃಢವಾದ ಪ್ರವೃತ್ತಿಯನ್ನು ಕಂಡು ಶ್ರೀ ಲಲಿತಾಂಬಿ ಕೆಯು ಕಾಮೇಶ್ವರನ ಸಂಗಡ ಗುರುವಿಗೆ ಪ್ರತ್ಯಕ್ಷಳಾಗಿ ಬಂದು ಭಕ್ತ ಶಿರೋ ಮಣಿಯಾದ ಅಗಸ್ತ್ಯಮುನಿಗೆ ಇದನ್ನು ಉಪದೇಶಮಾಡಲು ಆಜ್ಞೆಯಿತ್ತಳು. ಆಗ ಹಯಗ್ರೀವ ಮುನಿಯು ಶಿಷ್ಯನಲ್ಲಿ ದೇವಿಯ ಪ್ರಸಾದವು ಉಂಟಾಗಿರುವು ದನ್ನು ಅರಿತು ಉಪದೇಶಿಸಿದನು. ಇದು ಸ್ತೋತ್ರದ ಪೂರ್ವ ಪೀಠಿಕೆಯು ಮತ್ತು ಸಹಸ್ರ ನಾಮ ಸ್ತೋತ್ರವನ್ನು ದೇವಿಯ ಆಜ್ಞಾಧಾರಕರಾದ ವಾಗ್ದೇ ವತೆಯರು ಮಾಡಿರುವರೆಂದೂ ಸರ್ವ ಪ್ರೀತಿಕರ ಸ್ತೋತ್ರವೆಂಬ ನಾಮಾಂಕಿತ ವಾದ ತ್ರಿಶತೀ ನಾಮ ಸ್ತೋತ್ರವನ್ನು ಸಾಕ್ಷಾತ್ತಾಗಿ ಕಾಮೇಶ ಕಾಮೇಶಿಯರು ರಚಿಸಿರುವರೆಂದೂ ಉಪಕ್ರಮ–ಉಪಸಂಹಾರಗಳಲ್ಲಿ ವರ್ಣಿಸಿದೆ. ಇದರಿಂದ ಈ ಸ್ತೋತ್ರವು ಅತ್ಯಂತ ರಹಸ್ಯವಾದುದೆಂದೂ ಸರ್ವೋತ್ತಮವೆಂದೂ ಮತ್ತು ಅನನ್ಯ ಭಕ್ತಿಮಾತ್ರದಿಂದ ಲಭ್ಯವೆಂದೂ ತಿಳಿಯುವುದು.

ಈ ಸ್ತೋತ್ರದಲ್ಲಿರುವ ನಾಮಗಳು ಶ್ರೀ ವಿದ್ಯೆಯ ಬೀಜಾಕ್ಷರಗಳಿಂದ ಪ್ರಾರಂಭವಾಗುವುವು. ಪಂಚದಶೀ ವಿದ್ಯೆಯಲ್ಲಿರುವ ಒಂದೊಂದು ವರ್ಣದಿಂದ

ಉಪಕ್ರಮವಾಗುವ ಇಪ್ಪತ್ತು ಸಂಖ್ಯೆಯ ನಾಮಗಳಿಂದ ಪೂರ್ತಿಯಾದ ಸ್ತೋತ್ರವು ಮೂರು ನೂರು ನಾಮಗಳಿಂದ ಗರ್ಭಿತವಾಗಿರುವುದು. ಸಾಮಾನ್ಯವಾಗಿ ಗುಣಮಹಿಮೆಯನ್ನು ಸೂಚಿಸಿ ದೇವತಾ ಕೀರ್ತನ ಮಾಡುವ ಇತರ ನಾಮಗಳಿಗಿಂತಲೂ ಈ ನಾಮಗಳಲ್ಲಿ ಮಂತ್ರಾತ್ಮಕಳಾದ ದೇವತೆಯ ಸನ್ನಿಧಿಯು ವಿಶೇಷವಾಗಿರುವುದು. ಇಷ್ಟೇ ಅಲ್ಲ. ಕೇವಲ ಬೀಜವರ್ಣಮಯವಾದ ಮಂತ್ರ ವಿದ್ಯೆಯ ಅರ್ಥಪರಿಜ್ಞಾನವು ನಾಮ ಸ್ತೋತ್ರದಿಂದ ಆಗಬೇಕು. ಪಂಚದಶೀ ವಿದ್ಯೆಯಲ್ಲಿ ಸೇರಿದ ಪ್ರತ್ಯೇಕವಾದ ವರ್ಣಗಳಿಗೆ ವಿವಕ್ಷಿತವಾದ ಅರ್ಥವು ಗುರು ಸಂಪ್ರದಾಯಾನುಸಾರವಾಗಿ ದೇವಿಯ ಉಪಾಸನಾ ತತ್ಪರರಿಗೆ ಹೊರತು ಮತ್ತಾವ ವ್ಯುತ್ಪನ್ನರಿಗೂ ತಿಳಿಯುವುದಿಲ್ಲ. ಅರ್ಥಜ್ಞಾನ ಸಹಿತ ಉಪಾಸನೆಯು ವೀರ್ಯಾತಿಶಯ ಸಹಿತವೆಂದು ಶಾಸ್ತ್ರವು ಸಾರಿ ಹೇಳುವುದು. ಶ್ರೀ ವಿದ್ಯೆಯಲ್ಲಿರುವ ಒಂದೊಂದು ಬೀಜವರ್ಣವು ದೇವತಾ ಸ್ಮಾರಕವಾಗಿರುವುದು. "ಜ್ಞಾಪಕಂ ದೇವತಾನಾಂ ಯದ್ಬೀಜಮಕ್ಷರಮುಚ್ಯತೇ" ಎಂಬ ಪ್ರಮಾಣದಿಂದ ಬೀಜಾಕ್ಷರವು ದೇವತಾ ಸ್ಮಾರಕವೆಂದು ತಿಳಿಯುವುದು. "ಕಕಾರ ರೂಪಾ" ಮುಂತಾದ ದೇವಿಯಲ್ಲಿ ಅನ್ವಯಿಸುವ ಗುಣ ವಾಚಕ ಶಬ್ದದಲ್ಲಿ ಏಕ ದೇಶವಾಗಿದ್ದ ಬೀಜಾಕ್ಷರವು ಸತ್ಯಭಾಮಾ ಎಂಬ ಶಬ್ದದ ಏಕ ದೇಶವಾದ ಸತ್ಯಾ ಎಂಬುದು ಪೂರ್ಣ ಶಬ್ದಾರ್ಥವನ್ನು ಬೋಧಿಸುವಂತೆ ಪೂರ್ಣ ಶಬ್ದವನ್ನು ಸೂಚಿಸಿ ತನ್ಮೂಲಕ ದೇವಿಯನ್ನು ಬೋಧಿಸುವುದು. ಅಥವಾ ಅರ್ಥ ಸಾಕಾಂಕ್ಷವಾದ ವರ್ಣಗಳಿಗೆ ವ್ಯಾಕರಣ ಮುಂತಾದ ಶಕ್ತಿಗ್ರಾಹಕ ಪ್ರಮಾಣವಿಲ್ಲದ್ದರಿಂದ ತ್ರಿಶತೀ ಸ್ತೋತ್ರವೆಂಬ ಮಹಾ ಪ್ರಮಾಣಾನುಸಾರವಾಗಿ "ಕಕಾರ ರೂಪಾ" ಮುಂತಾದ ಯೌಗಿಕ ಶಬ್ದಗಳಿಗೆ ಇರುವಂತೆ ನಾಮೈಕ ದೇಶಗಳಾದ ಪ್ರತ್ಯೇಕ ವರ್ಣಗಳಿಗೆ ದೇವಿಯನ್ನು ಬೋಧಿಸುವ ಶಕ್ತಿಯನ್ನು ಕಲ್ಪಿಸಬಹುದು. "ಭಜಂತೇ ವರ್ಣಾಸ್ತೇ ತವ ಜನನಿ ನಾಮಾವಯವತಾಮ್" ಎಂಬ ಸೌಂದರ್ಯಲಹರಿಯಲ್ಲಿರುವ ಶ್ರೀಮದಾಚಾರ್ಯ ಭಗವತ್ಪಾದರವರ ವಚನದಿಂದ ತ್ರಿಶತೀ ಸ್ತೋತ್ರ ನಾಮಗಳಿಗೆ ಬೀಜಾಕ್ಷರಗಳು ಅವಯವಗಳೆಂದು ಸ್ಪಷ್ಟವಾಗುವುದು. ನಾಮ ಅಥವಾ ನಾಮಾವಯವಗಳಿಂದ ಪೂರ್ಣರೂಪವನ್ನು ಹೊಂದಿದ ಮಂತ್ರವು ಮಹಾಮಹಿಮೆಯಿಂದ ಕೂಡಿ ಭಕ್ತರಿಗೆ ಉಪಾಸ್ಯವಾಗಿರುವಂತೆ ಸಂಪೂರ್ಣನಾಮಸ್ತೋತ್ರ–ನಾಮಾವಳಿಗಳು ಪ್ರಶಸ್ತವಾದ ಉಪಾಸನಾಂಗವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಈ ಲಲಿತಾ ತ್ರಿಶತೀ ನಾಮ ಸ್ತೋತ್ರಕ್ಕೆ ಸರ್ವತಂತ್ರ ಸ್ವತಂತ್ರರಾದ ಶ್ರೀಮಚ್ಛಂಕರಾಚಾರ್ಯರವರಿಂದ ಲಲಿತವಾಗಿ ಭಾಷ್ಯ ರೂಪವಾದ ವ್ಯಾಖ್ಯಾನವು ರಚಿಸಲ್ಪಟ್ಟಿದೆ ಎಂಬುದು ಸುಪ್ರಸಿದ್ಧವಾಗಿದೆ. ಈ ಭಾಷ್ಯವು ಸಂಸ್ಕೃತ ಭಾಷಾ ಮಯವಾಗಿದೆ.

ಹೀಗೆ ಅತ್ಯಾವಶ್ಯಕವಾಗಿರುವ ಮಹಾ ಮಂತ್ರಾರ್ಥಗಳ ಅನುಭವವನ್ನು ಆರ್ಜಿಸಿ ಹೆಚ್ಚುಮಂದಿ ಕೃತಕೃತ್ಯರಾಗುವಂತೆ ಅನುಗ್ರಹಮಾಡಿ ನಮ್ಮನ್ನಾಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್. ಐ.** ರವರು ಇತ್ತ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಕ್ಕೆ ಪರಿವರ್ತನ ಮಾಡಿರುತ್ತೇನೆ. ಈ ಗ್ರಂಥವು ಬೆಂಗಳೂರು ಪ್ರೆಸ್ ಬ್ರಾಂಚ್, ಮೈಸೂರಿನಲ್ಲಿ ಅಂದವಾಗಿ ಮುದ್ರಿಸಲ್ಪಟ್ಟಿದೆ.

ಈ ರೀತಿಯಾಗಿ ಸಂಸ್ಕೃತಭಾಷ್ಯ, ಕನ್ನಡ ಅನುವಾದ ಮತ್ತು ನಾಮಾವಳಿಗಳಿಂದ ಕೂಡಿದ ಈ ಗ್ರಂಥವನ್ನು ಪ್ರಕಾಶಕ್ಕೆ ತಂದು ಸಜ್ಜನರ ಸೇವೆ ಮಾಡಲು ನನಗೆ ಸದವಕಾಶವನ್ನು ಕಲ್ಪಿಸಿಕೊಟ್ಟ ಮಹನೀಯರಿಗೆ ತುಂಬ ಕೃತಜ್ಞನಾಗಿದ್ದೇನೆ.

ಪಾರ್ಥಿವ ಸಂವತ್ಸರದ
ಆಶ್ವಯುಜ ಶುಕ್ಲ ಬಿದಿಗೆ
ಸೋಮವಾರ; ತಾ. 8-10-45

**ಆಸ್ಥಾನ ವಿದ್ವಾನ್**
**ಪಾಟಣಕರ ಚಂದ್ರಶೇಖರಭಟ್ಟ.**
ಅನುವಾದಕ

# ವಿಷಯಾನುಕ್ರಮಣಿಕೆ.

॥ ಶ್ರೀಃ ॥

# ಅಥ ಶ್ರೀ ಲಲಿತಾತ್ರಿಶತೀನಾಮಾವಳಿಃ

॥ ಓಂ ॥

ಓಂ ಕಕಾರರೂಪಾಯೈ ನಮಃ
ಓಂ ಕಲ್ಯಾಣ್ಯೈ ನಮಃ
ಓಂ ಕಲ್ಯಾಣಗುಣಶಾಲಿನ್ಯೈ ನಮಃ
ಓಂ ಕಲ್ಯಾಣಶೈಲನಿಲಯಾಯೈ ನಮಃ
ಓಂ ಕಮನೀಯಾಯೈ ನಮಃ
ಓಂ ಕಲಾವತ್ಯೈ ನಮಃ
ಓಂ ಕಮಲಾಕ್ಷ್ಯೈ ನಮಃ
ಓಂ ಕಲ್ಮಷಘ್ನ್ಯೈ ನಮಃ
ಓಂ ಕರುಣಾಮೃತಸಾಗರಾಯೈ ನಮಃ
ಓಂ ಕದಮ್ಬಕಾನನಾವಾಸಾಯೈ ನಮಃ ೧೦
ಓಂ ಕದಮ್ಬಕುಸುಮಪ್ರಿಯಾಯೈ ನಮಃ
ಓಂ ಕನ್ದರ್ಪವಿದ್ಯಾಯೈ ನಮಃ
ಓಂ ಕನ್ದರ್ಪಜನಕಾಪಾಙ್ಗವೀಕ್ಷಣಾಯೈ ನಮಃ
ಓಂ ಕರ್ಪೂರವೀಟೀಸೌರಭ್ಯಕಲ್ಲೋಲಿತಕಕುಪ್ತಟಾಯೈ ನಮಃ
ಓಂ ಕಲಿದೋಷಹರಾಯೈ ನಮಃ

ಓಂ ಕಞ್ಜಲೋಚನಾಯೈ ನಮಃ

ಓಂ ಕಮ್ರವಿಗ್ರಹಾಯೈ ನಮಃ

ಓಂ ಕರ್ಮಾದಿಸಾಕ್ಷಿಣ್ಯೈ ನಮಃ

ಓಂ ಕಾರಯಿತ್ರ್ಯೈ ನಮಃ

ಓಂ ಕರ್ಮಫಲಪ್ರದಾಯೈ ನಮಃ ೨೦

ಓಂ ಏಕಾರರೂಪಾಯೈ ನಮಃ

ಓಂ ಏಕಾಕ್ಷರ್ಯೈ ನಮಃ

ಓಂ ಏಕಾನೇಕಾಕ್ಷರಾಕೃತ್ಯೈ ನಮಃ

ಓಂ ಏತತ್ತದಿತ್ಯನಿರ್ದೇಶ್ಯಾಯೈ ನಮಃ

ಓಂ ಏಕಾನನ್ದಚಿದಾಕೃತ್ಯೈ ನಮಃ

ಓಂ ಏವಮಿತ್ಯಾಗಮಾಬೋಧ್ಯಾಯೈ ನಮಃ

ಓಂ ಏಕಭಕ್ತಿಮದರ್ಚಿತಾಯೈ ನಮಃ

ಓಂ ಏಕಾಗ್ರಚಿತ್ತನಿರ್ಧ್ಯಾತಾಯೈ ನಮಃ

ಓಂ ಏಷಣಾರಹಿತಾದೃತಾಯೈ ನಮಃ

ಓಂ ಏಲಾಸುಗನ್ಧಿಚಿಕುರಾಯೈ ನಮಃ ೩೦

ಓಂ ಏನಃಕೂಟವಿನಾಶಿನ್ಯೈ ನಮಃ

ಓಂ ಏಕಭೋಗಾಯೈ ನಮಃ

ಓಂ ಏಕರಸಾಯೈ ನಮಃ

ಓಂ ಏಕೈಶ್ವರ್ಯಪ್ರದಾಯಿನ್ಯೈ ನಮಃ

ಓಂ ಏಕಾತಪತ್ರಸಾಮ್ರಾಜ್ಯಪ್ರದಾಯೈ ನಮಃ

ಓಂ ಏಕಾನ್ತಪೂಜಿತಾಯೈ ನಮಃ

ಓಂ ಏಧಮಾನಪ್ರಭಾಯೈ ನಮಃ

ಓಂ ಏಜದನೇಕಜಗದೀಶ್ವರ್ಯೈ ನಮಃ

ಓಂ ಏಕವೀರಾದಿಸಂಸೇವ್ಯಾಯೈ ನಮಃ

ಓಂ ಏಕಪ್ರಾಭವಶಾಲಿನ್ಯೈ ನಮಃ ೪೦

ಓಂ ಈಕಾರರೂಪಾಯೈ ನಮಃ

ಓಂ ಈಶಿತ್ರ್ಯೈ ನಮಃ
ಓಂ ಈಪ್ಸಿತಾರ್ಥಪ್ರದಾಯಿನ್ಯೈ ನಮಃ
ಓಂ ಈದೃಗಿತ್ಯವಿನಿರ್ದೇಶ್ಯಾಯೈ ನಮಃ
ಓಂ ಈಶ್ವರತ್ವವಿಧಾಯಿನ್ಯೈ ನಮಃ
ಓಂ ಈಶಾನಾದಿಬ್ರಹ್ಮಮಯ್ಯೈ ನಮಃ
ಓಂ ಈಶಿತ್ವಾದ್ಯಷ್ಟಸಿದ್ಧಿದಾಯೈ ನಮಃ
ಓಂ ಈಕ್ಷಿತ್ರ್ಯೈ ನಮಃ
ಓಂ ಈಕ್ಷಣಸೃಷ್ಟಾಣ್ಡಕೋಟ್ಯೈ ನಮಃ
ಓಂ ಈಶ್ವರವಲ್ಲಭಾಯೈ ನಮಃ ೩೦
ಓಂ ಈಡಿತಾಯೈ ನಮಃ
ಓಂ ಈಶ್ವರಾರ್ಧಾಙ್ಗಶರೀರಾಯೈ ನಮಃ
ಓಂ ಈಶಾಧಿದೇವತಾಯೈ ನಮಃ
ಓಂ ಈಶ್ವರಪ್ರೇರಣಕರ್ಯೈ ನಮಃ
ಓಂ ಈಶತಾಣ್ಡವಸಾಕ್ಷಿಣ್ಯೈ ನಮಃ
ಓಂ ಈಶ್ವರೋತ್ಸಂಗನಿಲಯಾಯೈ ನಮಃ
ಓಂ ಈತಿಬಾಧಾವಿನಾಶಿನ್ಯೈ ನಮಃ
ಓಂ ಈಹಾವಿರಹಿತಾಯೈ ನಮಃ
ಓಂ ಈಶಶಕ್ತ್ಯೈ ನಮಃ
ಓಂ ಈಷತ್ಸ್ಮಿತಾನನಾಯೈ ನಮಃ ೪೦
ಓಂ ಲಕಾರರೂಪಾಯೈ ನಮಃ
ಓಂ ಲಲಿತಾಯೈ ನಮಃ
ಓಂ ಲಕ್ಷ್ಮೀವಾಣೀನಿಷೇವಿತಾಯೈ ನಮಃ
ಓಂ ಲಾಕಿನ್ಯೈ ನಮಃ
ಓಂ ಲಲನಾರೂಪಾಯೈ ನಮಃ
ಓಂ ಲಸದ್ದಾಡಿಮಪಾಟಲಾಯೈ ನಮಃ
ಓಂ ಲಲನ್ತಿಕಾಲಸತ್ಫಾಲಾಯೈ ನಮಃ

ಓಂ ಲಲಾಟನಯನಾರ್ಚಿತಾಯೈ ನಮಃ
ಓಂ ಲಕ್ಷಣೋಜ್ಜ್ವಲದಿವ್ಯಾಂಗ್ಯೈ ನಮಃ
ಓಂ ಲಕ್ಷಕೋಟ್ಯಂಡನಾಯಿಕಾಯೈ ನಮಃ ೭೦
ಓಂ ಲಕ್ಷ್ಯಾರ್ಥಾಯೈ ನಮಃ
ಓಂ ಲಕ್ಷಣಾಗಮ್ಯಾಯೈ ನಮಃ
ಓಂ ಲಬ್ಧಕಾಮಾಯೈ ನಮಃ
ಓಂ ಲತಾತನ್ವೈ ನಮಃ
ಓಂ ಲಲಾಮರಾಜದಳಿಕಾಯೈ ನಮಃ
ಓಂ ಲಮ್ಬಿಮುಕ್ತಾಲತಾಂಚಿತಾಯೈ ನಮಃ
ಓಂ ಲಮ್ಬೋದರಪ್ರಸ್ವೈ ನಮಃ
ಓಂ ಲಭ್ಯಾಯೈ ನಮಃ
ಓಂ ಲಜ್ಜಾಢ್ಯಾಯೈ ನಮಃ
ಓಂ ಲಯವರ್ಜಿತಾಯೈ ನಮಃ ೮೦
ಓಂ ಹ್ರೀಂಕಾರರೂಪಾಯೈ ನಮಃ
ಓಂ ಹ್ರೀಂಕಾರನಿಲಯಾಯೈ ನಮಃ
ಓಂ ಹ್ರೀಂಪದಪ್ರಿಯಾಯೈ ನಮಃ
ಓಂ ಹ್ರೀಂಕಾರಬೀಜಾಯೈ ನಮಃ
ಓಂ ಹ್ರೀಂಕಾರಮನ್ತ್ರಾಯೈ ನಮಃ
ಓಂ ಹ್ರೀಂಕಾರಲಕ್ಷಣಾಯೈ ನಮಃ
ಓಂ ಹ್ರೀಂಕಾರಜಪಸುಪ್ರೀತಾಯೈ ನಮಃ
ಓಂ ಹ್ರೀಂಮತ್ಯೈ ನಮಃ
ಓಂ ಹ್ರೀಂವಿಭೂಷಣಾಯೈ ನಮಃ
ಓಂ ಹ್ರೀಂಶೀಲಾಯೈ ನಮಃ ೯೦
ಓಂ ಹ್ರೀಂಪದಾರಾಧ್ಯಾಯೈ ನಮಃ
ಓಂ ಹ್ರೀಂಗರ್ಭಾಯೈ ನಮಃ
ಓಂ ಹ್ರೀಂಪದಾಭಿಧಾಯೈ ನಮಃ

ಓಂ ಹ್ರೀಂಕಾರವಾಚ್ಯಾಯೈ ನಮಃ
ಓಂ ಹ್ರೀಂಕಾರಪೂಜ್ಯಾಯೈ ನಮಃ
ಓಂ ಹ್ರೀಂಕಾರಪೀಠಿಕಾಯೈ ನಮಃ
ಓಂ ಹ್ರೀಂಕಾರವೇದ್ಯಾಯೈ ನಮಃ
ಓಂ ಹ್ರೀಂಕಾರಚಿನ್ತ್ಯಾಯೈ ನಮಃ
ಓಂ ಹ್ರೀಂ ನಮಃ
ಓಂ ಹ್ರೀಂಶರೀರಿಣ್ಯೈ ನಮಃ ೧೦೦

ಓಂ ಹಕಾರರೂಪಾಯೈ ನಮಃ
ಓಂ ಹಲಭೃತ್ಪೂಜಿತಾಯೈ ನಮಃ
ಓಂ ಹರಿಣೇಕ್ಷಣಾಯೈ ನಮಃ
ಓಂ ಹರಪ್ರಿಯಾಯೈ ನಮಃ
ಓಂ ಹರಾರಾಧ್ಯಾಯೈ ನಮಃ
ಓಂ ಹರಿಬ್ರಹ್ಮೇಂದ್ರವನ್ದಿತಾಯೈ ನಮಃ
ಓಂ ಹಯಾರೂಢಾಸೇವಿತಾಂಘ್ರ್ಯೈ ನಮಃ
ಓಂ ಹಯಮೇಧಸಮರ್ಚಿತಾಯೈ ನಮಃ
ಓಂ ಹರ್ಯಕ್ಷವಾಹನಾಯೈ ನಮಃ
ಓಂ ಹಂಸವಾಹನಾಯೈ ನಮಃ ೧೧೦

ಓಂ ಹತದಾನವಾಯೈ ನಮಃ
ಓಂ ಹತ್ಯಾದಿಪಾಪಶಮನ್ಯೈ ನಮಃ
ಓಂ ಹರಿದಶ್ವಾದಿಸೇವಿತಾಯೈ ನಮಃ
ಓಂ ಹಸ್ತಿಕುಮ್ಭೋತ್ತುಙ್ಗಕುಚಾಯೈ ನಮಃ
ಓಂ ಹಸ್ತಿಕೃತ್ತಿಪ್ರಿಯಾಙ್ಗನಾಯೈ ನಮಃ
ಓಂ ಹರಿದ್ರಾಕುಙ್ಕುಮಾದಿಗ್ಧಾಯೈ ನಮಃ
ಓಂ ಹರ್ಯಶ್ವಾದ್ಯಮರಾರ್ಚಿತಾಯೈ ನಮಃ
ಓಂ ಹರಿಕೇಶಸಖ್ಯೈ ನಮಃ
ಓಂ ಹಾದಿವಿದ್ಯಾಯೈ ನಮಃ

ಓಂ ಹಾಲಾಮದಾಲಸಾಯೈ ನಮಃ ೧೨೦

ಓಂ ಸಕಾರರೂಪಾಯೈ ನಮಃ

ಓಂ ಸರ್ವಜ್ಞಾಯೈ ನಮಃ

ಓಂ ಸರ್ವೇಶ್ಯೈ ನಮಃ

ಓಂ ಸರ್ವಮಙ್ಗಳಾಯೈ ನಮಃ

ಓಂ ಸರ್ವಕರ್ತ್ರ್ಯೈ ನಮಃ

ಓಂ ಸರ್ವಭರ್ತ್ರ್ಯೈ ನಮಃ

ಓಂ ಸರ್ವಹರ್ತ್ರ್ಯೈ ನಮಃ

ಓಂ ಸನಾತನಾಯೈ ನಮಃ

ಓಂ ಸರ್ವಾನವದ್ಯಾಯೈ ನಮಃ

ಓಂ ಸರ್ವಾಙ್ಗಸುನ್ದರ್ಯೈ ನಮಃ ೧೩೦

ಓಂ ಸರ್ವಸಾಕ್ಷಿಣ್ಯೈ ನಮಃ

ಓಂ ಸರ್ವಾತ್ಮಿಕಾಯೈ ನಮಃ

ಓಂ ಸರ್ವಸೌಖ್ಯದಾತ್ರ್ಯೈ ನಮಃ

ಓಂ ಸರ್ವವಿಮೋಹಿನ್ಯೈ ನಮಃ

ಓಂ ಸರ್ವಾಧಾರಾಯೈ ನಮಃ

ಓಂ ಸರ್ವಗತಾಯೈ ನಮಃ

ಓಂ ಸರ್ವಾವಗುಣವರ್ಜಿತಾಯೈ ನಮಃ

ಓಂ ಸರ್ವಾರುಣಾಯೈ ನಮಃ

ಓಂ ಸರ್ವಮಾತ್ರೇ ನಮಃ

ಓಂ ಸರ್ವಭೂಷಣಭೂಷಿತಾಯೈ ನಮಃ ೧೪೦

ಓಂ ಕಕಾರಾರ್ಥಾಯೈ ನಮಃ

ಓಂ ಕಾಲಹನ್ತ್ರ್ಯೈ ನಮಃ

ಓಂ ಕಾಮೇಶ್ಯೈ ನಮಃ

ಓಂ ಕಾಮಿತಾರ್ಥದಾಯೈ ನಮಃ

ಓಂ ಕಾಮಸಂಜೀವಿನ್ಯೈ ನಮಃ

ಓಂ ಕಲ್ಯಾಣ್ಯೈ ನಮಃ
ಓಂ ಕಠಿನಸ್ತನಮಣ್ಡಲಾಯೈ ನಮಃ
ಓಂ ಕರಭೋರ್ವೈ ನಮಃ
ಓಂ ಕಲಾನಾಥಮುಖ್ಯೈ ನಮಃ
ಓಂ ಕಚಜಿತಾಮ್ಬುದಾಯೈ ೧೫೦
ಓಂ ಕಟಾಕ್ಷಸ್ಯನ್ದಿಕರುಣಾಯೈ ನಮಃ
ಓಂ ಕಪಾಲಿಪ್ರಾಣನಾಯಿಕಾಯೈ ನಮಃ
ಓಂ ಕಾರುಣ್ಯವಿಗ್ರಹಾಯೈ ನಮಃ
ಓಂ ಕಾನ್ತಾಯೈ ನಮಃ
ಓಂ ಕಾನ್ತಿಧೂತಜಪಾವಳ್ಯೈ ನಮಃ
ಓಂ ಕಲಾಲಾಪಾಯೈ ನಮಃ
ಓಂ ಕಮ್ಬುಕಣ್ಠ್ಯೈ ನಮಃ
ಓಂ ಕರನಿರ್ಜಿತಪಲ್ಲವಾಯೈ ನಮಃ
ಓಂ ಕಲ್ಪವಲ್ಲೀಸಮಭುಜಾಯೈ ನಮಃ
ಓಂ ಕಸ್ತೂರೀತಿಲಕಾಂಚಿತಾಯೈ ನಮಃ ೧೬೦
ಓಂ ಹಕಾರಾರ್ಥಾಯೈ ನಮಃ
ಓಂ ಹಂಸಗತ್ಯೈ ನಮಃ
ಓಂ ಹಾಟಕಾಭರಣೋಜ್ಜ್ವಲಾಯೈ ನಮಃ
ಓಂ ಹಾರಹಾರಿಕುಚಾಭೋಗಾಯೈ ನಮಃ
ಓಂ ಹಾಕಿನ್ಯೈ ನಮಃ
ಓಂ ಹಲ್ಯವರ್ಜಿತಾಯೈ ನಮಃ
ಓಂ ಹರಿತ್ಪತಿಸಮಾರಾಧ್ಯಾಯೈ ನಮಃ
ಓಂ ಹಠಾತ್ಕಾರಹತಾಸುರಾಯೈ ನಮಃ
ಓಂ ಹರ್ಷಪ್ರದಾಯೈ ನಮಃ
ಓಂ ಹವಿರ್ಭೋಕ್ತ್ರ್ಯೈ ನಮಃ ೧೭೦
ಓಂ ಹಾರ್ದಸಂತಮಸಾಪಹಾಯೈ ನಮಃ

ಓಂ ಹಲ್ಲೀಸಲಾಸ್ಯಸಂತುಷ್ಟಾಯೈ ನಮಃ
ಓಂ ಹಂಸಮನ್ತ್ರಾರ್ಥರೂಪಿಣ್ಯೈ ನಮಃ
ಓಂ ಹಾನೋಪಾದಾನನಿರ್ಮುಕ್ತಾಯೈ ನಮಃ
ಓಂ ಹರ್ಷಿಣ್ಯೈ ನಮಃ
ಓಂ ಹರಿಸೋದರ್ಯೈ ನಮಃ
ಓಂ ಹಾಹಾಹೂಹೂಮುಖಸ್ತುತ್ಯಾಯೈ ನಮಃ
ಓಂ ಹಾನಿವೃದ್ಧಿವಿವರ್ಜಿತಾಯೈ ನಮಃ
ಓಂ ಹಯ್ಯಂಗವೀನಹೃದಯಾಯೈ ನಮಃ
ಓಂ ಹರಿಗೋಪಾರುಣಾಂಶುಕಾಯೈ ನಮಃ ೧೮೦

ಓಂ ಲಕಾರಾಖ್ಯಾಯೈ ನಮಃ
ಓಂ ಲತಾಪೂಜ್ಯಾಯೈ ನಮಃ
ಓಂ ಲಯಸ್ಥಿತ್ಯುದ್ಭವೇಶ್ವರ್ಯೈ ನಮಃ
ಓಂ ಲಾಸ್ಯದರ್ಶನಸಂತುಷ್ಟಾಯೈ ನಮಃ
ಓಂ ಲಾಭಾಲಾಭವಿವರ್ಜಿತಾಯೈ ನಮಃ
ಓಂ ಲಂಘ್ಯೇತರಾಜ್ಞಾಯೈ ನಮಃ
ಓಂ ಲಾವಣ್ಯಶಾಲಿನ್ಯೈ ನಮಃ
ಓಂ ಲಘುಸಿದ್ಧಿದಾಯೈ ನಮಃ
ಓಂ ಲಾಕ್ಷಾರಸಸವರ್ಣಾಭಾಯೈ ನಮಃ
ಓಂ ಲಕ್ಷ್ಮಣಾಗ್ರಜಪೂಜಿತಾಯೈ ನಮಃ ೧೯೦

ಓಂ ಲಭ್ಯೇತರಸ್ಯೈ ನಮಃ
ಓಂ ಲಬ್ಧಭಕ್ತಿಸುಲಭಾಯೈ ನಮಃ
ಓಂ ಲಾಂಗಲಾಯುಧಾಯೈ ನಮಃ
ಓಂ ಲಗ್ನಚಾಮರಹಸ್ತಶ್ರೀಶಾರದಾಪರಿವೀಜಿತಾಯೈ ನಮಃ

ಓಂ ಲಜ್ಜಾಪದಸಮಾರಾಧ್ಯಾಯೈ ನಮಃ
ಓಂ ಲಮ್ಪಟಾಯೈ ನಮಃ

ಓಂ ಲಕುಳೀಶ್ವರ್ಯೈ ನಮಃ
ಓಂ ಲಬ್ಧಮಾನಾಯೈ ನಮಃ
ಓಂ ಲಬ್ಧರಸಾಯೈ ನಮಃ
ಓಂ ಲಬ್ಧಸಮ್ಪತ್ಸಮುನ್ನತ್ಯೈ ನಮಃ ೧೦೦
ಓಂ ಹ್ರೀಂಕಾರಿಣ್ಯೈ ನಮಃ
ಓಂ ಹ್ರೀಂಕಾರಾದ್ಯಾಯೈ ನಮಃ
ಓಂ ಹ್ರೀಂಮಧ್ಯಾಯೈ ನಮಃ
ಓಂ ಹ್ರೀಂಶಿಖಾಮಣ್ಯೈ ನಮಃ
ಓಂ ಹ್ರೀಂಕಾರಕುಣ್ಡಾಗ್ನಿಶಿಖಾಯೈ ನಮಃ
ಓಂ ಹ್ರೀಂಕಾರಶಶಿಚನ್ದ್ರಿಕಾಯೈ ನಮಃ
ಓಂ ಹ್ರೀಂಕಾರಭಾಸ್ಕರರುಚ್ಯೈ ನಮಃ
ಓಂ ಹ್ರೀಂಕಾರಾಮ್ಭೋದಚಞ್ಚಲಾಯೈ ನಮಃ
ಓಂ ಹ್ರೀಂಕಾರಕನ್ದಾಙ್ಕುರಿಕಾಯೈ ನಮಃ
ಓಂ ಹ್ರೀಂಕಾರೈಕಪರಾಯಣಾಯೈ ನಮಃ ೧೧೦
ಓಂ ಹ್ರೀಂಕಾರದೀರ್ಘಿಕಾಹಂಸ್ಯೈ ನಮಃ
ಓಂ ಹ್ರೀಂಕಾರೋದ್ಯಾನಕೇಕಿನ್ಯೈ ನಮಃ
ಓಂ ಹ್ರೀಂಕಾರಾರಣ್ಯಹರಿಣ್ಯೈ ನಮಃ
ಓಂ ಹ್ರೀಂಕಾರಾವಾಲವಲ್ಲರ್ಯೈ ನಮಃ
ಓಂ ಹ್ರೀಂಕಾರಪಞ್ಜರಶುಕ್ಯೈ ನಮಃ
ಓಂ ಹ್ರೀಂಕಾರಾಙ್ಗಣದೀಪಿಕಾಯೈ ನಮಃ
ಓಂ ಹ್ರೀಂಕಾರಕನ್ದರಾಸಿಂಹ್ಯೈ ನಮಃ
ಓಂ ಹ್ರೀಂಕಾರಾಮ್ಭೋಜಭೃಂಗಿಕಾಯೈ ನಮಃ
ಓಂ ಹ್ರೀಂಕಾರಸುಮನೋಮಾಧ್ವ್ಯೈ ನಮಃ
ಓಂ ಹ್ರೀಂಕಾರತರುಮಞ್ಜರ್ಯೈ ನಮಃ ೧೨೦
ಓಂ ಸಕಾರಾಖ್ಯಾಯೈ ನಮಃ
ಓಂ ಸಮರಸಾಯೈ ನಮಃ

ಓಂ ಸಕಲಾಗಮಸಂಸ್ತುತಾಯೈ ನಮಃ
ಓಂ ಸರ್ವವೇದಾನ್ತತಾತ್ಪರ್ಯಭೂಮ್ಯೈ ನಮಃ
ಓಂ ಸದಸದಾಶ್ರಯಾಯೈ ನಮಃ
ಓಂ ಸಕಲಾಯೈ ನಮಃ
ಓಂ ಸಚ್ಚಿದಾನನ್ದಾಯೈ ನಮಃ
ಓಂ ಸಾಧ್ಯಾಯೈ ನಮಃ
ಓಂ ಸದ್ಗತಿದಾಯಿನ್ಯೈ ನಮಃ
ಓಂ ಸನಕಾದಿಮುನಿಧ್ಯೇಯಾಯೈ ನಮಃ ೨೩೦

ಓಂ ಸದಾಶಿವಕುಟುಮ್ಬಿನ್ಯೈ ನಮಃ
ಓಂ ಸಕಲಾಧಿಷ್ಠಾನರೂಪಾಯೈ ನಮಃ
ಓಂ ಸತ್ಯರೂಪಾಯೈ ನಮಃ
ಓಂ ಸಮಾಕೃತ್ಯೈ ನಮಃ
ಓಂ ಸರ್ವಪ್ರಪಞ್ಚನಿರ್ಮಾತ್ರ್ಯೈ ನಮಃ
ಓಂ ಸಮಾನಾಧಿಕವರ್ಜಿತಾಯೈ ನಮಃ
ಓಂ ಸರ್ವೋತ್ತುಂಗಾಯೈ ನಮಃ
ಓಂ ಸಙ್ಗಹೀನಾಯೈ ನಮಃ
ಓಂ ಸದ್ಗುಣಾಯೈ ನಮಃ
ಓಂ ಸಕಲೇಷ್ಟದಾಯೈ ನಮಃ ೨೪೦

ಓಂ ಕಕಾರಿಣ್ಯೈ ನಮಃ
ಓಂ ಕಾವ್ಯಲೋಲಾಯೈ ನಮಃ
ಓಂ ಕಾಮೇಶ್ವರಮನೋಹರಾಯೈ ನಮಃ
ಓಂ ಕಾಮೇಶ್ವರಪ್ರಾಣನಾಡ್ಯೈ ನಮಃ
ಓಂ ಕಾಮೇಶೋತ್ಸಙ್ಗವಾಸಿನ್ಯೈ ನಮಃ
ಓಂ ಕಾಮೇಶ್ವರಾಲಿಂಗಿತಾಂಗ್ಯೈ ನಮಃ
ಓಂ ಕಾಮೇಶ್ವರಸುಖಪ್ರದಾಯೈ ನಮಃ
ಓಂ ಕಾಮೇಶ್ವರಪ್ರಣಯಿನ್ಯೈ ನಮಃ

ಓಂ ಕಾಮೇಶ್ವರವಿಲಾಸಿನ್ಯೈ ನಮಃ
ಓಂ ಕಾಮೇಶ್ವರತಪಸ್ಸಿದ್ಧ್ಯೈ ನಮಃ ೨೫೦
ಓಂ ಕಾಮೇಶ್ವರಮನಃಪ್ರಿಯಾಯೈ ನಮಃ
ಓಂ ಕಾಮೇಶ್ವರಪ್ರಾಣನಾಥಾಯೈ ನಮಃ
ಓಂ ಕಾಮೇಶ್ವರವಿಮೋಹಿನ್ಯೈ ನಮಃ
ಓಂ ಕಾಮೇಶ್ವರಬ್ರಹ್ಮವಿದ್ಯಾಯೈ ನಮಃ
ಓಂ ಕಾಮೇಶ್ವರಗೃಹೇಶ್ವರ್ಯೈ ನಮಃ
ಓಂ ಕಾಮೇಶ್ವರಾಹ್ಲಾದಕರ್ಯೈ ನಮಃ
ಓಂ ಕಾಮೇಶ್ವರಮಹೇಶ್ವರ್ಯೈ ನಮಃ
ಓಂ ಕಾಮೇಶ್ವರ್ಯೈ ನಮಃ
ಓಂ ಕಾಮಕೋಟಿನಿಲಯಾಯೈ ನಮಃ
ಓಂ ಕಾಂಕ್ಷಿತಾರ್ಥದಾಯೈ ನಮಃ ೨೬೦
ಓಂ ಲಕಾರಿಣ್ಯೈ ನಮಃ
ಓಂ ಲಬ್ಧರೂಪಾಯೈ ನಮಃ
ಓಂ ಲಬ್ಧಧಿಯೇ ನಮಃ
ಓಂ ಲಬ್ಧವಾಂಛಿತಾಯೈ ನಮಃ
ಓಂ ಲಬ್ಧಪಾಪಮನೋದೂರಾಯೈ ನಮಃ
ಓಂ ಲಬ್ಧಾಹಂಕಾರದುರ್ಗಮಾಯೈ ನಮಃ
ಓಂ ಲಬ್ಧಶಕ್ತ್ಯೈ ನಮಃ
ಓಂ ಲಬ್ಧದೇಹಾಯೈ ನಮಃ
ಓಂ ಲಬ್ಧೈಶ್ವರ್ಯಸಮುನ್ನತ್ಯೈ ನಮಃ
ಓಂ ಲಬ್ಧವೃದ್ಧ್ಯೈ ನಮಃ ೨೭೦
ಓಂ ಲಬ್ಧಲೀಲಾಯೈ ನಮಃ
ಓಂ ಲಬ್ಧಯೌವನಶಾಲಿನ್ಯೈ ನಮಃ
ಓಂ ಲಬ್ಧಾತಿಶಯಸರ್ವಾಙ್ಗಸೌನ್ದರ್ಯಾಯೈ ನಮಃ
ಓಂ ಲಬ್ಧವಿಭ್ರಮಾಯೈ ನಮಃ

ಓಂ ಲಬ್ಧರಾಗಾಯೈ ನಮಃ
ಓಂ ಲಬ್ಧಪತ್ನ್ಯೈ ನಮಃ
ಓಂ ಲಬ್ಧನಾನಾಗಮಸ್ಥಿತ್ಯೈ ನಮಃ
ಓಂ ಲಬ್ಧಭೋಗಾಯೈ ನಮಃ
ಓಂ ಲಬ್ಧಸುಖಾಯೈ ನಮಃ
ಓಂ ಲಬ್ಧಹರ್ಷಾಭಿಪೂರಿತಾಯೈ ನಮಃ ೨೮೦
ಓಂ ಹ್ರೀಂಕಾರಮೂರ್ತ್ಯೈ ನಮಃ
ಓಂ ಹ್ರೀಂಕಾರಸೌಧಶೃಙ್ಗಕಪೋತಿಕಾಯೈ ನಮಃ
ಓಂ ಹ್ರೀಂಕಾರದುಗ್ಧಾಬ್ಧಿಸುಧಾಯೈ ನಮಃ
ಓಂ ಹ್ರೀಂಕಾರಕಮಲೇನ್ದಿರಾಯೈ ನಮಃ
ಓಂ ಹ್ರೀಂಕಾರಮಣಿದೀಪಾರ್ಚಿಷೇ ನಮಃ
ಓಂ ಹ್ರೀಂಕಾರತರುಶಾರಿಕಾಯೈ ನಮಃ
ಓಂ ಹ್ರೀಂಕಾರಪೇಟಕಮಣ್ಯೈ ನಮಃ
ಓಂ ಹ್ರೀಂಕಾರಾದರ್ಶಬಿಮ್ಬಿತಾಯೈ ನಮಃ
ಓಂ ಹ್ರೀಂಕಾರಕೋಶಾಸಿಲತಾಯೈ ನಮಃ
ಓಂ ಹ್ರೀಂಕಾರಾಸ್ಥಾನನರ್ತಕ್ಯೈ ನಮಃ ೨೯೦
ಓಂ ಹ್ರೀಂಕಾರಶುಕ್ತಿಕಾಮುಕ್ತಾಮಣ್ಯೈ ನಮಃ
ಓಂ ಹ್ರೀಂಕಾರಬೋಧಿತಾಯೈ ನಮಃ
ಓಂ ಹ್ರೀಂಕಾರಮಯಸೌವರ್ಣಸ್ತಮ್ಭವಿದ್ರುಮಪುತ್ರಿ-
ಕಾಯೈ ನಮಃ
ಓಂ ಹ್ರೀಂಕಾರವೇದೋಪನಿಷದೇ ನಮಃ
ಓಂ ಹ್ರೀಂಕಾರಾಧ್ವರದಕ್ಷಿಣಾಯೈ ನಮಃ
ಓಂ ಹ್ರೀಂಕಾರನನ್ದನಾರಾಮನವಕಲ್ಪಕವಲ್ಲರ್ಯೈ ನಮಃ
ಓಂ ಹ್ರೀಂಕಾರಹಿಮವದ್ಗಂಗಾಯೈ ನಮಃ
ಓಂ ಹ್ರೀಂಕಾರಾರ್ಣವಕೌಸ್ತುಭಾಯೈ ನಮಃ
ಓಂ ಹ್ರೀಂಕಾರಮನ್ತ್ರಸರ್ವಸ್ವಾಯೈ ನಮಃ
ಓಂ ಹ್ರೀಂಕಾರಪರಸೌಖ್ಯದಾಯೈ ನಮಃ

ಇತಿ ಶ್ರೀಲಲಿತಾತ್ರಿಶತೀನಾಮಾವಳಿಸ್ಸಂಪೂರ್ಣಾ.

॥ ಶ್ರೀ ॥

# ಲಲಿತಾ ತ್ರಿಶತೀ ಭಾಷ್ಯ ಭೂಮಿಕಾ

॥ ಅಗಸ್ತ್ಯ ಉವಾಚ ॥

**ಹಯಗ್ರೀವ ದಯಾಸಿಂಧೋ ಭಗವನ್ ಶಿಷ್ಯವತ್ಸಲ ।**
**ತ್ವತ್ತಃ ಶ್ರುತಮಶೇಷೇಣ ಶ್ರೋತವ್ಯಂ ಯದ್ಯದಸ್ತಿ ತತ್ ॥ ೧ ॥**

**ರಹಸ್ಯನಾಮಸಾಹಸ್ರಮಪಿ ತ್ವತ್ತಃ ಶ್ರುತಂ ಮಯಾ ।**
**ಇತಃ ಪರಂ ಮೇ ನಾಸ್ತ್ಯೇವ ಶ್ರೋತವ್ಯಮಿತಿ ನಿಶ್ಚಯಃ ॥ ೨ ॥**

**ತಥಾಪಿ ಮಮ ಚಿತ್ತಸ್ಯ ಪರ್ಯಾಪ್ತಿರ್ನೈವ ಜಾಯತೇ ।**
**ಕಾರ್ತ್ಸ್ನ್ಯಾರ್ಥಃ ಪ್ರಾಪ್ಯ ಇತ್ಯೇವ ಶೋಚಯಿಷ್ಯಾಮ್ಯಹಂ**
**ಪ್ರಭೋ ॥ ೩ ॥**

---

೧. ಶಿಷ್ಯನಾದ ಅಗಸ್ತ್ಯಮುನಿಯು ಹಯಗ್ರೀವನೆಂಬ ಗುರು ಸನ್ನಿಧಿಯಲ್ಲಿ ಪ್ರಾರ್ಥಿಸಿಕೊಂಡನು : ಪೂಜ್ಯನೂ, ಶಿಷ್ಯ ಜನರಲ್ಲಿ ಪ್ರೇಮಿಯೂ, ಕರುಣಾಸಮುದ್ರನೂ ಆದ ಹಯಗ್ರೀವ ಮುನಿಯೇ, ಮಾನವನು ಕೃತಕೃತ್ಯನಾಗಲು ಕೇಳಬೇಕಾದ ಸಮಸ್ತ ವಿಷಯಗಳನ್ನೂ ನಾನು ಸಂಪೂರ್ಣವಾಗಿ ಶ್ರವಣ ಮಾಡಿರುವೆನು.

೨. ಹಾಗು ನಿನ್ನ ಅನುಗ್ರಹದಿಂದ ನಾನು ಲಲಿತಾ ಸಹಸ್ರನಾಮವೆಂಬ ರಹಸ್ಯವನ್ನು ಶ್ರವಣ ಮಾಡಿರುವೆನು. ಇಷ್ಟುಹೊರತು ಶ್ರವಣಮಾಡಬೇಕಾಗಿದ್ದ ಇನ್ನಾವ ವಿಷಯವೂ ಇಲ್ಲವೆಂದು ನಾನು ನಿಶ್ಚಯಿಸಿರುತ್ತೇನೆ.

೩. ಪ್ರಭುವೆ ! ಹಾಗಿದ್ದರೂ ನನ್ನ ಮನಸ್ಸಿಗೆ ಶ್ರವಣ ಮಾಡಿದುದು

**ಕಿಮಿದಂ ಕಾರಣಂ ಬ್ರೂಹಿ ಜ್ಞಾತವ್ಯಾಂಶೋಽಸ್ತಿ ವಾ ಪುನಃ ।**
**ಅಸ್ತಿ ಚೇನ್ಮಮ ತದ್ಬ್ರೂಹಿ ಬ್ರೂಹೀತ್ಯುಕ್ತ್ವಾ ಪ್ರಣಮ್ಯ ತಮ್ ॥**

**॥ ಸೂತ ಉವಾಚ ॥**

**ಸಮಾಲಲಂಬೇ ತತ್ಪಾದಯುಗಳಂ ಕಲಶೋದ್ಭವಃ ।**
**ಹಯಾನನೋ ಭೀತಭೀತಃ ಕಿಮಿದಂ ಕಿಮಿದಂ ತ್ವಿತಿ ॥ ೫ ॥**

**ಮುಂಚ ಮುಂಚೇತಿ ತಂ ಚೋಕ್ತ್ವಾ ಚಿಂತಾಕ್ರಾಂತೋ ಬಭೂವ ಸಃ ।**
**ಚಿರಂ ವಿಚಾರ್ಯ ನಿಶ್ಚಿನ್ವನ್ ವಕ್ತವ್ಯಂ ನ ಮಯೇತ್ಯಸೌ ॥ ೬ ॥**

---

ಸಾಕು ಎಂಬ ಭಾವನೆಯು ಉಂಟಾಗಲಿಲ್ಲ. ಸಂಪೂರ್ಣ ಅರ್ಥಗಳನ್ನು ತಿಳಿಯ ಬೇಕು ಎಂಬುದೊಂದು ಆಶೆಯಿಂದ ನಾನು ಶೋಕಪಡುತ್ತೇನೆ.

೪. ಗುರುವೆ ! ಈ ಚಿತ್ತ ಚಾಪಲಕ್ಕೆ ಏನು ಕಾರಣವು ? ಇನ್ನಾವುದಾದರೂ ತಿಳಿಯಬೇಕಾದ ವಿಷಯವು ಇದೆಯೆ? ಹೇಳು. ಹಾಗೆ ಅಂತಹ ವಿಷಯವು ಇರುವುದಾದರೆ ಆ ವಿಷಯವನ್ನು ನನಗೆ ಉಪದೇಶಿಸು. ಹೀಗೆಂದು ಹೇಳಿ ಅಗಸ್ತ್ಯಮುನಿಯು ಗುರುವಿಗೆ ವಂದಿಸಿದನು.

೫. ಸೂತ ಮುನಿಯು ಇಂತೆಂದನು: ಅಗಸ್ತ್ಯಮುನಿಯು ಈ ರೀತಿ ಯಾಗಿ ಪ್ರಾರ್ಥಿಸಿ ಹಯಗ್ರೀವ ಗುರುವಿನ ಚರಣ ಯುಗಲವನ್ನು ಹಿಡಿದು ಕೊಂಡನು. ಆಗ ಹಯಗ್ರೀವ ಮುನಿಯು, ಇದೇನು ! ಎಂದು ಅತಿಯಾಗಿ ಭಯಗೊಂಡನು.

೬. ಮತ್ತು ಅಗಸ್ತ್ಯನನ್ನು ಕುರಿತು, ಬಿಡು, ಬಿಡು ಎಂದು ಹೇಳಿ ಮನಸ್ಸಿನಲ್ಲಿ ದೊಡ್ಡ ಚಿಂತೆಯಿಂದ ಆಕ್ರಾಂತನಾದನು. ಹಾಗೆಯೆ ಅಗಸ್ತ್ಯಮುನಿಗೆ ಉಪ ದೇಶಿಸುವ ವಿಷಯದಲ್ಲಿ ತುಂಬ ವಿಚಾರಮಾಡಿ ಕಡೆಗೆ ಈ ರಹಸ್ಯವನ್ನು ಉಪದೇಶಿಸಬಾರದೆಂದು ತೀರ್ಮಾನಿಸಿದನು.

ತೂಷ್ಣೀಂ ಸ್ಥಿತಃ ಸ್ಮರನ್ನಾಜ್ಞಾಂ ಲಲಿತಾಂಬಾಕೃತಾಂ ಪುರಾ ।
ಪ್ರಣಮ್ಯ ವಿಪ್ರಂ ಸ ಮುನಿಸ್ತತ್ಪಾದಾವತ್ಯಜನ್ ಸ್ಥಿತಃ ॥ ೭ ॥

ವರ್ಷತ್ರಯಾವಧಿ ತಥಾ ಗುರುಶಿಷ್ಯೌ ತಥಾ ಸ್ಥಿತೌ ।
ತಚ್ಛೃಣ್ವಂತಶ್ಚ ಪಶ್ಯಂತಃ ಸರ್ವೇ ಲೋಕಾಃ ಸುವಿಸ್ಮಿತಾಃ ॥ ೮ ॥

ತತಃ ಶ್ರೀ ಲಲಿತಾದೇವೀ ಕಾಮೇಶ್ವರಸಮನ್ವಿತಾ ।
ಪ್ರಾದುರ್ಭೂತಾ ಹಯಗ್ರೀವಂ ರಹಸ್ಯೇವಮಚೋದಯತ್ ॥

॥ ಶ್ರೀ ದೇವ್ಯುವಾಚ ॥

ಅಶ್ವಾನನಾವಯೋಃ ಪ್ರೀತಿಃ ಶಾಸ್ತ್ರವಿಶ್ವಾಸಿನಿ ತ್ವಯಿ ।
ರಾಜ್ಯಂ ದೇಯಂ ಶಿರೋ ದೇಯಂ ನ ದೇಯಾ ಷೋಡಶಾಕ್ಷರೀ ॥

---

೭. ಪೂರ್ವದಲ್ಲಿ ಲಲಿತಾಂಬಿಕೆಯು ತನಗೆ ಮಾಡಿರುವ ಆಜ್ಞೆಯನ್ನು ಸ್ಮರಿಸಿಕೊಂಡು ಸುಮ್ಮನಿದ್ದನು. ಅಗಸ್ತ್ಯಮುನಿಯು ಗುರುವನ್ನು ನಮಸ್ಕರಿಸಿ ಅವನ ಚರಣಗಳನ್ನು ಬಿಡದೆ ನಿಂತುಕೊಂಡನು.

೮. ಹೀಗೆಯೇ ಗುರು-ಶಿಷ್ಯರು ಮೂರು ವರ್ಷಗಳಕಾಲ ಹಾಗೆಯೇ ನಿಂತರು. ಇದನ್ನು ಕಣ್ಣಿನಿಂದ ನೋಡಿದ ಮತ್ತು ಕಿವಿಯಿಂದ ಕೇಳಿದ ಎಲ್ಲ ಜನರು ಬಹಳ ಆಶ್ಚರ್ಯಗೊಂಡರು.

೯. ತರುವಾಯ ಶ್ರೀ ಲಲಿತಾ ದೇವಿಯು ಕಾಮೇಶ್ವರನ ಸಂಗಡ ಹಯಗ್ರೀವಮುನಿಗೆ ರಹಸ್ಯದಲ್ಲಿ ಪ್ರಾದುರ್ಭವಿಸಿ ( ಪ್ರತ್ಯಕ್ಷಳಾಗಿ ) ಮುನಿಯನ್ನು ಈ ರೀತಿಯಾಗಿ ಪ್ರೇರೇಪಿಸಿದಳು.

೧೦. ಶ್ರೀ ದೇವಿಯು ಈ ರೀತಿಯಾಗಿ ಹೇಳಿದಳು: ಹಯಗ್ರೀವ ಮುನಿಯೇ ! ಶಾಸ್ತ್ರಗಳಲ್ಲಿ ವಿಶ್ವಾಸವನ್ನು ಇಟ್ಟಿರುವ ನಿನ್ನಲ್ಲಿ ನಮಗೆ ಪ್ರೀತಿಯು ಸಹಜವಾಗಿರುವುದು. ರಹಸ್ಯವಾದ ಷೋಡಶಾಕ್ಷರೀ ಮಂತ್ರವಿದ್ಯೆಯನ್ನು ರಾಜ್ಯವನ್ನಾಗಲೀ, ಶಿರವನ್ನಾಗಲಿ ಕೊಟ್ಟಾದರೂ ರಕ್ಷಿಸಬೇಕು.

ಸ್ವಮಾತೃಜಾರವದ್ಗೋಪ್ಯಾ ವಿದ್ಯೈಷೇತ್ಯಾಗಮಾ ಜಗುಃ ।
ತತೋಽತಿಗೋಪನೀಯಾ ಮೇ ಸರ್ವಪೂರ್ತಿಕರೀ ಸ್ತುತಿಃ ॥೧೧॥

ಮಯಾ ಕಾಮೇಶ್ವರೇಣಾಪಿ ಕೃತಾ ಸಂಗೋಪಿತಾ ಭೃಶಮ್ ।
ಮದಾಜ್ಞಯಾ ವಚೋದೇವ್ಯಶ್ಚಕ್ರುರ್ನಾಮಸಹಸ್ರಕಮ್ ॥೧೨॥

ಆವಾಭ್ಯಾಂ ಕಥಿತಾ ಮುಖ್ಯಾ ಸರ್ವಪೂರ್ತಿಕರೀ ಸ್ತುತಿಃ ।
ಸರ್ವಕ್ರಿಯಾಣಾಂ ವೈಕಲ್ಯಪೂರ್ತಿರ್ಯಜ್ಜಪತೋ ಭವೇತ್ ॥೧೩॥

ಸರ್ವಪೂರ್ತಿಕರಂ ತಸ್ಮಾದಿದಂ ನಾಮ ಕೃತಂ ಮಯಾ ।
ತದ್ಬ್ರೂಹಿ ತ್ವಮಗಸ್ತ್ಯಾಯ ಪಾತ್ರಮೇವ ನ ಸಂಶಯಃ ॥೧೪॥

---

೧೧. ಪುತ್ರನು ಜಾರಿಣಿಯಾದ ತನ್ನ ಜನನಿಯ ಜಾರಪುರುಷನನ್ನು ಗೋಪ್ಯವಾಗಿಡುವಂತೆ ಈ ವಿದ್ಯೆಯನ್ನು ಗೋಪ್ಯವಾಗಿರಿಸಬೇಕೆಂದು ವೇದಗಳು ಹೇಳುತ್ತವೆ. ಆದುದರಿಂದ ಸಮಸ್ತ ಪುರುಷಾರ್ಥಗಳನ್ನು ಪೂರ್ತಿಗೊಳಿಸುವ ನನ್ನ ಸ್ತುತಿಪಾಠವು ಅತ್ಯಂತ ಗೋಪನೀಯವಾದುದು.

೧೨. ಈ ರಹಸ್ಯವಾದ ಸ್ತುತಿಯು ನನ್ನಿಂದಲೂ ಕಾಮೇಶ್ವರನಿಂದಲೂ ರಚಿಸಲ್ಪಟ್ಟಿದೆ. ಹಿಂದೆ ನನ್ನ ಆಜ್ಞಾವಶರಾಗಿ ವಾಗ್ದೇವಿಯರು ನಾಮ ಸಹಸ್ರ ಸ್ತುತಿಯನ್ನು ಮಾಡಿರುವರು.

೧೩. ಸಕಲ ಕರ್ತವ್ಯ ಪೂರ್ತಿಯನ್ನು ಉಂಟುಮಾಡುವ ಮುಖ್ಯವಾದ ಈ ಸ್ತುತಿಯು ನಮ್ಮಿಬ್ಬರಿಂದ ರಚಿತವಾಗಿರುವುದು. ಇದರ ಜಪ ಮಹಿಮೆಯು ಸಕಲ ಕರ್ಮಗಳಲ್ಲಿರುವ ನ್ಯೂನತೆಯನ್ನು ಹೋಗಲಾಡಿಸಿ ಪೂರ್ತಿಯನ್ನು ಕೊಡುವುದು.

೧೪. ಆದುದರಿಂದ ಈ ಸ್ತುತಿಗೆ "ಸರ್ವಪೂರ್ತಿಕರ" ಎಂದು ನಾಮವು ನನ್ನಿಂದ ಇರಿಸಲ್ಪಟ್ಟಿದೆ. ಅದನ್ನು ನೀನು ಅಗಸ್ತ್ಯಮುನಿಗೆ ಉಪದೇಶ ಮಾಡು. ಈ ಉಪದೇಶಕ್ಕೆ ಅಗಸ್ತ್ಯಮುನಿಯು ಪಾತ್ರನಾಗಿರುವನು, ಸಂಶಯ ಪಡಬೇಡ.

ಪತ್ನ್ಯಸ್ಯ ಲೋಪಾಮುದ್ರಾಖ್ಯಾ ಮಾಮುಪಾಸ್ತೇಽತಿಭಕ್ತಿತಃ ।
ಅಯಂ ಚ ನಿತರಾಂ ಭಕ್ತಸ್ತಸ್ಮಾದಸ್ಯ ವದಸ್ವ ತತ್ ॥೧೫॥

ಅಮುಂ ಚ ಮಾನಸ್ತ್ವತ್ಪಾದೌ ವರ್ಷತ್ರಯಮಸೌ ಸ್ಥಿತಃ ।
ಏತಜ್ಜ್ಞಾತುಮತೋ ಭಕ್ತ್ಯಾ ಹ್ಯೇದಮೇವ ನಿದರ್ಶನಮ್ ॥೧೬॥

ಚಿತ್ತಪರ್ಯಾಪ್ತಿರೇತಸ್ಯ ನಾನ್ಯಥಾ ಸಂಭವಿಷ್ಯತಿ ।
ಸರ್ವಪೂರ್ತಿಕರಂ ತಸ್ಮಾದನುಜ್ಞಾತೋ ಮಯಾ ವದ ॥೧೭॥

॥ ಸೂತ ಉವಾಚ ॥

ಇತ್ಯುಕ್ತ್ವಾಂತರಧಾದಂಬಾ ಕಾಮೇಶ್ವರಸಮನ್ವಿತಾ ।
ಅಥೋತ್ಥಾಪ್ಯ ಹಯಗ್ರೀವಃ ಪಾಣಿಭ್ಯಾಂ ಕುಂಭಸಂಭವಮ್ ॥

---

೧೫. ಇವನ ಪತ್ನಿಯಾದ ಲೋಪಾಮುದ್ರೆಯು ಅತ್ಯಂತ ಭಕ್ತಿಯಿಂದ ನನ್ನನ್ನು ಉಪಾಸನೆ ಮಾಡುತ್ತಾಳೆ. ಇವನು ನನ್ನಲ್ಲಿ ಅತಿಶಯಿತನಾದ ಭಕ್ತನಾಗಿರುವನು. ಆದುದರಿಂದ ಇವನಿಗೆ ಅದನ್ನು ಉಪದೇಶಮಾಡು.

೧೬. ಇವನು ಮೂರು ವರ್ಷಗಳಿಂದಲೂ ಭಕ್ತಿಯಿಂದ ಈ ಸ್ತುತಿಯನ್ನು ತಿಳಿಯಬೇಕೆಂಬ ಆಶೆಯಿಂದ ನಿನ್ನ ಪಾದಗಳನ್ನು ಬಿಡದೇ ನಿಂತಿರುವುದೇ ಇದಕ್ಕೆ ನಿದರ್ಶನವಾಗಿದೆ.

೧೭. ಇವನಿಗೆ ಇದನ್ನು ಉಪದೇಶಿಸಿದ ಹೊರತು ಈತನ ಚಿತ್ತಕ್ಕೆ ವಿಶ್ರಾಂತಿ ಉಂಟಾಗುವುದಿಲ್ಲ. ಆದ್ದರಿಂದ ನನ್ನ ಅನುಜ್ಞೆಯನ್ನು ಹೊಂದಿರುವ ನೀನು ಸರ್ವಪೂರ್ತಿಕರ ಸ್ತೋತ್ರವನ್ನು ಅವನಿಗೆ ಉಪದೇಶಮಾಡು.

೧೮. ಸೂತ ಮುನಿಯು ಮುಂದುವರಿಸಿ ಹೀಗೆ ಹೇಳಿದನು: ಈ ರೀತಿಯಾಗಿ ಜಗನ್ಮಾತೆಯು ಹೇಳಿ ಕಾಮೇಶ್ವರನ ಸಂಗಡ ಅದೃಶ್ಯಳಾದಳು, ಅನಂತರದಲ್ಲಿ ಹಯಗ್ರೀವ ಮುನಿಯು ಅಗಸ್ತ್ಯಮುನಿಯನ್ನು ತನ್ನ ಕೈಗಳಿಂದ ಹಿಡಿದು ಮೇಲಕ್ಕೆ ಎತ್ತಿದನು.

**ಸಂಸ್ಥಾಪ್ಯ ನಿಕಟೇ ವಾಚಮುವಾಚ ಭೃಶವಿಸ್ಮಿತಃ ।**

**॥ ಹಯಗ್ರೀವ ಉವಾಚ ॥**

**ಕೃತಾರ್ಥೋಽಸಿ ಕೃತಾರ್ಥೋಽಸಿ ಕೃತಾರ್ಥೋಽಸಿ**
**ಘಟೋದ್ಭವ ॥೧೯॥**

**ತ್ವತ್ಸಮೋ ಲಲಿತಾಭಕ್ತೋ ನಾಸ್ತಿ ನಾಸ್ತಿ ಜಗತ್ತ್ರಯೇ ।**
**ಯೇನಾಗಸ್ತ್ಯ ಸ್ವಯಂ ದೇವೀ ತವ ವಕ್ತವ್ಯಮನ್ವಶಾತ್ ॥೨೦॥**

**ಸಚ್ಛಿಷ್ಯೇಣ ತ್ವಯಾ ಚಾಹಂ ದೃಷ್ಟವಾನಸ್ಮಿ ತಾಂ ಶಿವಾಮ್ ।**
**ಯತಂತೇ ದರ್ಶನಾರ್ಥಾಯ ಬ್ರಹ್ಮವಿಷ್ಣ್ವೀಶಪೂರ್ವಕಾಃ ॥೨೧॥**

**ಅತಃ ಪರಂ ತೇ ವಕ್ಷ್ಯಾಮಿ ಸರ್ವಪೂರ್ತಿಕರಂ ಸ್ತವಮ್ ।**
**ಯಸ್ಯ ಸ್ಮರಣಮಾತ್ರೇಣ ಪರ್ಯಾಪ್ತಿಸ್ತೇ ಭವೇದ್ಧೃದಿ ॥೨೨॥**

---

೧೯. ಮತ್ತು ಅತಿಯಾಗಿ ವಿಸ್ಮಯಗೊಂಡು ಅವನನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಈ ವಚನವನ್ನು ಆಡಿದನು. ಹಯಗ್ರೀವ ಮುನಿಯು ಹೇಳಿರುವುದೇನೆಂದರೆ ಅಗಸ್ತ್ಯನೇ, ಕೃತಾರ್ಥನಾದೆ! ಕೃತಾರ್ಥನಾದೆ! ಕೃತಾರ್ಥನಾದೆ!!

೨೦. ಅಗಸ್ತ್ಯನೆ! ಮೂರು ಲೋಕಗಳಲ್ಲಿ ನಿನಗೆ ಸಮಾನನಾದ ಲಲಿತಾಂಬಾ ಭಕ್ತನು ಬೇರೆ ಇಲ್ಲ, ನಿನಗೋಸ್ಕರ ದೇವಿಯು ತಾನಾಗಿ ಬಂದು ನಿನಗೆ ಉಪದೇಶಿಸಬೇಕಾದುದದನ್ನು ನನಗೆ ಆಜ್ಞಾಪಿಸಿದಳು.

೨೧. ಸಚ್ಛಿಷ್ಯನಾದ ನಿನ್ನಿಂದ ನಾನು ಕೂಡ ಶಿವರೂಪಿಣಿಯಾದ ಜಗನ್ಮಾತೆಯನ್ನು ಸಾಕ್ಷಾತ್ಕರಿಸಿದೆನು. ಬ್ರಹ್ಮ, ವಿಷ್ಣು, ಮತ್ತು ಈಶ್ವರನೆಂಬ ತ್ರಿಮೂರ್ತಿಗಳೇ ಮುಂತಾದ ದೇವತೆಗಳು ಲಲಿತಾಂಬೆಯ ದರ್ಶನವನ್ನು ಹೊಂದಲು ಪ್ರಯತ್ನಿಸುತ್ತಿದ್ದಾರೆ.

೨೨. ಆದ್ದರಿಂದ ಉತ್ಕೃಷ್ಟವಾದ ಸರ್ವಪೂರ್ತಿಕರವೆಂಬ ದೇವೀ ಸ್ತೋತ್ರವನ್ನು ನಿನಗೆ ಹೇಳುತ್ತೇನೆ. ಇದನ್ನು ಶ್ರವಣಮಾಡಿದ ಮಾತ್ರದಿಂದ ನಿನ್ನ

**ರಹಸ್ಯನಾಮಸಾಹಸ್ರಾದಪಿ ಗುಹ್ಯತಮಂ ಮುನೇ ।**
**ಆವಶ್ಯಕಂ ತತೋಽಸ್ಯೇತಲ್ಲಲಿತಾಂ ಸಮುಪಾಸಿತುಮ್ ॥೨೩॥**

**ತದಹಂ ಸಂಪ್ರವಕ್ಷ್ಯಾಮಿ ಲಲಿತಾಂಬಾನುಶಾಸನಾತ್ ।**
**ಶ್ರೀಮತ್ಪಂಚದಶಾಕ್ಷರ್ಯಾಃ ಕಾದಿವರ್ಣಾನ್ ಕ್ರಮಾನ್ಮುನೇ ॥**

**ಪೃಥಗ್ವಿಂಶತಿನಾಮಾನಿ ಕಥಿತಾನಿ ಘಟೋದ್ಭವ ।**
**ಆಹತ್ಯ ನಾಮ್ನಾಂ ತ್ರಿಶತೀ ಸರ್ವಸಂಪೂರ್ತಿಕಾರಿಣೀ ॥೨೫॥**

**ರಹಸ್ಯಾತಿರಹಸ್ಯೈಷಾ ಗೋಪನೀಯಾ ಪ್ರಯತ್ನತಃ ।**
**ತಾಂ ಶೃಣುಷ್ವ ಮಹಾಭಾಗ ಸಾವಧಾನೇನ ಚೇತಸಾ ॥೨೬॥**

---

ಮನಸ್ಸಿನಲ್ಲಿ ಎಲ್ಲವನ್ನೂ ಶ್ರವಣ ಮಾಡಿದಂತೆ ವಿಜ್ಞಾನವು ಉದಯವಾಗಿ ವ್ಯಾಪಾರದಿಂದ ವಿಶ್ರಾಂತಿಯು ಲಭಿಸುವುದು.

೨೩. ಮುನಿಯೇ! ರಹಸ್ಯವಾದ ಸಹಸ್ರನಾಮ ಸ್ತೋತ್ರಕ್ಕಿಂತಲೂ ಇದು ಅತ್ಯಂತ ಗೋಪನೀಯವಾದುದು. ಲಲಿತಾ ದೇವಿಯನ್ನು ಉಪಾಸನೆ ಮಾಡಲು ಅದಕ್ಕಿಂತಲೂ ಇದು ಅತ್ಯಂತೋಪಯುಕ್ತವಾಗಿದೆ.

೨೪. ಮುನಿಯೆ, ಅದನ್ನು ನಾನು ಲಲಿತಾದೇವಿಯ ಆಜ್ಞಾನುಸಾರವಾಗಿ ನಿನಗೆ ಉಪದೇಶಿಸುತ್ತೇನೆ. ಅಗಸ್ತ್ಯನೆ, ಕ್ರಮವಾಗಿ ಶ್ರೀಮತ್ಪಂಚದಶಾಕ್ಷರೀ ವಿದ್ಯೆಯ ಕಾದಿವರ್ಣಗಳಿಂದ ಉಪಕ್ರಮವಾಗುವ ಪ್ರತ್ಯೇಕವಾದ ಇಪ್ಪತ್ತು ಇಪ್ಪತ್ತು ನಾಮಗಳು ಪಠಿಸಲ್ಪಟ್ಟಿವೆ.

೨೫. ಇವುಗಳನ್ನು ಒಟ್ಟುಗೂಡಿಸಿದರೆ ಸರ್ವಕಾರ್ಯ ಪೂರ್ತಿಯನ್ನು ಉಂಟುಮಾಡುವ ನಾಮತ್ರಿಶತಿಯು ಆಗುವುದು.

೨೬. ಇದು ಎಲ್ಲ ರಹಸ್ಯಕ್ಕಿಂತಲೂ ಅತ್ಯಂತ ರಹಸ್ಯವಾದುದು. ಇದನ್ನು ಪ್ರಯತ್ನ ಪೂರ್ವಕವಾಗಿ ರಹಸ್ಯವಾಗಿರುವಂತೆ ರಕ್ಷಿಸಬೇಕು. ಮಹಾ ಭಾಗ್ಯ ಶಾಲಿಯೆ! ಸಾವಧಾನವಾದ ಮನಸ್ಸಿನಿಂದ ಆ ನಾಮತ್ರಿಶತಿಯನ್ನು ಶ್ರವಣ ಮಾಡು.

ಕೇವಲಂ ನಾಮಬುದ್ಧಿಸ್ತೇ ನ ಕಾರ್ಯಾ ತೇಷು ಕುಂಭಜ ।
ಮಂತ್ರಾತ್ಮಕತ್ವಮೇತೇಷಾಂ ನಾಮ್ನಾಂ ನಾಮಾತ್ಮತಾಪಿ ಚ ॥
ತಸ್ಮಾದೇಕಾಗ್ರಮನಸಾ ಶ್ರೋತವ್ಯಂ ಚ ತ್ವಯಾ ಸದಾ ।

॥ ಸೂತ ಉವಾಚ ॥

ಇತ್ಯುಕ್ತ್ವಾ ತಂ ಹಯಗ್ರೀವಃ ಪ್ರೋಚೇ ನಾಮಶತತ್ರಯಮ್ ॥

---

೨೭. ಅಗಸ್ತ್ಯ ಮುನಿಯೇ ! ಈ ಮೂರುನೂರು ನಾಮಗಳಲ್ಲಿ ಕೇವಲ ನಾಮ ಮಾತ್ರವೆಂಬ ಭಾವನೆಯನ್ನು ಇಟ್ಟುಕೊಳ್ಳಬಾರದು. ಈ ಒಂದೊಂದು ನಾಮಗಳು ನಾಮರೂಪವಾಗಿದ್ದು ತ್ರಿಶತೀ ನಾಮ ಸ್ತೋತ್ರವಾಗುವಂತೆ ಇವು ಮಂತ್ರರೂಪವನ್ನು ಹೊಂದಿಕೊಂಡಿವೆ.

೨೮. ಆದುದರಿಂದ ನೀನು ಯಾವಾಗಲೂ ಇದನ್ನು ಏಕಾಗ್ರಚಿತ್ತದಿಂದ ಶ್ರವಣಮಾಡಬೇಕು. ಸೂತ ಮುನಿಯು ಮುಂದೆ ಈ ರೀತಿಯಾಗಿ ಹೇಳಿದನು:- ಹಯಗ್ರೀವ ಮುನಿಯು ಈ ರೀತಿಯಾಗಿ ಹೇಳಿ ಅಗಸ್ತ್ಯಮುನಿಯನ್ನು ಕುರಿತು ಮೂರುನೂರು ನಾಮಗಳನ್ನು ಕ್ರಮವಾಗಿ ಹೇಳಿದನು.



*

॥ ಶ್ರೀ ॥

# ॥ ಲಲಿತಾ ತ್ರಿಶತೀ ಭಾಷ್ಯಂ ॥

ವಂದೇ ವಿಘ್ನೇಶ್ವರಂ ದೇವಂ ಸರ್ವಸಿದ್ಧಿಪ್ರದಾಯಿನಮ್ ।
ವಾಮಾಂಕಾರೂಢವಾಮಾಕ್ಷೀಕರಪಲ್ಲವಪೂಜಿತಮ್ ॥ ೧ ॥

ಪಾಶಾಂಕುಶೇಕ್ಷುಸುಮರಾಜಿತಪಂಚಶಾಖಾಂ
ಪಾಟಲ್ಯಶಾಲಿಸುಷಮಾಂಚಿತಗಾತ್ರವಲ್ಲೀಮ್ ।
ಪ್ರಾಚೀನವಾಕ್ಸ್ತುತಪದಾಂ ಪರದೇವತಾಂ ತ್ವಾಂ
ಪಂಚಾಯುಧಾರ್ಚಿತಪದಾಂ ಪ್ರಣಮಾಮಿ ದೇವೀಮ್ ॥ ೨ ॥

---

೧. ಶ್ರೀಮಚ್ಛಂಕರ ಭಗವತ್ಪೂಜ್ಯಪಾದರು ಸ್ವೋಪಾಸ್ಯಪರದೇವತೆಯಾದ ಶ್ರೀ ಲಲಿತಾಂಬಿಕೆಯ ನಾಮತ್ರಿಶತೀ ಭಾಷ್ಯದ ಆದಿಯಲ್ಲಿ ಉಪಕ್ರಮಿಸಿದ ಗ್ರಂಥರಚನೆಯು ನಿರ್ವಿಘ್ನವಾಗಿ ಕೊನೆಗಾಣುವುದಕ್ಕೋಸ್ಕರ ಶಿಷ್ಟಸಂಪ್ರದಾಯವನ್ನು ಅನುಸರಿಸಿ ಮಂಗಲ ಪದ್ಯವನ್ನು ಪಠಿಸುತ್ತಾರೆ. ಭಕ್ತರಿಗೆ ಸಕಲ ಇಷ್ಟಸಿದ್ಧಿಯನ್ನು ಉಂಟುಮಾಡುವವನೂ, ವಾಮಭಾಗದ ಅಂಕದಲ್ಲಿ ಕುಳಿತಿರುವ ಸುಂದರಿಯಾದ ಸತಿಯ ಹಸ್ತವೆಂಬ ಕಮಲದಿಂದ ಸತ್ಕರಿಸಲ್ಪಟ್ಟವನೂ ಮತ್ತು ಸರ್ವ ಕಾರ್ಯಗಳಲ್ಲಿ ಉಂಟಾಗುವ ವಿಘ್ನಗಳನ್ನು ದೂರಮಾಡುವ ವಿಶಿಷ್ಟ ಫಲದಾನಶಕ್ತಿಯುಳ್ಳವನೂ ಆದ ಗಣೇಶದೇವನನ್ನು ನಮಸ್ಕರಿಸುತ್ತೇನೆ.

೨. ವಿಘ್ನೇಶ್ವರನನ್ನು ನಮಸ್ಕರಿಸಿದ ತರುವಾಯ ತಮ್ಮ ಉಪಾಸ್ಯಳಾದ ದೇವಿಯ ವಂದನಪರವಾಗಿ ದ್ವಿತೀಯ ಮಂಗಳಪದ್ಯವನ್ನು ಪಠಿಸಿರುವರು. ಪಾಶ, ಅಂಕುಶ, ಇಕ್ಷುದಂಡ, ಕಮಲಪುಷ್ಪಗಳಿಂದ ಅಲಂಕರಿಸಲ್ಪಟ್ಟ ಹಸ್ತಗಳುಳ್ಳ, ರಕ್ತವರ್ಣಮಯವಾದ ಕಾಂತಿಯಿಂದ ಶ್ಲಾಘ್ಯವಾಗಿರುವ ಲತೆಯಂತೆ

**ಲೋಪಾಮುದ್ರಾಪತಿಂ ನತ್ವಾ ಹಯಗ್ರೀವಮುಪೀಶ್ವರಮ್ ।**
**ಶ್ರೀವಿದ್ಯಾರಾಜಸಂಸಿದ್ಧಿ ಕಾರಿಪಂಕಜವೀಕ್ಷಣಾಮ್ ॥ ೩ ॥**

**ವಿಸ್ತಾರಿತಾಂ ಬಹುವಿಧಾಂ ಬಹುಭಿಃ ಕೃತಾಂ ಚ**
**ಟೀಕಾಂ ವಿಲೋಕಯಿತುಮಕ್ಷಮತಾಂ ಜನಾನಾಮ್ ।**
**ತತ್ರತ್ಯಸರ್ವಪದಯೋಗವಿವೇಕಭಾನುಂ**
**ತುಷ್ಟ್ಯೈ ಕರೋಮಿ ಲಲಿತಾ ಪದಭಕ್ತಿಯೋಗಾತ್ ॥ ೪ ॥**

---

ಕೋಮಲ ಮತ್ತು ಕೃಶವಾದ ದೇಹವುಳ್ಳ, ಅನಾದಿಯಾಗಿರುವ ವೇದವಾಕ್ಯಗಳಿಂದ ಸ್ತುತಿಸಲ್ಪಟ್ಟ ಚರಣಗಳುಳ್ಳ, ಕಾಮದೇವನಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ಮತ್ತು ಪರದೇವತೆಯಾದ ಲಲಿತಾದೇವಿಯನ್ನು ನಮಸ್ಕರಿಸುತ್ತೇನೆ.

೩. ಮುಂದೆ ಗುರು ನಮಸ್ಕಾರಪರವಾದ ಮಂಗಲಶ್ಲೋಕವನ್ನು ಪಠಿಸಿರುವರು. ಲೋಪಾಮುದ್ರಾ ಎಂಬ ಸತಿಯ ಪತಿಯಾದ ಆಗಸ್ತ್ಯ ಮುನಿ, ಮತ್ತು ಹಯಗ್ರೀವ ಮುನಿಗಳನ್ನು ನಮಸ್ಕರಿಸಿ ಹಾಗು ಶ್ರೀವಿದ್ಯಾಮಂತ್ರರಾಜದ ಸಿದ್ಧಿಯನ್ನುಂಟುಮಾಡುವ ಕಮಲ ಸಮಾನವಾದ ದರ್ಶನದಿಂದ ಕೂಡಿದ ಕಾಮೇಶ್ವರನನ್ನು ವಂದಿಸಿ ಭಾಷ್ಯ ಗ್ರಂಥವನ್ನು ರಚಿಸುವೆನು.

೪. ಹಿಂದೆ ಅನೇಕ ಪೂರ್ವಾಚಾರ್ಯರು ಅನೇಕ ವಿಧವಾಗಿ ರಚಿಸಿರುವ ವಿಸ್ತಾರವಾದ ಟೀಕಾ ಗ್ರಂಥಗಳನ್ನು ನೋಡಲು ಅಶಕ್ತರಾದ ಜನಗಳಿಗೆ ಲಲಿತಾ ತ್ರಿಶತೀ ನಾಮಸ್ತೋತ್ರದಲ್ಲಿ ಸೇರಿದ ಸಮಸ್ತ ಪದಗಳ ಅವಯವಾರ್ಥಗಳನ್ನು ತಿಳಿಸುವ ವಿವೇಕದಲ್ಲಿ ಸೂರ್ಯನಂತಿರುವ ಭಾಷ್ಯ ಗ್ರಂಥವನ್ನು ಶ್ರೀ ಲಲಿತಾಂಬಾ ದೇವಿಯ ಚರಣಾರವಿಂದಗಳಲ್ಲಿಟ್ಟಿರುವ ಭಕ್ತಿ ಯೋಗದಿಂದ ಪರವಶನಾಗಿ ಅಂಬಾತೃಪ್ತಿಗೋಸ್ಕರ ರಚಿಸುತ್ತೇನೆ.



**ಕಕಾರರೂಪಾ ಕಲ್ಯಾಣೀ ಕಲ್ಯಾಣಗುಣಶಾಲಿನೀ ।**
**ಕಲ್ಯಾಣಶೈಲನಿಲಯಾ ಕಮನೀಯಾ ಕಲಾವತೀ ॥**

## ೧. ಓಂ ಕಕಾರರೂಪಾಯೈ ನಮಃ

ಬಹುಕಾಲಂ ಸುಭಕ್ತಿಮಹಿಮ್ನಾ ಗುರುಪಾದಾಂಬುಜಮವಲಂಬ್ಯ ಸ್ಥಿತಾಯ ಕುಂಭಯೋನಿಮುನಯೇ ಶಿವದಂಪತಿಕೃತನಾಮಶತತ್ರಯೋಕ್ತೌ ಪ್ರೇರಿತೋ ಹಯಗ್ರೀವ ಉವಾಚ.

ಕಕಾರರೂಪೇತಿ ಕಕಾರಃ ಕವರ್ಣಃ ರೂಪಂ ಜ್ಞಾಪಕವಿಶೇಷಣಂ ಯಸ್ಯಾಸ್ಸಾ ತಥಾ । ಕಾದಿವಿದ್ಯಾವಿಗ್ರಹೇತ್ಯರ್ಥಃ । ಅಥವಾ ಕಕಾರಃ ರೂಪಂ ವಾಚಕಂ ಯೇಷಾಂ ತೇ ಕಕಾರರೂಪಾಃ ಹಿರಣ್ಯಗರ್ಭಃ ಉದಕಂ ಉತ್ತಮಾಂಗಂ ಸುಖಾದಯಶ್ಚ । ಹಿರಣ್ಯಗರ್ಭನಿಷ್ಠಜಗದ್ಧಾರಕತ್ವಜಗತ್ಕಾರಕತ್ವಾದಿ

---

೧. ಸೂತಮುನಿಯು ಹೀಗೆ ಹೇಳಿದನು :- ಅನೇಕ ಕಾಲ ಪರಭಕ್ತಿಯಿಂದ ಗುರುಪಾದಕಮಲಗಳನ್ನು ಅವಲಂಬಿಸಿದ್ದ ಅಗಸ್ತ್ಯಮುನಿಗೆ ಶಿವದಂಪತಿ ರಚಿತವಾದ ಲಲಿತಾನಾಮತ್ರಿಶತೀ ಸ್ತೋತ್ರವನ್ನು ಉಪದೇಶಿಸಲು ದೇವಿಯಿಂದ ಪ್ರೇರೇಪಿಸಲ್ಪಟ್ಟ ಹಯಗ್ರೀವ ಮುನಿಯು ಅದನ್ನು ಉಪದೇಶಮಾಡಲು ಉಪಕ್ರಮಿಸಿದನು. ದೇವಿಯು ''ಕ''ಎಂಬ ವರ್ಣವು ಬೋಧಕ ವಿಶೇಷಣವುಳ್ಳವಳಾಗಿ ಇರುವಳು. ಎಂದರೆ ಕಕಾರವು ಆದಿಯಲ್ಲಿರುವ ಬೀಜಾಕ್ಷರ ಮಯವಾದ ಮಂತ್ರಶರೀರವುಳ್ಳವಳು ಎಂದು ತಾತ್ಪರ್ಯವು. ಅಥವಾ ಕ ವರ್ಣರೂಪವಾದ ಶಬ್ದವು ಬ್ರಹ್ಮ, ನೀರು, ಶಿರ, ಮತ್ತು ಸುಖವೆಂಬ ಅರ್ಥಗಳಿಗೆ ವಾಚಕವಾಗಿದೆ. ಆದ್ದರಿಂದ ಕಕಾರವು ವಾಚಕವಾಗಿ ಇರುವ ಅರ್ಥಗಳು ಬ್ರಹ್ಮಮುಂತಾದುವುಗಳಾಗಿವೆ. ಬ್ರಹ್ಮಮುಂತಾದ ಅರ್ಥಗಳಲ್ಲಿರುವ ಅಸಾಧಾರಣ ಗುಣಗಳು ದೇವಿಯಲ್ಲಿರುವುದರಿಂದ ದೇವಿಯು ಬ್ರಹ್ಮಾದಿರೂಪಳಾಗುವಳು. ಹಿರಣ್ಯಗರ್ಭನಲ್ಲಿ ಜಗದ್ಧಾರಕತ್ವ, ಜಗತ್ಕರ್ತೃತ್ವಗಳು ಇರುವಂತೆ ವರ್ಣಮಾಲೆಯಲ್ಲಿ ವ್ಯಂಜನವರ್ಣಗಳಿಗೆ ಆದಿಯಾದ ಕಕಾರದಲ್ಲಿಯೂ ಇರುವುವು. ಜಲ

ಗುಣವತ್ತ್ವಂ ಕಕಾರಸ್ಯ ವ್ಯಂಜನಾದಿಮವರ್ಣತ್ವೇನ ವರ್ತತ ಇತಿ ತದ್ವಾಚ್ಯ ಇತಿ ತಥಾ । ಉದಕನಿಷ್ಠಾನ್ನಾದಿದ್ವಾರಾ ಜಗತ್ಸಂಜೀವನಹೇತುತ್ವಮಪಿ ಕಕಾರಸ್ಯ ವಿದ್ಯಾಗ್ರಿಮವರ್ಣತಯಾಸ್ತೀತಿ ತದ್ರೂಪಾ ವಾ । ಸರ್ವೇಷಾಂ ಪ್ರಾಣಿನಾಂ ಶಿರಸ್ಯಮೃತಮಸ್ತೀತಿ ಯೋಗಮಾರ್ಗೇಣ ಕುಂಡಲಿನೀಗಹ್ವರೇ ತತ್ರತ್ಯತತ್ಪ್ರವಾಹಾಪ್ಲುತಯೋಗಿನಾಮೀಶ್ವರಸಾಮ್ಯಂ ಜಾಯತ ಇತಿ ಯೋಗಶಾಸ್ತ್ರೇಷು ಪ್ರಸಿದ್ಧಮ್ । ತದ್ವತ್ಕವರ್ಣಃ ಮಂತ್ರಾದಿಮಭಾಗಸ್ಥಃ ತತ್ಪುರಶ್ಚರ್ಯಾಪರಾಯಣಾನಾಂ ಶಿವಭಾವಮೇವ ಯಚ್ಛತೀತಿ ವಾ ತದ್ರೂಪೇತ್ಯರ್ಥಃ ।

## ೨. ಓಂ ಕಲ್ಯಾಣ್ಯೈ ನಮಃ

ಕಲ್ಯಾಣೀತಿ । ಕಲ್ಯಾಣಾನಿ ಸುಖಾನಿ ಯುವಸಾರ್ವಭೌಮಾ-

---

ದಲ್ಲಿ ಸಸ್ಯವನ್ನು ಪೋಷಣಮಾಡುವುದರ ಮೂಲಕ ಜಗತ್ಸಂಜೀವನ ಕಾರಿತ್ವವು ಇರುವಂತೆ ಮಂತ್ರದ ಆದ್ಯಕ್ಷರವಾದ ಕಕಾರದಲ್ಲಿಯೂ ಇದೆ. ಸರ್ವಪ್ರಾಣಿಗಳ ಶಿರಸ್ಸಿನಲ್ಲಿ ಅಮೃತವು ಇರುವುದರಿಂದ ಯೋಗಾಭ್ಯಾಸ ಬಲದಿಂದ ಕುಂಡಲಿನೀ ಉತ್ಥಾಪನ ಮೂಲಕ ಶಿರಸ್ಸನ್ನು ಹೊಂದಿ ಅಲ್ಲಿರುವ ಅಮೃತ ಪ್ರವಾಹದಿಂದ ನೆನೆದಿರುವ ಯೋಗಿಗಳ ಜೀವಾತ್ಮಕ್ಕೆ ಈಶ್ವರಸಾಮ್ಯವು ಉಂಟಾಗುವುದೆಂದು ಯೋಗಶಾಸ್ತ್ರದಲ್ಲಿ ಹೇಳಿರುವುದು. ಅದರಂತೆ ಲಲಿತಾ ಮಂತ್ರದ ಆದಿಯಲ್ಲಿರುವ ಕಕಾರವು ಪುರಶ್ಚರಣದಲ್ಲಿ ಆಸಕ್ತಿಯುಳ್ಳವರಿಗೆ ಶಿವಭಾವವನ್ನು ಕೊಡುವುದಾಗಿದೆ. "ಕಂ ಬ್ರಹ್ಮ ಖಂ ಬ್ರಹ್ಮ" ಎಂಬ ಶ್ರುತಿ ಪ್ರಮಾಣವನ್ನು ಅನುಸರಿಸಿ ದಹರಾಕಾಶ ಬ್ರಹ್ಮರೂಪವಾದ ಸುಖವು ಪರಮಪ್ರೇಮಾಸ್ಪದವಾಗಿ ಮುಮುಕ್ಷುಗಳಿಗೆ ಅಭಿಲಾಷ ಗೋಚರವಾಗಿರುವುದು. ಕಕಾರವು ಅತ್ಯಂತ ಪ್ರೇಮಾಸ್ಪದವಾದ ಮೂಲ ಮಂತ್ರದ ಆದಿ ಅಕ್ಷರವಾದ್ದರಿಂದ ಪೂಜ್ಯವಾದುದರಿಂದ ಅಭಿಲಾಷಗೋಚರವಾಗುವುದು. ಈ ರೀತಿಯಾಗಿ ಬ್ರಹ್ಮಾದಿಗಳನ್ನು ಬೋಧಿಸುವ ಕಕಾರ ದೊಡನೆ ಐಕ್ಯವನ್ನು ಮಂತ್ರ ಶರೀರಳಾದ ದೇವಿಯು ಹೊಂದಿರುವಳು.

೨. ಕಲ್ಯಾಣವೆಂದರೆ ಸುಖ ಎಂದು ಅರ್ಥ. ಆ ಸುಖಗಳು ಯುವ ಸಾರ್ವ

ನಂದಾದಾರಭ್ಯ ಬ್ರಹ್ಮಾನಂದಪರ್ಯಂತಂ ತೈತ್ತಿರೀಯಕಾದೌ ಪ್ರತಿಪಾದಿತಾನಿ ತತ್ತದುಪಾಧಿಭೇದೇಷ್ವವಚ್ಛಿನ್ನಸ್ವರೂಪತಯಾ ತಾನಿ ಕಲ್ಯಾಣಶಬ್ದವಾಚ್ಯಾನಿ।ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತೀತಿ ಶ್ರುತೇಃ। ಸಮಷ್ಟಿವ್ಯಷ್ಟಿಮತ್ತ್ವಂ ಉಪಹಿತಸ್ವರೂಪೇಣ ಸಂಭವತೀತಿ ಮತುಪಃ ಸಮಾಸೋಽಪಪತ್ತಿಃ। ತಥಾ ಚ ರಾಹೋಃ ಶಿರ ಇತಿವತ್ ಸಮಾಸಾಂತರ್ಗತಷಷ್ಠ್ಯರ್ಥಭೇದಸ್ಯ ಅವಿವಕ್ಷಿತತಯಾ ಆನಂದೈಕವಿಗ್ರಹವತೀತ್ಯರ್ಥಃ। ವಿಜ್ಞಾನಮಾನಂದಂ ಬ್ರಹ್ಮೇತಿ ಶ್ರುತ್ಯುಕ್ತಬ್ರಹ್ಮಸ್ವರೂಪವತೀತ್ಯರ್ಥಃ।

## ೩. ಓಂ ಕಲ್ಯಾಣಗುಣಶಾಲಿನ್ಯೈ ನಮಃ।

ಕಲ್ಯಾಣಗುಣಶಾಲಿನೀತಿ। ಕಲ್ಯಾಣಾ ಗುಣಾಃ ಸುಖಕರ್ತಾರೋ

---

ಭೌಮಸುಖ ಮೊದಲುಗೊಂಡು ಬ್ರಹ್ಮಾನಂದ ಪರ್ಯಂತ ವಿವಿಧವಾಗಿ ತೈತ್ತಿರೀಯಾದಿ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಅವು "ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪ ಜೀವಂತಿ" ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಉತ್ತಮಾಧಮ ಭಾವವನ್ನು ಹೊಂದಿದ ಆಯಾಯ ಉಪಾಧಿಗಳಿಂದ ಪರಿಚ್ಛಿನ್ನ ರೂಪವನ್ನು ಹೊಂದಿದ ಪರಿಪೂರ್ಣಾನಂದದ ರೂಪಗಳಾಗಿವೆ. ಅವುಗಳನ್ನು ಕಲ್ಯಾಣ ಶಬ್ದವು ಬೋಧಿಸುವುದು. ಪರಿಪೂರ್ಣ ಬ್ರಹ್ಮಸ್ವರೂಪದಲ್ಲಿ ಉಪಾಧಿಯೋಗದಿಂದ ಸಮಷ್ಟಿವ್ಯಷ್ಟಿ ರೂಪಗಳನ್ನು ಹೊಂದಿದ ಸುಖಗಳ ಆಧಾರತ್ವವು ಸಂಭವಿಸುವುದರಿಂದ ಆಧಾರತ್ವ ಅರ್ಥವನ್ನು ಬೋಧಿಸುವ ಮತುಪ್ ಪ್ರತ್ಯಯಾಂತ ಸಮಾಸವು ಅಬಾಧಿತವಾಗಿರುವುದು. ಆನಂದಸ್ಯ—ಮಾತ್ರಾಂ ಎಂದು ಶ್ರುತಿಯಲ್ಲಿ ಆನಂದದ ಲೇಶವೆಂದು ಒಂದುಸ್ವರೂಪದಲ್ಲಿ ಭೇದಭಾವನೆಯನ್ನು ಉಂಟುಮಾಡಿರುವುದು ಶಿರೋಮಾತ್ರ ಸ್ವರೂಪನಾದ ರಾಹುವನ್ನು ಕಂಡು ರಾಹುವಿನ ತಲೆ ಎಂದು ಪ್ರಯೋಗದಿಂದ ಭೇದಭಾವನೆಯನ್ನು ತೋರಿಸುವಂತೆ ಔಪಚಾರಿಕವಾದುದು. ಭೇದವನ್ನು ವಾಸ್ತವನಾಗಿ ಪ್ರತಿಪಾದಿಸುವ ತಾತ್ಪರ್ಯವಿಲ್ಲ. ಆದ್ದರಿಂದ ದೇವಿಯು "ವಿಜ್ಞಾನಮಾನಂದಂ ಬ್ರಹ್ಮ" ಎಂಬ ಶ್ರುತಿಯಲ್ಲಿ ಹೇಳಿದ ಪರಬ್ರಹ್ಮಸ್ವರೂಪ ಲಕ್ಷಣವಾದ ಆನಂದರೂಪವಾದ ಆಕಾರವುಳ್ಳವಳು-ಎಂದು ತಾತ್ಪರ್ಯವು.

೩. ಕಲ್ಯಾಣ ಶಬ್ದವು ಸುಖಕರ ಎಂಬ ಅರ್ಥವನ್ನು ಬೋಧಿಸುವುದು.

**ಯೇ ಗುಣಾಃ ಸತ್ಯಕಾಮಸತ್ಯಸಂಕಲ್ಪಸರ್ವಾಧಿಪತ್ಯಸರ್ವೇಶಾನತ್ವಾಮನೀತ್ವಸಂಯದ್ವಾಮತ್ವಾದಯಃ। ತೇ ಅಸ್ಯಾಃ ಶಾಲಂತ ಇತಿ ತಥಾ। ಏನಾಂ ಶೋಭಯಂತೀತಿ ವಾ। ತೈಃ ಶಾಲ್ಯತ ಇತಿ ವಾ। ಕಲ್ಯಾಣಗುಣಶಾಲಿನೀ। ತಥಾ ಚ ಕಲ್ಯಾಣಾಶ್ಚ ತೇ ಗುಣಾಶ್ಚ ಕಲ್ಯಾಣಗುಣಾಃ ಅಸ್ಯಾಃ ಶಾಲಂತ ಇತಿ ಕಲ್ಯಾಣಗುಣಾಃ ಶಾಲಯಂತ್ಯೇನಾಮಿತಿ ವಾ ಕಲ್ಯಾಣಗುಣಶಾಲಿನೀ। ಅಸ್ಮಿನ್ ಸಮಾಸೇ ದೇವತಾಯಾಂ ಪರಾಧೀನಗುಣವತ್ತ್ವಂ ಸ್ವತಃಸಿದ್ಧಚೈತನ್ಯತ್ವಂಚ ಸ್ಫುರಿತಮ್। ಕಲ್ಯಾಣಗುಣೈಃ ಶಾಲ್ಯತ ಇತ್ಯತ್ರ ತು ಗುಣವತ್ತ್ವಮಾತ್ರಂ ದೇವತಾಯಾಃ ಪ್ರತೀಯತೇ। ತಸ್ಯೋಪಾಧಿತ್ವಂ ವೈದಿಕಮಪಿ ಸ್ತುತೌ ತದಪ್ರಥನಂ ನ ದೋಷಾಯ। ಯದಿ ಗುಣಾನಾಮಾರೋಪಿತತ್ವೇನ ತತ್ಸಂಕೀರ್ತನಸ್ಯ ಭೇದಬುದ್ಧಿಸಮಯೇ ತತ್ಕೃಪಾಪ್ರಾಪ್ತಿಹೇತುತ್ವೇನ ಆವಶ್ಯಕತ್ವಂ, ತಥಾಪಿ ತದಪವಾದ**

---

ದೇವಿಯ ಸುಖಕರವಾದ ಅಮೋಘಕಾಮ, ಸಂತ್ಯಸಂಕಲ್ಪ, ಸರ್ವಆಧಿಪತ್ಯ, ಸರ್ವನಿಯಾಮಕತ್ವ, ಕರ್ಮಫಲದಾತೃತ್ವ, ಸರ್ವಕಾಮಾವಾಪ್ತಿ ಮುಂತಾದ ಸಮಸ್ತ ಗುಣಗಳು ಪ್ರಕಾಶಿಸುವುವು. ಅಥವಾ ದೇವಿಯನ್ನು ಆ ಗುಣಗಳು ಪ್ರಕಾಶಪಡಿಸುವುವು. ಅಥವಾ ಗುಣಗಳಿಂದ ದೇವಿಯು ಪ್ರಕಾಶಿಸಲ್ಪಡುವಳು ಎಂದು ಕಲ್ಯಾಣ ಗುಣಾಃ ಶಾಲಂತೇ ಅಸ್ಯಾಃ ಇತಿ ಶಾಲಯಂತಿ ಏನಾಮಿತಿ, ಕಲ್ಯಾಣ ಗುಣೈಃ ಶಾಲ್ಯತೇ ಎಂದು ನಾನಾವಿಧದ ವಿಗ್ರಹಗಳಿಂದ ಅರ್ಥವು ತೋರುವುದು. ಇವುಗಳಲ್ಲಿ ಮೊದಲನೆಯ ಎರಡು ಬಗೆಯ ಸಮಾಸಗಳಲ್ಲಿ ದೇವತೆಯು ಸ್ವತಃ ಶುದ್ಧ ಚೈತನ್ಯರೂಪಳೂ ಪರಾಧೀನಗುಣಗಳಿಂದ ಕೂಡಿರುವಳೂ ಎಂದು ಅರ್ಥವಾಗುವುದು, ಮೂರನೆಯ ವಿಗ್ರಹದಲ್ಲಿ ದೇವತೆಯಲ್ಲಿ ಗುಣಗಳ ಸಂಪರ್ಕವು ತೋರುವುದು. ಅದು ಶ್ರುತಿಪ್ರಮಾಣದಿಂದ ಔಪಾಧಿಕವೆಂದು ಸ್ಥಿರವಾಗಿದ್ದರೂ ಅದನ್ನು ಈ ಸ್ತುತಿಮಾಡುವ ಸಂದರ್ಭದಲ್ಲಿ ಉಲ್ಲೇಖಮಾಡದಿರುವುದು ನ್ಯೂನತಾಕರವಲ್ಲ. ಭೇದ ಬುದ್ಧಿಯಿಂದ ಮಾಡುವ ಸ್ತುತಿಯಲ್ಲಿಯೂ ಗುಣ ಸಂಪರ್ಕವು ಆರೋಪಿತವೆಂದು ಹೇಳುವುದು ದೇವೀಕೃಪಾ ಪ್ರಾಪ್ತಿಗೆ ಹೇತುವಾಗುವುದಾದರೂ ಆ ಗುಣಗಳನ್ನು ಅಪವಾದಮಾಡಿ ಶುದ್ಧ ಚೈತನ್ಯಾಭೇದದ ಅನುಸಂಧಾನವೆಂಬ

ಪುರಸ್ಸರಂ ಶುದ್ಧಚೈತನ್ಯಾಭೇದಧ್ಯಾನರೂಪಮುಖ್ಯಭಜನಂ ಮುಖ್ಯಮೇವೇತಿ ಸಂಪಾದಯಿತುಂ ಸ್ವಗುರೂಪದಿಷ್ಟಮಾರ್ಗೇಣ ಸುಕರಮೇವೇತಿ ನಾತಿವಿಸ್ತಾರ್ಯತೇ ।

೪. ಓಂ ಕಲ್ಯಾಣಶೈಲನಿಲಯಾಯೈ ನಮಃ ।

ಕಲ್ಯಾಣಶೈಲನಿಲಯೇತಿ । ಶಿಲಾನಾಂ ವಿಕಾರಃ ಶೈಲಃ ಶಿಲಾಘನಇತ್ಯರ್ಥಃ । ಕಲ್ಯಾಣಂ ಸುಖಮೇವ ಶೈಲಃ ಘನೀಭೂತ ಇತ್ಯರ್ಥಃ । ತಸ್ಮಿನ್ ಕಲ್ಯಾಣಶೈಲೇ ಸ್ವಸ್ವರೂಪೇ ಆನಂದಘನೇ ನಿಲಯತಿ ತಿಷ್ಠತೀತಿ ಕಲ್ಯಾಣಶೈಲನಿಲಯಾ । ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನೀತಿ ಹೋವಾಚ । ಇತಿ ಶ್ರುತೇಃ । ದೇವ ದತ್ತಃ ಸ್ವಸ್ಮಿನ್ನೇವ ಸ್ವಯಂ ವರ್ತತ ಇತಿ ಲೌಕಿಕಪ್ರಯೋಗಾಚ್ಚ ದೇವತಾಯಾಃ ಸ್ವಸ್ವರೂಪೇ ಸ್ವಾವಸ್ಥಾನಂ

---

ಭಜನವು ಮುಖ್ಯವಾದುದು. ಅದನ್ನು ಸದ್ಗುರೂಪದೇಶ ಮಾರ್ಗದಿಂದ ಸಂಪಾದಿಸಲು ಸಾಧ್ಯವಿರುವುದು. ಇದನ್ನು ಹೆಚ್ಚಾಗಿ ಇಲ್ಲಿ ವಿವರಿಸುವುದಿಲ್ಲ.

೪. ಶಿಲೆಗಳ ಘನಾವಸ್ಥಾರೂಪವಾದ ವಿಕಾರವು ಶೈಲವೆನಿಸುವುದು. ದೇವಿಯು ಘನಾಕಾರವನ್ನು ಹೊಂದಿದ ಸುಖವೆಂಬ ಸ್ವಸ್ವರೂಪವಾದ ಕಲ್ಯಾಣಶೈಲದಲ್ಲಿ ಇರುವವಳು. ಈ ಅರ್ಥವು "ಕಲ್ಯಾಣಶೈಲೇ ಆನಂದಘನೇ ನಿಲಯತಿ ತಿಷ್ಠತಿ" ಎಂಬ ಸಮಾಸದಿಂದ ಲಭ್ಯವಾಗುವುದು. ಸ್ವಸ್ವರೂಪದಲ್ಲಿ ಪರದೇವತೆಯು ಇರುವಳು ಎಂದು "ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ" ಎಂಬ ಪ್ರಶ್ನೋತ್ತರ ರೂಪವಾದ ಶ್ರುತಿ ವಾಕ್ಯದಿಂದ ತಿಳಿದುಬರುವುದು. ದೇವದತ್ತನು ತನ್ನಲ್ಲಿಯೇ ತಾನು ಇರುವನೆಂಬುದಾಗಿ ಸಾಮಾನ್ಯವಾಗಿ ಲೋಕಪ್ರಯೋಗವು ಇರುವಂತೆ ದೇವತೆಯು ಸ್ವಸ್ವರೂಪದಲ್ಲಿ ಇರುವುದೆಂಬುದು ವಿರುದ್ಧವಲ್ಲ, ಅಥವಾ ಶಿಲಾವಿಕಾರದಂತೆ ಘನಭಾವ ಹೊಂದಿರುವ ಕಲ್ಯಾಣವು ಕಲ್ಯಾಣಶೈಲವು. ಅದು ಆನಂದಮಯ ಕೋಶವು. ದೇವಿಯು ಅದನ್ನು ಭವನವನ್ನಾಗಿ ಕಲ್ಪಿಸಿಕೊಂಡಿರುವಳು ಎಂದು ಅರ್ಥವಾಗುವಂತೆ ಕಲ್ಯಾಣ ಶೈಲೋ ನಿಲಯೋ ಯಸ್ಯಾಃ ಎಂದು ಬಹುವ್ರೀಹಿ ಎಂಬ ಸಮಾಸವನ್ನು ಅಂಗೀಕರಿಸುವುದು ವಿರುದ್ಧವಲ್ಲ. ಆನಂದಮಯ ಕೋಶವನ್ನು ಅಧಿಕರಿಸಿ "ಬ್ರಹ್ಮ ಪುಚ್ಛಂ

ಯುಜ್ಯತ ಇತಿ। ಕಲ್ಯಾಣಮೇವ ಶೈಲವದ್ಘನೀಭೂತಂ ಕಲ್ಯಾಣ ಶೈಲಃ ಆನಂದಮಯಕೋಶಃ ಸ ನಿಲಯಂ ಯಸ್ಯಾಸ್ಸಾ ಇತಿ ಬಹುವ್ರೀಹಿಸಮಾಸೋ ನ ವಿರುದ್ಧಃ। ಬ್ರಹ್ಮ ಪುಚ್ಛಂ ಪ್ರತಿಷ್ಠೇತಿ ಉಕ್ತಶ್ರುತಿಪ್ರಾಮಾಣ್ಯಾತ್। ಅಥವಾ ಕಲ್ಯಾಣ ಶೈಲಃ ಮಹಾಮೇರುಃ ನಿಲಯಂ ಗೃಹಂ ಯಸ್ಯಾಸ್ಸಾ ತಥಾ ಸುಮೇರುಶೃಂಗಮಧ್ಯಸ್ಥೇತ್ಯರ್ಥಃ ॥

## ೫. ಓಂ ಕಮನೀಯಾಯೈ ನಮಃ।

ಕಮನೀಯೇತಿ ಪರಮಾನಂದ ಸ್ವರೂಪತ್ವೇನ ಪರಮಪ್ರೇಮಾಸ್ಪದಾ। ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್। ಯದೇಷ ಆಕಾಶ ಆನಂದೋ ನ ಸ್ಯಾದಿತಿ ಶ್ರುತೇಃ। ಸುಖಸ್ಯ ಮನೋಹರತ್ವೇನ ಸರ್ವೇಷಾಂವಿಷಯತ್ವವತ್ ಮಾಯಾವೃತಾನಾಂ ಸುಖಪ್ರಾಪಕತ್ವೇನ ಸ್ವಸ್ವೇಷ್ಟದೇವತಾ ಸುಪ್ರೀತ್ಯತಿಶಯೇನ

---

ಪ್ರತಿಷ್ಠಾ" ಎಂಬ ಶ್ರುತಿಯು ಹಿಂದೆ ವಿವರಿಸಿದ ಅರ್ಥವನ್ನು ಸೂಚಿಸುತ್ತಿದೆ. ಅಥವಾ ಕಲ್ಯಾಣ ಶೈಲ ವೆಂದರೆ ಪರ್ವತವು, ಅದು ಗೃಹವಾಗಿರುವವಳು. ಈ ಅರ್ಥವು "ಸುಮೇರುಮಧ್ಯಶೃಂಗಸ್ಥಾ" ಎಂಬ ದೇವೀನಾಮದಿಂದ ಪ್ರಸಿದ್ಧ ವಾಗಿರುವುದು.

೫. "ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನ ಸ್ಯಾತ್" ಎಂಬ ಶುತ್ರಿಯು ಆನಂದ ರೂಪವಾದ ವಸ್ತುವು ಜಗತ್ತಿಗೆ ಪ್ರತಿಷ್ಠಾ ರೂಪವಾಗಿಲ್ಲದಿದ್ದರೆ ಯಾವ ಪ್ರಾಣಿಯು ಚಲನ ಮತ್ತು ನಿಶ್ವಾಸಾದಿ ಕಾರ್ಯವನ್ನು ಆಚರಿಸಬಲ್ಲದು ? ಎಂದು ಬೋಧಿಸುತ್ತ ಬ್ರಹ್ಮವನ್ನು ಪರಮಾನಂದ ರೂಪವೆಂದು ತಿಳಿಸಿದೆ. ಆದ್ದರಿಂದ ದೇವಿಯು ಪರಮ ಪ್ರೇಮಾಸ್ಪದಳು. ಅಥವಾ ಮನೋಹರವಾದ ಸುಖವನ್ನು ಎಲ್ಲರೂ ಕೋರುತ್ತಿರುವಂತೆ ಮಾಯಾ ಪಾಶಬದ್ಧರಾದ ಜನಗಳು ಸುಖಪ್ರಾಪ್ತಿಗೋಸ್ಕರ ಸ್ವೇಷ್ಟ ದೇವತೆಯ ಪೂಜಾದಿಗಳನ್ನು ಭಕ್ತಿಯಿಂದ ಕೋರುವರು. ಅವರಿಗೆ ಇಷ್ಟ ಫಲವನ್ನು ಕೊಡುವ ದೇವತೆಯಾದ್ದರಿಂದ ಮನೋಹರಳು. ಅಥವಾ ತತ್ತ್ವಜ್ಞಾನಿಗಳ ದೃಷ್ಟಿಗೆ

**ತತ್ಪೂಜಾದೌ ಪ್ರವರ್ತಕಾಂ ತತ್ಫಲದಾನೇನ ಮನೋಹರ ತ್ವಾದ್ವಾ ಕಮನೀಯಾ। ಜ್ಞಾನಿನಾಮಾನಂದಘನೀಭಾವಾತ್ಮಕ ಸುಂದರಮೂರ್ತಿಮತ್ತ್ವಾಯಾ ವಾ ಕಮನೀಯಾ ॥**

## ೬. ಓಂ ಕಲಾವತ್ಯೈ ನಮಃ।

**ಕಲಾವತೀತಿ । ಕಲಾಃ ಶಿರಃಪಾಣ್ಯಾದ್ಯವಯವಾಃ ಚತುಷ್ಷಷ್ಟಿ ಕಲಾ ವಿದ್ಯಾರೂಪಾ ವಾ ಚಂದ್ರಕಲಾ ವಾ ಭಕ್ತಧ್ಯಾನಾಯ ಅಸ್ಯಾಃ ಸಂತೀತಿ ಕಲಾವತೀ**

---

ಪರಬ್ರಹ್ಮ ರೂಪಳಾದ ದೇವಿಯು ಆನಂದ ಘನೀಭಾವರೂಪವಾದ ಸುಂದರ ಮೂರ್ತಿಯಿಂದ ಪ್ರತ್ಯಕ್ಷಳಾಗುವುದರಿಂದ ಮನೋಹರಳಾಗಿರುವಳು.

೬. ದೇವಿಯ ಭಕ್ತರ ಧ್ಯಾನಕ್ಕೆ ಗೋಚರವಾಗುವ ದೇವಿಯ ಮೂರ್ತಿ ಯಲ್ಲಿ ಶಿರಸ್ಸು–ಪಾಣಿ ಮುಂತಾದ ಅವಯವಗಳು, ವಿದ್ಯಾರೂಪವಾದ ಚತುಃ ಷಷ್ಟಿ ಕಲೆಗಳು, ಅಥವಾ ಚಂದ್ರಕಲೆ ಇವುಗಳಿರುವುದರಿಂದ ದೇವಿಯು ಕಲಾವತಿ ಎನಿಸಿರುವಳು.

# ೨

**ಓಂ ಕಮಲಾಕ್ಷೀ ಕಲ್ಮಷಘ್ನೀ ಕರುಣಾಮೃತಸಾಗರಾ।**
**ಕದಂಬಕಾನನಾವಾಸಾ ಕದಂಬಕುಸುಮಪ್ರಿಯಾ**

## ೭. ಓಂ ಕಮಲಾಕ್ಷ್ಯೈ ನಮಃ।

ಕಮಲಾಕ್ಷೀತಿ। ಕಮಲೇ ಇವ ಅಕ್ಷಿಣೀ ಯಸ್ಯಾಸ್ಸಾ ತಥಾ। ಕಮಲಾಯಾಃ ಲಕ್ಷ್ಮ್ಯಾಃ ಅಕ್ಷಿಶಬ್ದೇನ ತನ್ನಿಮಿತ್ತಕಂ ಜ್ಞಾನಂ ಲಕ್ಷ್ಯತೇ। ವಿಷಯತಾಸಂಬಂಧೇನ ತದ್ವತೀತ್ಯರ್ಥಃ। ಕಮಲಾಯಾ ಐಹಿಕಾಮುಷ್ಮಿಕಶ್ರಿಯಃ ಹೇತುಭೂತೇ ಅಕ್ಷಿಣೀ ಅಸ್ಯಾಃ ಸ್ತ ಇತಿ ಸ್ವಕೀಯವೀಕ್ಷಣ ಮಾತ್ರೇಣ ಮಹದೈಶ್ವರ್ಯ ಪ್ರಾಪಿಕೇತಿ ಭಾವಃ।

## ೮. ಓಂ ಕಲ್ಮಷಘ್ನ್ಯೈ ನಮಃ।

ಕಲ್ಮಷಘ್ನೀತಿ। ಕಲ್ಮಷಾಣಿ ಪಾಪಾನಿ ಹಂತಿ ನಾಶಯತೀತಿ

---

೭. ಕಮಲಾಕ್ಷೀ ಶಬ್ದವು "ಕಮಲೆ ಇವ ಅಕ್ಷಿಣೀ ಯಸ್ಯಾಃ ಸಾ" ಎಂದು ವಿಗ್ರಹದಿಂದ ಕಮಲಗಳಂತೆ ನೇತ್ರವುಳ್ಳವಳು ಎಂಬ ಅರ್ಥವನ್ನು ಬೋಧಿಸುವುದು, "ಕಮಲಾಯಾಃ ಅಕ್ಷಿ ಯಸ್ಯಾಂ ಸಾ" ಎಂಬ ಸಮಾಸದಿಂದ ಲಕ್ಷ್ಮೀದೇವಿಯ ಜ್ಞಾನಕ್ಕೆ ಗೋಚರಳು ಎಂಬ ಅರ್ಥವನ್ನು ಸೂಚಿಸುತ್ತಿದೆ. ಇಲ್ಲಿ ಅಕ್ಷಿ ಎಂಬ ಶಬ್ದಕ್ಕೆ ಕಣ್ಣಿಂದ ಹುಟ್ಟುವ ಜ್ಞಾನವೆಂಬ ಅರ್ಥವನ್ನು ಗ್ರಹಿಸಬೇಕು. ಕಮಲಾಯಾಃ + ಅಕ್ಷಿಣೀ + ಯಸ್ಯಾಃ ಎಂಬ ಸಮಾಸದಿಂದ ಐಹಿಕಾಮುಷ್ಮಿಕ ಭೋಗ ಸಂಪತ್ತಿಗೆ ಕಾರಣವಾದ ದರ್ಶನವುಳ್ಳವಳು ಎಂಬ ಅರ್ಥವನ್ನು ಬೋಧಿಸುವುದು. ದರ್ಶನಮಾತ್ರದಿಂದ ಮಹದೈಶ್ವರ್ಯ ಪ್ರಾಪ್ತಿಯಾಗುವುದೆಂದು ಪೂರನೇ ಅರ್ಥದ ಸಾರವು.

೮. "ಕಲ್ಮಷಾಣಿ ಹಂತಿ," ಪಾಪಗಳನ್ನು ಕಳೆಯುವವಳು, ನಾನು ಸಮಸ್ತ ಪಾಪಗಳಿಂದ ನಿನ್ನನ್ನು ಬಿಡಿಸುತ್ತೇನೆಂದು "ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂಬ ಭಗವದ್ಗೀತಾ ವಚನವು ಇರುವುದು. ಇದರಿಂದ ದೇವಿಯಲ್ಲಿ ಪಾಪ ಮೋಚನ ಶಕ್ತಿಯು ಕಂಡು ಬರುವುದು. ಅಥವಾ

ಕಲ್ಮಷಘ್ನೀ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷ
ಯಿಷ್ಯಾಮೀತಿ ಭಗವದ್ವಚನಾತ್। ಅಥವಾ ವೇದಾಂತ ಮಹಾ
ವಾಕ್ಯಜನ್ಯಸಾಕ್ಷಾತ್ಕಾರರೂಪಬ್ರಹ್ಮವಿದ್ಯಾ। ಜ್ಞಾನಾಗ್ನಿಃ
ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ತಥಾ ಇತಿ ಸ್ಮೃತೇಃ।
ನ ಸ ಪಾಪಂ ಶ್ಲೋಕಂ ಶೃಣೋತೀತಿ ಶ್ರುತೇಶ್ಚ।

## ೯. ಓಂ ಕರುಣಾಮೃತಸಾಗರಾಯೈ ನಮಃ।

ಕರುಣಾಮೃತಸಾಗರೇತಿ। ಕರುಣಯಾ ಕೃಪಯಾ ಜಾತಂ
ಯದಮೃತಂ ಮೋಕ್ಷರೂಪಂ ತಸ್ಯ ಸಾಗರ ಇವ ಸಾಗರಾ
ಯಥಾ ಅಮೃತ ಸಮುದ್ರಃ ಸ್ವಯಮಮೃತ ಸ್ವರೂಪಸ್ಸನ್
ಅನ್ಯಾನಪಿ ಲೋಕಾನ್ ಅಮೃತಪಾಯಿಮೇಘಾತ್
ಮುಕ್ತಾಮೃತೇನ ಸಂಜೀವಯತಿ। ತಥಾ ಬ್ರಹ್ಮವೇದ
ಬ್ರಹ್ಮೈವ ಭವತಿ, ಬ್ರಹ್ಮವಿದಾಪ್ನೋತಿ ಪರಮಿತಿ ಶ್ರುತ್ಯಾ

---

ವೇದಾಂತ ಮಹಾ ವಾಕ್ಯದಿಂದ ಉಂಟಾದ ತತ್ತ್ವಜ್ಞಾನವೆಂಬ ಬ್ರಹ್ಮವಿದ್ಯೆಯು "ನ ಸ ಪಾಪಂ ಶ್ಲೋಕಂ ಶೃಣೋತಿ, ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮ ಸಾತ್ಕುರುತೇಽರ್ಜುನ" ಎಂಬ ಶ್ರುತಿಸ್ಮೃತಿಗಳಲ್ಲಿ ಹೇಳಿದಂತೆ ಪಾಪಗಳನ್ನು ಭಸ್ಮಮಾಡುವುದು. ಆದ್ದರಿಂದ ವಿದ್ಯಾಸ್ವರೂಪಿಣಿಯಾದ ದೇವಿಯು ಕಲ್ಮಷಘ್ನಿ ಯಾಗಿರುವಳು.

೯. ಕರುಣಾಮೃತ ಸಾಗರಾ। ಕೃಪೆಯಿಂದ ಭಕ್ತರಿಗೆ ದೊರಕುವ ಮೋಕ್ಷವೆಂಬ ಅಮೃತಕ್ಕೆ ಸಮುದ್ರ ರೂಪಳು. ಅಮೃತ ಸಮುದ್ರದಿಂದ ಮೇಘವು ಅಮೃತವನ್ನು ಪಾನಮಾಡಿ ಸಕಾಲದಲ್ಲಿ ವೃಷ್ಟಿಯನ್ನು ಕೊಟ್ಟು ಜಗತ್ತನ್ನು ಸಂಜೀವನ ಗೊಳಿಸುವುದು. ಹೀಗೆ ಮೇಘದ ಮೂಲಕ ಜಗತ್ತಿನ ಸಂಜೀವನಕ್ಕೆ ಅಮೃತ ಸಮುದ್ರವು ಕಾರಣವಾಗುವುದು ಅದರಂತೆ ದೇವಿಯು "ಬ್ರಹ್ಮವಿದಾಪ್ನೋತಿ ಪರಮ್" "ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ಶ್ರುತ್ಯನುಸಾರವಾಗಿ ಅಮೃತ ಬ್ರಹ್ಮ ಸ್ವರೂಪಳಾಗಿರುವಳು, ಮತ್ತು ಆಯಾಯ ಅಧಿಕಾರಿಗಳು ಶಾಸ್ತ್ರ ಪ್ರಮಾಣದಿಂದ ಮಾಡುವ ಕರ್ಮ- ಉಪಾಸನೆಗಳಿಂದ

**ಸ್ವಯಮಮೃತರೂಪಾ ಸತೀ । ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿತಾನಿತಿ ಭಗವದ್ವಚನೇನ ತತ್ತದಾಕಾರ ಕೃತಕರ್ಮೋಪಾಸನಾದಿಫಲಸ್ಯ ದೇವತಾಪ್ರಾಪಣೀಯಸ್ಯ ಸಂಪ್ರಾಪ್ತೌ ತತ್ತದಧಿಕಾರಿಣಾಂ ತತ್ತತ್ಫಲಂ ಸ್ಥಿತಮಿತಿ ಸಂಭಾವ್ಯತ ಇತಿ ಸಾಗರೋಪಮಾ। ಅಮೃತವತ್ಸರ್ವಸಂಜೀವಿನೀ ಕರುಣಾರಸಸ್ಯಾಮೃತಸ್ಯಾಭಿನ್ನಾಶ್ರಯತ್ವಾತ್ಸಾಗರಾ ಚ। ಕರುಣಾ ಚ ಭಕ್ತವಿಷಯಕಪರಿಪಾಲ್ಯತಾಬುದ್ಧಿಃ। ಯದ್ವಾ ಕರುಣಯಾ ಕೃಪಯಾ ಅಮೃತಾಃ ಶಾಶ್ವತಕೀರ್ತಿಮತ್ತ್ವೇನ ಬ್ರಹ್ಮಾದಿ ಲೋಕಂ ಗತಾಃ ಸಾಗರಾಃ ಸಗರರಾಜವಂಶ್ಯಾಃ ಯಸ್ಯಾಃ ಸಾ ತಥಾ । ಯದ್ವಾ ಕರುಣಯಾ ದಯಯಾ ಹೇತುನಾ ಅಮೃತಾಯ ಪ್ರಾಪ್ತಃ ಸಾಗರಃ ಸಮುದ್ರಃ ಯಯಾಸಾ ಭಾಗೀರಥೀ, ಕರುಣಾಮೃತ ಸಾಗರಾ ।**

---

ಪ್ರಸನ್ನರಾದ ಆಯಾಯ ದೇವತೆಗಳು ಸ್ವಭಕ್ತರಿಗೆ ಕೊಡುವ ಫಲಗಳೆಂಬ ಅಮೃತಕ್ಕೆ ಸಾಗರ ಸ್ವರೂಪಳಾಗಿರುವಳು ಎಂದು ಸಾಗರದ ಉಪಮೆಯಿಂದ ತಿಳಿಯುವುದು. “ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿತಾನ್” ಎಂಬ ಭಗವದುಕ್ತಿಯಿಂದ ಸಮಸ್ತ ದೇವತಾರಾಧನದಿಂದ ಹೊಂದುವ ಫಲ ಪ್ರಾಪ್ತಿಯು ಭಗವದಾಯತ್ತವಾದುದೆಂದು ತಿಳಿಯುವುದು. ಕರುಣೆಯೆಂದರೆ ಭಕ್ತರ ವಿಷಯದಲ್ಲಿ ರಕ್ಷಣೀಯರೆಂಬ ಬುದ್ಧಿಯು. ಇದು ಅಮೃತದಂತೆ ಸರ್ವ ಸಂಜೀವನ್ನುಂಟುಮಾಡುವುದು. ಜಲಕ್ಕೆಲ್ಲ ಸಾಗರವೇ ಗತಿಯಾಗಿರುವಂತೆ ಇಂತಹ ಕರುಣಾಮೃತಕ್ಕೆ ದೇವಿಯು ಒಬ್ಬಳೇ ಆಶ್ರಯವು. ಆದ್ದರಿಂದ ಸಾಗರ ಸ್ವರೂಪಳು, ಅಥವಾ ತನ್ನ ಕೃಪಾ ವಿಶೇಷದಿಂದ ಅಮೃತರಾಗಿರುವಂತೆ ಶಾಶ್ವತ ಬ್ರಹ್ಮಲೋಕವನ್ನು ಹೊಂದಿ ಕೀರ್ತಿಯನ್ನು ಗಳಿಸಿರುವ ಸಗರ ರಾಜಪುತ್ರರುಳ್ಳವಳು ಅಥವಾ ಕರುಣೆಯಿಂದ ಅಮೃತ ಲಾಭಕ್ಕೋಸರ ಸಮುದ್ರವನ್ನು ಹೊಂದಿರುವ ಭಾಗೀರಥೀ ರೂಪಳು. ಇಲ್ಲಿ “ಕರುಣಯಾ ಅಮೃತಂ ತಸ್ಯ ಸಾಗರ ಇವ, ಕರುಣಯಾ ಅಮೃತಾಃ ಸಗರಸ್ಯ ಅಪತ್ಯಾನಿ ಪುಮಾಂಸಃ, ಕರುಣಯಾ ಅಮೃತಾಯ ಪ್ರಾಪ್ತಃ ಸಾಗರೋ ಯಯಾ ಎಂಬುದಾಗಿ ಸಮಾಸ ರೂಪಗಳನ್ನು ತಿಳಿಯಬೇಕು.

## ೧೦. ಓಂ ಕದಂಬಕಾನನಾವಾಸಾಯೈ ನಮಃ।

ಕದಂಬ ಕಾನನಾವಾಸೇತಿ। ಕದಂಬ ನಾಮಕ ಕಲ್ಪವೃಕ್ಷ ಯುಕ್ತಂ ಯತ್ಕಾನನಂ ತತ್ರಾವಾಸೋ ಗೃಹಂ ಯಸ್ಯಾಸ್ಸಾ ತಥಾ

## ೧೧. ಓಂ ಕದಂಬ ಕುಸುಮಪ್ರಿಯಾಯೈ ನಮಃ।

ಕದಂಬ ಕುಸುಮ ಪ್ರಿಯೇತಿ। ಕದಂಬಾನಾಂ ಕುಸುಮಾನಿ ಕದಂಬ ಕುಸುಮಾನಿ। ತೇಷು ಪ್ರೀತಿಮತೀತಿ ಯಾವತ್। ಯದ್ಯಪಿ ಪ್ರಿಯಶಬ್ದಃ ಪ್ರೀತಿವಿಷಯವಾಚಕಃ। ತಥಾಪಿ ಕುಸುಮಜನ್ಯ ಪ್ರೀತೇರ ಭಾವೇನ ತದ್ವಿಷಯತಾಯಾ ವಕ್ತು ಮಶಕ್ಯತ್ವಾತ್ತಥೋಕ್ತಮ್

---

೧೦. ಕದಂಬವೆಂಬ ಹೆಸರಿನ ಕಲ್ಪವೃಕ್ಷದಿಂದ ಕೂಡಿದ ವನದಲ್ಲಿ ವಾಸಿಸುವವಳು ಎಂದು ಅರ್ಥವು, "ಕದಂಬಯುಕ್ತಂ ಕಾನನಂ, ತತ್ರ, ವಾಸೋ, ಯಸ್ಯಾಃ" ಎಂದು ವಿಗ್ರಹವನ್ನಿಟ್ಟುಕೊಳ್ಳಬೇಕು.

೧೧. ಕದಂಬವೆಂಬ ಪುಷ್ಪಗಳಲ್ಲಿ ಪ್ರೀತಿಯುಳ್ಳವಳು. ಇಲ್ಲಿ ಅಚೇತನವಾದ ಕದಂಬ ಕುಸುಮಗಳಲ್ಲಿ ಪ್ರೀತಿಯ ಉದಯವು ಇಲ್ಲದ್ದರಿಂದ ಕುಸುಮಗಳ ಪ್ರೀತಿಗೆ ವಿಷಯಳೆಂದು ಪ್ರಿಯ ಶಬ್ದದ ಯಥಾಶ್ರುತಾರ್ಥವನ್ನು ಪರಿಗ್ರಹಿಸುವುದು ಉಚಿತವಲ್ಲ. ಕದಂಬಾನಿ ಚ ತಾನಿ + ಕುಸುಮಾನಿ ಚ ತೇಷು ಪ್ರಿಯಾ ಎಂದು ವಿಗ್ರಹವು.

೩

**ಕಂದರ್ಪವಿದ್ಯಾ ಕಂದರ್ಪಜನಕಾಪಾಂಗವೀಕ್ಷಣಾ ।**
**ಕರ್ಪೂರವೀಟೀಸೌರಭ್ಯಕಲ್ಲೋಲಿತಕಕುಪ್ತಟಾ**

### ೧೨. ಓಂ ಕಂದರ್ಪವಿದ್ಯಾಯೈ ನಮಃ ।

ಕಂದರ್ಪವಿದ್ಯೇತಿ । ಕಂದರ್ಪಸ್ಯ ವಿದ್ಯಾ ವಿತ್ತಿಃ ವಿದ್ಯಾ ತನ್ನಿಷ್ಠಪ್ರತ್ಯಗ್ಬ್ರಹ್ಮೈಕ್ಯಜ್ಞಾನಮಿತ್ಯರ್ಥಃ । ಅಥವಾ ವಿದ್ಯಾಪ್ರಾಪಕತ್ವಾತ್ತದ್ದೃಷ್ಟಮೂಲಮಂತ್ರ ವರ್ಣಸಮುದಾಯೋ ವಿದ್ಯೇತ್ಯುಚ್ಯತೇ । ವೇದವಾಕ್ಯೇಷೂ ಪನಿಷತ್ಪದವತ್ । ತದ್ವಾಚ್ಯಾರ್ಥತ್ವಾತ್ತಥಾ ದೇವೀ ಸೂಚ್ಯತೇ ।

### ೧೩. ಓಂ ಕಂದರ್ಪಜನಕಾಪಾಂಗವೀಕ್ಷಣಾಯೈ ನಮಃ ।

ಕಂದರ್ಪಜನಕಾಪಾಂಗವೀಕ್ಷಣೇತಿ । ಅಪಾಂಗಾಭ್ಯಾಂ ವೀಕ್ಷಣಂ ಅಪಾಂಗವೀಕ್ಷಣಂ ಈಷದ್ದರ್ಶನ ಮಿತಿಯಾವತ್। ಕಂದ

---

೧೨. ಕಂದರ್ಪನಲ್ಲಿರುವ ಪ್ರತ್ಯಗಾತ್ಮ ಪರಮಾತ್ಮರ ಐಕ್ಯಜ್ಞಾನ ಸ್ವರೂಪಳು. ಅಥವಾ ತತ್ತ್ವಜ್ಞಾನವನ್ನು ಕೊಡುವ ಕಾಮದೇವನಿಂದ ಉಪಾಸನೆ ಮಾಡಲ್ಪಟ್ಟ ಮೂಲಮಂತ್ರ ವರ್ಣ ಸಮುದಾಯವು ವಿದ್ಯಾ ಶಬ್ದದಿಂದ ಕರೆಯಲ್ಪಡುವುದು. ಆ ವಿದ್ಯೆಗೆ ದೇವಿಯು ವಾಚ್ಯಾರ್ಥ ಸ್ವರೂಪಳು. ಉಪನಿಷತ್ ಶಬ್ದಕ್ಕೆ ಬ್ರಹ್ಮ ವಿದ್ಯೆಯು ಮುಖ್ಯಾರ್ಥವಾಗಿದ್ದರೂ ಬ್ರಹ್ಮ ವಿದ್ಯಾ ಸಾಧನವಾದ ವೇದವಾಕ್ಯಗಳನ್ನು ಉಪನಿಷತ್ ಎಂದು ಕರೆದಂತೆ ವಿದ್ಯಾ ಸಾಧನವನ್ನು ವಿದ್ಯಾ ಎಂದು ಕರೆಯುವುದು ಸಮಂಜಸವಾಗಿರುವುದು. ಕಂದರ್ಪಸ್ಯ + ವಿದ್ಯಾ ಎಂದು ವಿಗ್ರಹವು.

೧೩. ಅಪಾಂಗ ವೀಕ್ಷಣವೆಂದರೆ ಅಲ್ಪವಾದ ನೋಟವು, ದೇವಿಯು ಮನ್ಮಥನನ್ನು ಸೃಷ್ಟಿಸುವ ಅಲ್ಪಮಾತ್ರ ದರ್ಶನವುಳ್ಳವಳು. ಇದರಿಂದ ಕುರೂಪಿಗಳಾದ ಜಡ ಜನರು ದೇವಿಯ ಸಕೃದ್ದರ್ಶನಕ್ಕೆ ಪಾತ್ರರಾಗಿ ಮನ್ಮಥ

**ರ್ಪಸ್ಯ ಜನಕಂ ಅಪಾಂಗವೀಕ್ಷಣಂ ಯಸ್ಯಾಃ ಸಾ । ಅನೇನ ನಾಮ್ನಾ ಯೇಷಾಂ ಜಡಾನಾಮಪಿ ಕುರೂಪಿಣಾಂ ಜನಾನಾಂ ಉಪರಿ ಸಕೃದೀಷದ್ವೀಕ್ಷಣಮಭಿಜಾಯತೇ ತೇ ಕಂದರ್ಪವದ್ರೂಪಯೌವನಸಾಮರ್ಥ್ಯಲಕ್ಷ್ಮೀಭಾಜೋ ಭವಂತೀತಿ ಧ್ವನಿತಮ್ । ಯದ್ವಾ ಕಂದರ್ಪಸ್ಯ ಮನ್ಮಥಸ್ಯಜನಕಃ ಶ್ರೀಮನ್ನಾರಾಯಣಃ ಸ ಯಸ್ಯಾ ಅಪಾಂಗವೀಕ್ಷಣೇ ಈಷದ್ಭ್ರೂವಲ್ಲೀಚಲನೇ ವರ್ತತೇ, ಯಸ್ಯಾ ಆಜ್ಞಾವಶ್ಯತಯಾ ಮಹಾವಿಷ್ಣುಃ ಜಗದ್ರಕ್ಷಣಾದಿ ಕಾರ್ಯಂ ಕರೋತಿ ಸಾ ತಥೇತಿ । ಅಥವಾ ಕಂದರ್ಪಜನಕಾ ಮಹಾಲಕ್ಷ್ಮೀಃ । ಯಸ್ಯಾ ಅಪಾಂಗವೀಕ್ಷಣೇ ಪ್ರೇರ್ಯತಯಾ ವರ್ತತೇ । ಸಾ ತಥಾ । ಕಂದರ್ಪಸ್ಯ ಮನ್ಮಥಸ್ಯ ಜನಕಾಃ ಉತ್ಪಾದಕಾಃ ಸ್ರಕ್ಚಂದನಾದಿಭೋಗ್ಯವಿಷಯಾಃ ತೇ ಯಸ್ಯಾ ಅಪಾಂಗವೀಕ್ಷಣೇ ಭವಂತಿ ಸಾ ತಥಾ । ಅಥವಾ ಚಂದ್ರಸ್ಯ ವಾಮ**

---

ನಂತೆ ರೂಪ, ಯೌವನ, ಸಾಮರ್ಥ್ಯ, ಲಕ್ಷ್ಮೀ ಮುಂತಾದ ಅನೇಕ ಗುಣಪೂರ್ಣರಾಗುವರು, ಎಂಬ ದೇವಿಯ ಮಹಿಮೆಯು ವರ್ಣಿತವಾಗುವುದು. ಅಥವಾ ಮನ್ಮಥನಿಗೆ ಜನಕನಾದ ನಾರಾಯಣನು ಹುಬ್ಬಿನ ಚಲನೆಯಿಂದ ಪ್ರೇರೇಪಿಸುವುದೆಂಬ ದೇವಿಯ ಅಪಾಂಗ ವೀಕ್ಷಣಕ್ಕೆ ಅಧೀನನಾಗಿ ಜಗದ್ರಕ್ಷಣಾದಿ ಕಾರ್ಯವನ್ನು ಆಚರಿಸಿ ಆಜ್ಞೆಯನ್ನು ಪಾಲಿಸುವನು. ಆದ್ದರಿಂದ ಆಜ್ಞಾಕರನಾದ ನಾರಾಯಣನುಳ್ಳವಳು. ಅಥವಾ ಕಂದರ್ಪ ಜನಕಳಾದ ಮಹಾಲಕ್ಷ್ಮಿಯು ದೇವಿಯ ಅಪಾಂಗ ವೀಕ್ಷಣದಿಂದ ಪ್ರೇರಿಸಲ್ಪಡುವವಳಾಗಿ ಇರುವಳು. ಅಥವಾ ಕಂದರ್ಪ ವಿಕಾರವನ್ನು ಉಂಟುಮಾಡುವ ಗಂಧ ಪುಷ್ಪ ಮೊದಲಾದ ಭೋಗ್ಯವಸ್ತುಗಳ ಸಮೃದ್ಧಿಯನ್ನು ಕೊಡುವ ಅಪಾಂಗ ದರ್ಶನವುಳ್ಳವಳು, ಅಥವಾ ಚಂದ್ರನು ವಾಮನೇತ್ರ ರೂಪನಾಗಿರುವುದರಿಂದ ವೀಕ್ಷಣವು ಚಂದ್ರಿಕಾ ರೂಪವಾಗುವುದು. ಮನ್ಮಥ ವಿಕಾರ ಜನಕವಾದ ಚಂದ್ರಿಕೆಯನ್ನು ಚೆಲ್ಲುವ ವಾಮನೇತ್ರವುಳ್ಳವಳು. ಅಥವಾ ಕಂದರ್ಪಜನಕ ಶಬ್ದಕ್ಕೆ ಲಕ್ಷಣಾ ವೃತ್ತಿಯಿಂದ ಲಕ್ಷ್ಮಿಯ ಆಧಾರವಾದ ಕಮಲ ಎಂದು ಅರ್ಥ. ಆ ಕಮಲದಂತಿರುವ ನೋಟದಿಂದ ಜಗತ್ಸಂಜೀವನವನ್ನುಂಟು ಮಾಡುವ

ನೇತ್ರತಯಾ ಅಪಾಂಗವೀಕ್ಷಣಂ ಚಂದ್ರಿಕೋಚ್ಯತೇ ।
ಕಂದರ್ಪಜನಕಂ ಅಪಾಂಗವೀಕ್ಷಣಂ ಯಸ್ಯಾಃ ಸಾ ತಥಾ ।
ಕಂದರ್ಪಜನಕ ಶಬ್ದೇನ ಲಕ್ಷ್ಮೀನಿವಾಸ ಕಮಲಂ ಲಕ್ಷ್ಯತೇ
ತದ್ವದಪಾಂಗಂ ಕಮಲಾಕ್ಷೀತ್ಯರ್ಥಃ, ತನ್ನಿರೂಪಿತ ವೀಕ್ಷಣಂ
ಲೋಕಸಂಜೀವನಂ ಯಸ್ಯಾಸ್ಸಾ ತಥಾ ।

## ೧೪. ಓಂ ಕರ್ಪೂರವೀಟೀಸೌರಭ್ಯಕಲ್ಲೋಲಿತ ಕಕುಪ್ತಟಾಯೈ ನಮಃ

ಕರ್ಪೂರವೀಟೀಸೌರಭ್ಯಕಲ್ಲೋಲಿತಕಕುಪ್ತಟೇತಿ । ಕರ್ಪೂರ
ಯುಕ್ತಾಶ್ಚತಾ ವೀಟ್ಯಶ್ಚ ತಾಂಬೂಲಕಬಲಾನಿತಾಸಾಂ
ಸೌರಭ್ಯಂ ಸೌಗಂಧ್ಯಂ ತೇನ ಕಲ್ಲೋಲಿತಾನಿ ಅಸಕೃ
ತ್ಪರಿಮಳೀಕೃತಾನಿ ಕಕುಭಾಂ ದಿಶಾಂ ತಟಾನಿ ಪ್ರದೇಶಾ

---

ವೀಕ್ಷಣವುಳ್ಳವಳು. "ಅಪಾಂಗಾಭ್ಯಾಂ ವೀಕ್ಷಣಮ್, ಕಂದರ್ಪಸ್ಯ ಜನಕಂ ಅಪಾಂಗ ವೀಕ್ಷಣಂ ಯಸ್ಯಾಃ, ಕಂದರ್ಪ ಜನಕಃ ಅಪಾಂಗ ವೀಕ್ಷಣೇ ಯಸ್ಯಾಃ, ಕಂದರ್ಪ ಜನಕಾ ಅಪಾಂಗ ವೀಕ್ಷಣೇ ಯಸ್ಯಾಃ ಕಂದರ್ಪ, ಜನಕಾಃ ಅಪಾಂಗ ವೀಕ್ಷಣಾತ್ ಯಸ್ಯಾಃ, ಕಂದರ್ಪ ಜನಕವತ್ ಅಪಾಂಗಂ ತೇನ ವೀಕ್ಷಣಂ ಯಸ್ಯಾಃ" ಎಂಬುದಾಗಿ ಆಯಾಯ ಅರ್ಥಗಳಲ್ಲಿ ಉಚಿತ ವಾದ ವಿಗ್ರಹ ವಾಕ್ಯಗಳನ್ನು ಇಟ್ಟುಕೊಳ್ಳಬೇಕು.

೧೪. ಕರ್ಪೂರ ಚೂರ್ಣದಿಂದ ಕೂಡಿರುವ ತಾಂಬೂಲಗಳ ಸುವಾಸನೆ ಯಿಂದ ಪೂರ್ಣವಾಗಿ ಸುಗಂಧದಿಂದ ಮುಚ್ಚಿಸಲ್ಪಟ್ಟ ದಿಗಂತ ಪ್ರದೇಶಗಳುಳ್ಳ ವಳು, ಮುಖದ ಸುಗಂಧದಿಂದ ಪರಿಪೂರ್ಣವಾದ ತಾಂಬೂಲವು ಜಗತ್ತನ್ನೆಲ್ಲ ಸುಗಂಧ ಮಯುವನ್ನಾಗಿ ಮಾಡಿರುವುದೆಂದು ಅತಿಶಯೋಕ್ತಿಯಿಂದ ಅಲಂಕೃತ ವಾದ ಅರ್ಥವು. ಮಹಾರಾಜ ಭೋಗದಿಂದ ಕೂಡಿರುವಳು ಎಂದು ತಾತ್ಪರ್ಯವು.

**ಯಸ್ಯಾಸ್ಸ್ವಮುಖವಾಸಿತಪರಿಮಳೇನ ಜಗನ್ಮಾತ್ರಂ ಸುರಭೀ ಕೃತಮಿತಿ ಸ್ವರೂಪಾತಿಶಯೋಕ್ತಿಃ ಅಸ್ಮಿನ್ನಾಮ್ನಿ ವ್ಯಜ್ಯತೇ। ಮಹಾರಾಜಭೋಗಿನೀತ್ಯರ್ಥಃ।**

---

ಕರ್ಪೂರಯುಕ್ತಾಶ್ಚ ತಾ ವೀಟ್ಯಶ್ಚ, ತಾಸಾಂ ಸೌರಭ್ಯಂ, ತೇನ ಕಲ್ಲೋಲಿತಾನಿ ದಿಕ್ತಟಾನಿ ಯಸ್ಯಾಃ ಸಾ ಎಂದು ವಿಗ್ರಹವು.



## ೪

### ಕಲಿದೋಷಹರಾ ಕಂಜಲೋಚನಾ ಕಮ್ರವಿಗ್ರಹಾ ।
### ಕರ್ಮಾದಿಸಾಕ್ಷಿಣೀ ಕಾರಯಿತ್ರೀ ಕರ್ಮಫಲಪ್ರದಾ

**೧೫. ಓಂ ಕಲಿದೋಷಹರಾಯೈ ನಮಃ ।**

**ಕಲಿದೋಷಹರೇತಿ । ಕಲೇಃ ನಿಂದ್ಯಾಜ್ಞಾಯಮಾನಾನಾಂ ಪುರುಷಾಣಾಂ ಜನ್ಮಮಾತ್ರೇಣ ಯೇ ದೋಷಾಃ ಪಾಪಾನಿ ಆಯಾಂತಿ, ತಾನ್ ದೃಷ್ಟ್ವಾ ಶ್ರುತಾ ಸಂಸ್ತುತಾ ಕೀರ್ತಿತಾ ಪೂಜಿತಾ ಧ್ಯಾತಾ ಸತೀ ಹರತೀತಿ ತಥಾ, ಕಲೇರನ್ಯೋನ್ಯವಾದಿನಾಂ ಕಲಹಾತ್ತತ್ತನ್ಮತಾಭಿನಿವೇಶವಶಾಜ್ಜಾಯಮಾನಾಃ ಯೇ ದೋಷಾಃ ಪರಬ್ರಹ್ಮವಿಷಯೇ ಅಸ್ತಿತ್ವ ನಾಸ್ತಿತ್ವ ದೇಹಾದಿವ್ಯತಿರಿಕ್ತತ್ವ ಭಿನ್ನತ್ವಾಭಿನ್ನತ್ವ ಗುಣಿತ್ವಾದಿಸಾಧಕ ಯುಕ್ತ್ಯಾಭಾಸ ತದನುಗುಣಸಮ್ಮತ್ಯಾಭಾಸ ಶ್ರುತಿತಾತ್ಪರ್ಯ ವಿಘಟನಾನ್ಯಥಾಕರಣ ದುರಾಗ್ರಹಜನ್ಯಕಾಮಕ್ರೋಧಪರವಶ ಪುರುಷಕ್ರಿಯಮಾಣ ನಿಂದಾಸಹನಾದಿರೂಪಾ ಬಹುಧಾ ದೋಷಾಃ ತಾನದ್ವೈತ ಬ್ರಹ್ಮಜ್ಞಾನ ಸಾಧನ ಮುಕ್ತಿರೂಪೇಣ ಹರತೀತಿ ಕಲಿದೋಷ ಹರಾ ।**

---

೧೫. ಕಲಿಯುಗದ ಮಹಿಮೆಯಿಂದ ಮಾನವ ಸಾಮಾನ್ಯಕ್ಕೆ ಜನ್ಮಮಾತ್ರದಿಂದ ಕಂಡುಬರುವ ಪಾಪಗಳನ್ನು ದರ್ಶನ, ಶ್ರವಣ, ಕೀರ್ತನ, ಸ್ತುತಿ, ಪೂಜಾ, ಧ್ಯಾನಾದಿಗಳಿಂದ ಸತ್ಕರಿಸಲ್ಪಟ್ಟ ದೇವಿಯು ಅಪಹರಿಸುವವಳಾಗಿರುವಳು. ಅಥವಾ ಆಯಾಯ ಮತ ವಿಶೇಷಗಳಲ್ಲಿ ಆಗ್ರಹದಿಂದ ವಾದಿಗಳಿಗೆ ಅನ್ಯೋನ್ಯವಾಗಿ ಸಂಭವಿಸುವ ಪರಬ್ರಹ್ಮ ವಿಷಯದಲ್ಲಿ ಅಸ್ತಿತ್ವ, ನಾಸ್ತಿತ್ವ ದೇಹಾದಿ ವ್ಯತಿರಿಕ್ತತ್ವ, ಅವ್ಯತಿರಿಕ್ತತ್ವ, ಭೇದ, ಅಭೇದ ಮುಂತಾದ ಪರಸ್ಪರ ವಿರುದ್ಧ ಪಕ್ಷಸಾಧಕವಾದ ಯುಕ್ತ್ಯಾಭಾಸ, ಸಮ್ಮತ್ಯಾಭಾಸ, ಶ್ರುತಿ ತಾತ್ಪರ್ಯ ವಿಘಟನ, ಅನ್ಯಥಾಕರಣ, ದುರಾಗ್ರಹ, ಕಾಮ, ಕ್ರೋಧ, ಪರುಷ ಭಾಷಣ, ನಿಂದಾ, ಅಸಹನ ಮುಂತಾದ ದೋಷಗಳನ್ನು ಅದ್ವೈತ ಬ್ರಹ್ಮಜ್ಞಾನದಿಂದ ಲಭಿಸುವ ಮುಕ್ತಿಯನ್ನು ಅನುಗ್ರಹಿಸಿ ಅಪಹರಿಸುವವಳು. ಕಲೇಃ + ದೋಷಾಃ, ತಾನ್ ಹರತೀತಿ ಎಂದು ವಿಗ್ರಹವು.

## ೧೬. ಓಂ ಕಂಜಲೋಚನಾಯೈ ನಮಃ

ಕಂಜಲೋಚನೇತಿ। ಕೇಭ್ಯಃ ಜಾಯಂತ ಇತಿ ಕಂಜಾನಿ ಕಂಜ ಶಬ್ದೇನ ಅರವಿಂದ ನೀಲೋತ್ಪಲ ದಳಾನಿ ಲಕ್ಷ್ಯಂತೇ ತದ್ವಲ್ಲೋಚನೇ ಯಸ್ಯಾಸ್ಸಾ। ತಥಾ। ಅಥ ವಾ ಕಂಜಂ ಬ್ರಹ್ಮಾಂಡಂ॥ ಶ್ಲೋ॥ "ಅಯಂ ಪೂರ್ವಮಪಸ್ಸೃಷ್ಟ್ವಾ ತಾಸು ವೀರ್ಯಮವಾಸೃಜತ್। ತದಂಡಮಭವದ್ಧೈಮ" ಮಿತಿ ವಚನಾತ್। ಕಂಜಾನಿ ಅನೇಕಕೋಟಿ ಬ್ರಹ್ಮಾಂಡಾನಿ ಲೋಚನಯೋಃ ಕೃತವೀಕ್ಷಣಾತ್ ಯಸ್ಯಾಸ್ಸಾ ತಥಾ "ಸೇಯಂ ದೇವತೈಕ್ಷತೇ" ತಿ ಶ್ರುತೇಃ।

## ೧೭. ಓಂ ಕಮ್ರವಿಗ್ರಹಾಯೈ ನಮಃ

ಕಮ್ರವಿಗ್ರಹೇತಿ। ಕಮ್ರಃ ಅತಿಮನೋಹರಃ ಗಾಂಭೀರ್ಯ ಧೈರ್ಯ ಮಾಧುರ್ಯಾದಿಬಹುಗುಣೋಪೇತತ್ವಾತ್ ವಿಗ್ರಹಃ

---

೧೬. ಕಂಜ ಶಬ್ದವು ಲಕ್ಷಣಾ ವೃತ್ತಿಯಿಂದ ಕನ್ನೈದಿಲೆಯನ್ನು ಬೋಧಿಸುವುದು. ಅದರಂತೆ ಇರುವ ಕಣ್ಣುಗಳಿಂದ ಶೋಭಿತಳು, ಅಥವಾ ಕಂಜ ಶಬ್ದವು ಬ್ರಹ್ಮಾಂಡವನ್ನು ಬೋಧಿಸುವುದು. ಕ=ನೀರಿನಲ್ಲಿ, ಜ=ಹುಟ್ಟಿರುವುದು ಎಂದು ಅರ್ಥವು. "ಅಯಂ ಪೂರ್ವಮಪಃ ಸೃಷ್ಟ್ವಾ ತಾಸು ವೀರ್ಯಮವಾಸೃಜತ್, ತದಂಡ ಮಭವದ್ಧೈಮಂ" ಎಂಬ ಪುರಾಣ ವಚನದಿಂದ ಮೊದಲು ಸೃಷ್ಟಿಸಿರುವ ಜಲದಿಂದ ಬ್ರಹ್ಮಾಂಡವು ಜನಿತವಾಗಿದೆಯೆಂದು ತಿಳಿಯುವುದು. ಕಣ್ಣುಗಳ ವೀಕ್ಷಣದಿಂದ ಅನೇಕ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿರುವವಳು. "ಸೇಯಂ ದೇವತೈಕ್ಷತ ಎಂಬ ಶ್ರುತಿಯು ಈಕ್ಷಣದಿಂದ ಜಗತ್ಸೃಷ್ಟಿ ವ್ಯಾಪಾರವನ್ನು ಪರಬ್ರಹ್ಮನಲ್ಲಿ ಬೋಧಿಸುವುದು. ಕಂಜವತ್+ಲೋಚನೇ ಯಸ್ಯಾಃ, ಕಂಜಾನಿ ಲೋಚನಾತ್ ಯಸ್ಯಾಃ ಎಂದು ವಿಗ್ರಹವು.

೧೭. ಗಾಂಭೀರ್ಯ, ಧೈರ್ಯ, ಮಾಧುರ್ಯ, ಮುಂತಾದ ಬಹು ಗುಣಗಳಿಂದ ಕೂಡಿ ಅತ್ಯಂತ ಮನೋಹರವಾದ ಮೂರ್ತಿಯುಳ್ಳವಳು. "ಆನಂದ

ಮೂರ್ತಿರ್ಯಸ್ಯಾಸ್ಸಾ ತಥಾ । ಆನಂದರೂಪಮಮೃತಂ ಯದ್ವಿಭಾತೀತಿ ಶ್ರುತೇಃ । ಆನಂದಸ್ವರೂಪತ್ವಾತ್ಕಮ್ರ ವಿಗ್ರಹಾ—ಲಲಿತಾ ರೂಪೇತ್ಯರ್ಥಃ ।

## ೧೮. ಓಂ ಕರ್ಮಾದಿಸಾಕ್ಷಿಣ್ಯೈ ನಮಃ

ಕರ್ಮಾದಿ ಸಾಕ್ಷಿಣೀತಿ । ಕರ್ಮ ಆದಿರ್ಯೇಷಾಂ ತಾನಿ ಕರ್ಮಾದೀನಿ ಉಪಾಸನಾ ಯೋಗ ಶ್ರವಣ ಮನನ ನಿದಿಧ್ಯಾಸನಾನಿ ತೇಷಾಂ ಸಾಕ್ಷಿಣೀ ಅಸಂಬಂಧಿ ದೃಷ್ಟ್ರೀ "ಸಾಕ್ಷೀ ಚೇತಿ ಶ್ರುತೇಃ" ಅಥವಾ ಕರ್ಮಾದಯಃ ಸಾಕ್ಷಿಭೂತಾಃ ಜೀವ ನಿಷ್ಠಾಃ ತದನಾಶ್ರಯತಯಾ ಆತ್ಮದರ್ಶನ ಸಾಧನಾನಿ ಸೃಜ್ಯ ಮಾನ ಜಗದುಪಾದಾನಭೂತಾನಿ ಯಸ್ಯಾಃ ಸಾ ತಥಾ ।

---

ರೂಪಮಮೃತಂ ಯದ್ವಿಭಾತಿ" ಎಂಬ ಶ್ರುತಿಯು ಬ್ರಹ್ಮ ಸ್ವರೂಪವನ್ನು ಆನಂದ ರೂಪವೆಂದು ಬೋಧಿಸಿ ಅತಿ ಮನೋಹರತ್ವವನ್ನು ಸೂಚಿಸುತ್ತದೆ. ಆದ್ದರಿಂದ ಆನಂದ ರೂಪತ್ವದಿಂದ ಅತಿ ಮನೋಹರವಾದ ಮೂರ್ತಿಯುಳ್ಳವಳು. ಲಲಿತಾ ರೂಪಳು ಎಂದು ತಾತ್ಪರ್ಯವು, ಕಮ್ರಃ ವಿಗ್ರಹಃ ಯಸ್ಯಾಃ ಎಂದು ವಿಗ್ರಹವು.

೧೮. ಕರ್ಮವು ಆದಿಯಾಗಿರುವ ಉಪಾಸನಾ, ಯೋಗ, ಶ್ರವಣ, ಮನನ, ನಿದಿಧ್ಯಾಸನ ಮುಂತಾದುವುಗಳಿಗೆ ಸಾಕ್ಷಿ ರೂಪಳು. ಈ ಅರ್ಥದಲ್ಲಿ "ಸಾಕ್ಷೀ ಚೇತಾ" ಎಂಬ ಶ್ರುತಿಯು ಪ್ರಮಾಣವು, ಅಥವಾ ಸೃಷ್ಟಿ ಮಾಡುವ ಜಗತ್ತಿಗೆ ಕಾರಣವಾದ ಜೀವಾತ್ಮನಲ್ಲಿರುವ ಕರ್ಮಾದಿಗಳು ಅಕರ್ಮಾತ್ಮ ದರ್ಶನಕ್ಕೆ ಸಾಧನಗಳಾದ್ದರಿಂದ ಸಾಕ್ಷಿ ಭೂತಗಳಾಗಿವೆ. ಆದುದರಿಂದ ಅಸಂಗಾತ್ಮ ದರ್ಶನಕ್ಕೆ ಸಾಕ್ಷಿಯಾಗಿರುವ ಕರ್ಮಾದಿಗಳುಳ್ಳವಳು. ಕರ್ಮ ಆದಿರ್ಯೇಷಾಂ ತಾನಿ, ತೇಷಾಂ ಸಾಕ್ಷಿಣೀ, ಕರ್ಮಾದಯಃ ಸಾಕ್ಷಿ ಭೂತಾಃ ಯಸ್ಯಾಸ್ಸಾ ಎಂದು ವಿಗ್ರಹವು.

## ೧೯. ಓಂ ಕಾರಯಿತ್ರ್ಯೈ ನಮಃ

ಕಾರಯಿತ್ರೀತಿ। ಕಾರಯಿತೃತ್ವಂ ನಾಮ ಕುರ್ವಿತ್ಯಾಜ್ಞಾಪಯಿತೃತ್ವಂ ಜಾಯಮಾನ ಕಾರ್ಯಗೋಚರಕೃತ್ಯುತ್ಪತ್ತಿಹೇತು ಕರ್ಮಬೋಧಕತ್ವಂ, ಇದಂ ಚ ಲಿಙ್ಲೋಟ್ತವ್ಯ ಪ್ರತ್ಯಯಾನಾಮರ್ಥಃ ವಿಧಿನಿಷ್ಠಭಾವನೇತ್ಯುಚ್ಯತೇ। ತೇಷಾಂ ಶಬ್ದಾತ್ಮಕತಯಾ ಜಡಾನಾಂ ತಥಾತ್ವಾಸಂಭವಾತ್ ತದಧಿಷ್ಠಾನಚೈತನ್ಯರೂಪತಯಾ ಸರ್ವೇ ವೇದಾ ಯತ್ರೈಕಂ ಭವಂತೀತಿ ಶ್ರುತ್ಯಾ ವೇದಸ್ಯಾತ್ಮಾಭೇದೇನ ಸ್ವಪ್ರಕಾಶತಯಾ ಅರ್ಥಪ್ರಕಾಶನದ್ವಾರಾ ಪ್ರಾಮಾಣ್ಯಂ ವಿಧೀನಾಮಪಿ ವೇದೈಕದೇಶತಯಾ ಪ್ರೇರಣರೂಪತ್ವಾತ್ತದಧಿಷ್ಠಾನಚೈತನ್ಯಾತ್ಮನಾ ಕಾರಯತೀತಿ ತಥಾ। ಏಷ ಹ್ಯೇವ ಸಾಧು ಕರ್ಮ ಕಾರಯತೀತಿ ಶ್ರುತೇಃ।

## ೨೦. ಓಂ ಕರ್ಮಫಲಪ್ರದಾಯೈ ನಮಃ

ಕರ್ಮಫಲಪ್ರದೇತಿ। ಕೃತಾನಾಂ ಕರ್ಮಣಾಂ ಕಾಲಾಂತರ

---

೧೯. ಸೃಷ್ಟ್ಯವಸ್ತುವಿನ ಸೃಷ್ಟಿ ವ್ಯಾಪಾರವು ಹುಟ್ಟಲು ಕಾರಣವಾದ ಪೂರ್ವ ಕರ್ಮೋದ್ಬೋಧಕವಾದ ವಿಧಿಪ್ರತ್ಯಯ ರೂಪವಾದ ಶಬ್ದ ಧರ್ಮ ಅಥವಾ ಶಾಸ್ತ್ರ ಸಂಕೇತದಂತೆ ವಿಧಿ ಭಾವನೆಯು ಕಾರ್ಯವನ್ನು ಮಾಡಿಸುವುದು. ಆದರೆ ಅಚೇತನ ಶಬ್ದಗಳಿಗೆ ಆಜ್ಞಾಪಕತ್ವ ಧರ್ಮವು ಅಸಂಗತವಾದ್ದರಿಂದ ಶಬ್ದಾಧಿಷ್ಠಾನ ಚೈತನ್ಯ ರೂಪದಿಂದ ವೇದಗಳಿಗೆ ಕಾರಯಿತೃತ್ವವು ಬರುವುದು. "ಸರ್ವೇ ವೇದಾ ಯತ್ರೈಕಂ ಭವಂತಿ" ಎಂಬ ಶ್ರುತಿ ಪ್ರಮಾಣದಿಂದ ವೇದಗಳು ಆತ್ಮ ಸ್ವರೂಪವಾಗಿವೆ. ಆದ್ದರಿಂದ ಸ್ವಪ್ರಕಾಶಗಳಾದ ವೇದಗಳು ತಮ್ಮ ಅರ್ಥವನ್ನೂ ಮತ್ತು ತನ್ನ ಅರ್ಥಜ್ಞಾನದಲ್ಲಿ ಪ್ರಾಮಾಣ್ಯವನ್ನೂ ಪ್ರಕಾಶಪಡಿಸಿ ಚೈತನ್ಯ ರೂಪದಿಂದ ಪ್ರೇರಕವಾಗಿ ಕರ್ಮಗಳನ್ನು ಮಾಡಿಸುತ್ತಾವೆ. ಅಂತಹ ಪ್ರೇರಕವಾದ ವೇದ ಶಬ್ದಗಳಿಗೆ ಚೈತನ್ಯ ರೂಪವನ್ನು ಕೊಟ್ಟವಳು.

೨೦. ಕಾಲಾಂತರದಲ್ಲಿ ಉಂಟಾಗುವ ಫಲಗಳಿಂದ ಕೂಡಿದ ಸತ್ಕರ್ಮ

ಭಾವಿಫಲಪ್ರದಾನೇ ಅದೃಷ್ಟಂ ಕಾರಣಮಿತ್ಯನೀಶ್ವರ ಮೀಮಾಂಸಕಾದಿಮತಂ; ತನ್ನ ಜಡಾನಾಂ ಸೂಕ್ಷ್ಮಾಣಾಂ ಅದೃಷ್ಟಾನಾಂ ಚೇತನಧರ್ಮಕರ್ಮಫಲಪ್ರದಾನ ಸಾಮರ್ಥ್ಯಾಯೋಗಾತ್ ಕೃತಾನಾಂ ಕರ್ಮಣಾಂ ಫಲಾ ವಶ್ಯಂ ಭಾವೇ ಕರ್ಮಾಧ್ಯಕ್ಷ ಇತಿ ಶ್ರುತೇಃ, ಮಯೈವ ವಿಹಿ ತಾನ್ ಹಿ ತಾನಿತಿ ಸ್ಮೃತೇಶ್ಚ, ಫಲಮತ ಉಪಪತ್ತೇರಿತಿ ನ್ಯಾಯಾಚ್ಚ ಪರದೇವತಾ ಕರ್ಮಫಲಪ್ರದಾ.

ಇತಿ ತ್ರಿಶತ್ಯಾಂ ವಿದ್ಯಾಯಾಂ ಪ್ರಥಮಾಕ್ಷರನಾಮವ್ಯಾಖ್ಯಾಯಾಂ ಕಕಾರವರ್ಣ ಪ್ರಕಾಶಃ ಪ್ರಥಮಃ

---

ಗಳ ಫಲವನ್ನು ಅನುಗ್ರಹಿಸುವಳು. ಅದೃಷ್ಟವು ಕರ್ಮಫಲವನ್ನು ಕೊಡುವು ದೆಂದು ಕರ್ಮ ಮೀಮಾಂಸಾ ಶಾಸ್ತ್ರಕಾರರ ಸಿದ್ಧಾಂತವು. ಅದು ಸಮಂಜ ಸವಾಗಲಾರದು. ಅಚೇತನವೂ ಜಡವೂ ಆದ ಅದೃಷ್ಟಕ್ಕೆ ಚೇತನ ಧರ್ಮ ವಾದ ಕರ್ಮಫಲದಾನ ಶಕ್ತಿಯು ಸಂಭವಿಸುವುದಿಲ್ಲ. ಶಾಸ್ತ್ರ ಪ್ರಮಿತವಾದ ಕರ್ಮಗಳು ಫಲವನ್ನು ಅವಶ್ಯವಾಗಿ ಕೊಡಬೇಕಾದುದರಿಂದ ಕರ್ಮಾಧ್ಯಕ್ಷ ಳಾದ ಪರದೇವತೆಯನ್ನು ಅಪೇಕ್ಷಿಸುವುದು. ಪರದೇವತೆಯು ಕರ್ಮಫಲವನ್ನು ಕೊಡುವುದೆಂಬುದನ್ನು "ಕರ್ಮಾಧ್ಯಕ್ಷಃ" "ಮಯ್ಯೆವ ವಿಹಿತಾನ್‌ಹಿ ತಾನ್" "ಫಲಮತ ಉಪಪತ್ತೇಃ" ಎಂಬ ಶ್ರುತಿ, ಸ್ಮೃತಿ, ನ್ಯಾಯಗಳು ಸಾರಿ ಹೇಳುವುವು. ಆದ್ದರಿಂದ ದೇವಿಯು ಕರ್ಮ ಫಲ ಪ್ರದಾನ ಮಾಡುವವಳು. ಕರ್ಮಣಾಂ ಫಲಂ ಪ್ರದದಾತಿ ಎಂದು ವಿಗ್ರಹವು.

ಲಲಿತಾ ತ್ರಿಶತೀ ಭಾಷ್ಯ ವ್ಯಾಖ್ಯಾನದಲ್ಲಿ ಪ್ರಥಮ ಪ್ರಕಾಶವು ಸಮಾಪ್ತವು.

ಶ್ರೀ

## ಏಕಾರರೂಪಾ, ಚೈಕಾಕ್ಷರ್ಯೇಕಾನೇಕಾಕ್ಷರಾಕೃತಿಃ ।
## ಏತತ್ತದಿತ್ಯನಿರ್ದೇಶ್ಯಾ ಚೈಕಾನನ್ದಚಿದಾಕೃತಿಃ

### ೧. ಓಂ ಏಕಾರರೂಪಾಯೈ ನಮಃ ।

ಏಕಾರ ರೂಪೇತಿ । ಏಕಾರಃ ರೂಪಂ ಮಂತ್ರದ್ವಿತೀಯಾವಯವ ಜ್ಞಾಪಕಂ ಯಸ್ಯಾಃ ಸಾ ತಥಾ ।

### ೨. ಓಂ ಏಕಾಕ್ಷರ್ಯೈ ನಮಃ ।

ಏಕಾಕ್ಷರೀತಿ । ಏಕಂ ಮುಖ್ಯಂ ಈಶ್ವರೋಪಾಧಿತ್ವೇನ ನ ಕ್ಷರತ್ಯಾತ್ಮಜ್ಞಾನೇನ ವಿನಾ ಮುಕ್ತೇಃ ನ ನಶ್ಯತೀತ್ಯಕ್ಷರಂ ಕೂಟಸ್ಥಶಬ್ದ ವಾಚ್ಯಂ ಮಾಯಾ, ತತ್ಪ್ರತಿಬಿಂಬ ನಿಷ್ಠ ಸರ್ವಜ್ಞತ್ವಾದ್ಯಾಧಾಯಕವಿಶೇಷಣತ್ವೇನ ಅಸ್ಯಾ ಅಸ್ತೀತಿ ಏಕಾಕ್ಷರೀ । ಏಕಂ ಅಕ್ಷರಂ ಸರ್ವಪ್ರಕೃತಿತ್ವಾತ್ ಪರಾಪರ

---

೧. ಮಂತ್ರದಲ್ಲಿ ದ್ವಿತೀಯಾಕ್ಷರವಾಗಿದ್ದು ಮಂತ್ರ ಶರೀರಳಾದ ದೇವಿಯನ್ನು ಬೋಧಿಸುವುದರಿಂದ ದೇವಿಯು ಏಕಾರವೆಂಬ ರೂಪವುಳ್ಳವಳು. ಏಕಾರಃ ರೂಪಂ ಯಸ್ಯಾಃ ಎಂದು ವಿಗ್ರಹವು.

೨. ಮುಖ್ಯವಾದ ಅಕ್ಷರ ಅಥವಾ ಮಾಯೆಯೆಂಬ ಉಪಾಧಿಯುಳ್ಳವಳು. ಮಾಯೆಯು ಈಶ್ವರನಿಗೆ ಉಪಾಧಿಯಾಗಿ ಪ್ರತಿಬಿಂಬದಲ್ಲಿ ಸರ್ವಜ್ಞತ್ವ ಮುಂತಾದ ವಿಶೇಷಣಗಳನ್ನು ಉಂಟುಮಾಡುವುದು. ಅಂತಹ ಮಾಯೆಯು ಆತ್ಮ ಜ್ಞಾನದಿಂದ ಮುಕ್ತಿಯು ಲಭಿಸುವವರೆಗೂ ನಾಶವಾಗದಿರುವುದರಿಂದ ಕೂಟಸ್ಥವೆಂಬ ಅರ್ಥವನ್ನು ಬೋಧಿಸುವ ಅಕ್ಷರ ಶಬ್ದದಿಂದ ಕರೆಯಲ್ಪಡುವುದು. ಅಥವಾ ಓಂಕಾರವೆಂಬ ಏಕಾಕ್ಷರವುಳ್ಳವಳು. ಸಕಲ ಶಬ್ದಗಳಿಗೂ ಶಬ್ದಗಳ ಮೂಲಕ ಅರ್ಥಗಳಿಗೂ ಪ್ರಕೃತಿಯು ಓಂಕಾರವು. ಇದನ್ನು

ಬ್ರಹ್ಮಪ್ರತೀಕತಯಾ ತದುಪಾಸನಯಾ ತದುಭಯಪ್ರಾಪ್ತಿ ಸಾಧನತ್ವೇನ ಶಬ್ದಬ್ರಹ್ಮರೂಪಲಕ್ಷಿತಲಕ್ಷಕಶಬ್ದಃ ಪ್ರಣವಃ ಅಸ್ಯಾ ಅಸ್ತೀತಿ ವಾ। ಏಕಃ ಅಖಂಡೈಕಚೈತನ್ಯರೂಪಃ ಅಕ್ಷರಃ ಅನಶ್ವರಃ ಅವಿನಾಶೀ ಪರಮೇಶ್ವರಃ ಅರ್ಧಶರೀರತ್ವೇನ ಅಸ್ಯಾಮಸ್ತೀತಿ ವಾ। ಏಕಾನಿ ಅಕ್ಷರಾಣಿ ಮಾಯಾ ಬೀಜಾದೀನಿ ತದುಪಾಸನಾಪ್ರತೀಕತ್ವೇನ ಅಸ್ಯಾಃ ಸಂತೀತಿ ವಾ। ಅಥ ಪರಾ ಯಯಾ ತದಕ್ಷರ ಮಧಿಗಮ್ಯತೇ ಇತಿ ಶ್ರುತೇಃ। ಅಖಂಡಾಕಾರವೃತ್ತಿ ಪ್ರತಿಫಲನಯೋಗ್ಯಚೈತನ್ಯ ರೂಪತಯಾ ತದ್ವೃತ್ತಿ ವ್ಯಾಪ್ತಿಮಾತ್ರೇಣ ಅಕ್ಷರ ಪದಲಕ್ಷ್ಯ ಚೈತನ್ಯಂ ವಿಷಯತಾಸಂಬಂಧೇನ ಅಸ್ಯಾ ಅಸ್ತೀತಿ ವಾ ಏಕಾಕ್ಷರೀ। ಚಕಾರಃ ನಿರ್ಗುಣ ಬ್ರಹ್ಮಣೋಽಪಿ ಸಗುಣ ಬ್ರಹ್ಮವಿಶೇಷಸದ್ಭಾವಸಮುಚ್ಚಯಪರಃ ಸರ್ವತ್ರಾಪಿ ದ್ರಷ್ಟವ್ಯಃ। ಸಚ್ಚಿನ್ಮಯಃ ಶಿವಃ ಸಾಕ್ಷಾತ್ತಸ್ಯಾನಂದಮಯೀ ಶಿವಾ। ಇತಿ ವಚನೇನ ಸ್ತ್ರೀರೂಪಾಂ ಚಿಂತಯೇದ್ದೇವೀಂ ಪುಂರೂಪಮಥವೇಶ್ವರಮ್। ಅಥವಾ "ನಿಷ್ಕಲಂ ಧ್ಯಾಯೇ

---

ಪ್ರತ್ಯೇಕವಾಗಿ ಅವಲಂಬಿಸಿ ಪರ–ಅಪರ ಬ್ರಹ್ಮವಸ್ತುವನ್ನು ಉಪಾಸನೆ ಮಾಡಿ ಪರಾಪರ ಬ್ರಹ್ಮತಾದಾತ್ಮ್ಯವನ್ನು ಹೊಂದಬಹುದು. ಆದ್ದರಿಂದ ದೇವಿಯು ಶಬ್ದಬ್ರಹ್ಮರೂಪವಾದ ಪ್ರಣವಾಕ್ಷರವುಳ್ಳವಳು. ಅಥವಾ, ಅಖಂಡಾನಂದ ಚೈತನ್ಯರೂಪನಾದ, ಅನಶ್ವರನಾದ ಪರಮೇಶ್ವರನು ಅರ್ಧ ಶರೀರ ಭಾಗದಲ್ಲಿ ರುವವಳು. ಅಥವಾ ಮಾಯಾಬೀಜ ಮುಂತಾದ ವರ್ಣಗಳನ್ನು ಉಪಾಸನಾ ಪ್ರತೀಕವನ್ನಾಗಿ ಹೊಂದಿರುವವಳು. ಅಥವಾ ಅಖಂಡಾಕಾರವಾದ ವೃತ್ತಿ ಯಲ್ಲಿ ಚೈತನ್ಯವು ಪ್ರತಿಬಿಂಬಿಸುವುದರಿಂದ ಅಂತಹ ವೃತ್ತಿವ್ಯಾಪ್ತಿ ಮಾತ್ರ ವಿವಕ್ಷೆಯಿಂದ ಅಕ್ಷರ ಪದದ ಅರ್ಥವಾದ ಚೈತನ್ಯಕ್ಕೆ ವಿಷಯಳಾಗುವವಳು. "ಅಥಪರಾ ಯಯಾ ತದಕ್ಷರಮಧಿಗಮ್ಯತೇ" ಎಂಬ ಶ್ರುತಿಯು ವೃತ್ತಿ ವ್ಯಾಪ್ತಿಯನ್ನು ಅಕ್ಷರ ರೂಪ ಪರಬ್ರಹ್ಮ ವಸ್ತುವಿನಲ್ಲಿ ವರ್ಣಿಸುವುದು. ಸುಗುಣ ಬ್ರಹ್ಮ ವಸ್ತುವಿನಲ್ಲಿರುವ ವಿಶೇಷಣ ಧರ್ಮಗಳು ನಿರ್ಗುಣ ಬ್ರಹ್ಮ ವಸ್ತುವಿನಲ್ಲಿಯೂ ಕಲ್ಪಿತವಾಗಿ ಸಂಸಕ್ತವಾಗುವುವು ಎಂಬುದನ್ನು ಚಕಾರವು ಬೋಧಿಸುತ್ತದೆ. ನಿರ್ಧರ್ಮಕವಸ್ತುವಿನಲ್ಲಿ ಔಪಾಧಿಕ ಧರ್ಮಸಂಬಂಧಗಳು

ತ್ಸಚ್ಚಿದಾನಂದ ವಿಗ್ರಹಾಮ್ " ಇತಿ ಸ್ಮೃತ್ಯಾ ಚ " ತ್ವಂ ಸ್ತ್ರೀ ತ್ವಂ ಪುಮಾನ್ '' ಇತಿ ಶ್ವೇತಾಶ್ವತರೋಪನಿಷದಿ ಉಪಾಧಿ ಕೃತ ನಾನಾರೂಪಸಂಭವೋಕ್ತೇಶ್ಚ । ಅತ ಏವ " ಸೇಯಂ ದೇವತೈಕ್ಷತ" ಇತ್ಯಾದೌ " ತತ್ಸತ್ಯಂ ಸ ಆತ್ಮಾ " ಇತ್ಯಂತೇ ಚ ಶ್ರುತೌ ಸ್ತ್ರೀಲಿಂಗಾಂತದೇವತಾದಿಪದಾನಾಂ ತತ್ಸತ್ಯ ಮಿತಿ ನಪುಂಸಕಾಂತಸ್ಯ ಸ ಆತ್ಮೇತಿ ಪುಲ್ಲಿಂಗಾತ್ಮಶಬ್ದಸ್ಯ ಏಕಾರ್ಥತ್ವಂ ಅವಿವಕ್ಷಿತೋಪಾಧಿಮತ್ತ್ವಯಾ ತತ್ತ್ವಂಪದ ಲಕ್ಷ್ಯಾರ್ಥಸ್ಯೈಕತ್ವಾತ್। ತಸ್ಮಾತ್ ತತ್ತ್ವಂ ಪದಲಕ್ಷ್ಯಾರ್ಥೇ ಸರ್ವೇಽಪಿ ಗುಣಾ ವರ್ಣಿತುಂ ಸಂಭವಂತೀತಿ ಹಯಗ್ರೀವೇಣ ಅಸ್ಯಾಂ ತ್ರಿಶತ್ಯಾಂ ಬಹವಶ್ಚಕಾರಾ ಉಪಾತ್ತಾಃ। ತೇನ ವಯಂ ಸರ್ವೇಷಾಂ ಸರ್ವತ್ರ ನ ಪಾರ್ಥಕ್ಯೇನ ಪ್ರಯೋಜ ನಾಂತರಂ ಪಶ್ಯಾಮಃ ॥

---

ಸಂಭವಿಸುವುದರಲ್ಲಿ " ಸಚ್ಚಿನ್ಮಯಃ ಶಿವಃ ಸಾಕ್ಷಾತ್ ತಸ್ಯಾನಂದಮಯೀ ಶಿವಾ, ಸ್ತ್ರೀರೂಪಾಂ ಚಿಂತಯೇದ್ದೇವೀಂ ಪುಂರೂಪಾಮಥವೇಶ್ವರೀಮ್। ಅಥವಾ ನಿಷ್ಕಲಂ ಧ್ಯಾಯೇತ್ ಸಚ್ಚಿದಾನಂದ ವಿಗ್ರಹಾಮ್," " ತ್ವಂ ಸ್ತ್ರೀ ತ್ವಂಪುಮಾನಸಿ" ಮುಂತಾದ ಶ್ರುತಿಸ್ಮೃತಿ ವಚನಗಳು ಪ್ರಮಾಣ ಭೂತಗಳಾ ಗಿವೆ. ಔಪಾಧಿಕ ಧರ್ಮಗಳು ನಿರ್ಧರ್ಮಕ ವಸ್ತುವಿನಲ್ಲಿ ಬರುವುದರಿಂದ " ಸೇಯಂ ದೇವತೈಕ್ಷತ, ತತ್ ಸತ್ಯಂ ಸ ಆತ್ಮಾ" ಎಂಬ ಶ್ರುತಿ ಭಾಗದಲ್ಲಿ ಸ್ತ್ರೀಲಿಂಗಾಂತವಾದ ದೇವತಾ ಶಬ್ದ, ನಪುಂಸಕಲಿಂಗಾಂತವಾದ ತತ್ಸತ್ಯಂ ಎಂಬ ಶಬ್ದ " ಸ ಆತ್ಮಾ" ಎಂಬ ಪುಲ್ಲಿಂಗಾಂತ ಶಬ್ದಗಳು ಉಪಾಧಿ ವಿವಕ್ಷೆ ಯಿಲ್ಲದಿರುವುದರಿಂದ ತತ್ತ್ವಂಪದಲಕ್ಷ್ಯವಾದ ಚೈತನ್ಯವೆಂಬ ಏಕಾರ್ಥವನ್ನು ಬೋಧಿಸುವುವು. ಆದ್ದರಿಂದ ತತ್ತ್ವಂಪದ ಲಕ್ಷ್ಯಾರ್ಥದಲ್ಲಿ ಸರ್ವ ಗುಣ ಗಳನ್ನೂ ವರ್ಣಿಸಲು ಅವಕಾಶ ವಿದೆಯೆಂದು ಸೂಚಿಸಲು ಈ ನಾಮ ತ್ರಿಶತೀ ವಿದ್ಯೆಯಲ್ಲಿ ಹಯಗ್ರೀವ ಮುನಿಯು ಅನೇಕ ಚಕಾರಗಳನ್ನು ಸಮುಚ್ಚಯ ವೆಂಬ ಅರ್ಥಲಾಭಕ್ಕೋಸ್ಕರ ಪ್ರಯೋಗಿಸಿರುವನು, ಆದುದರಿಂದ ಅಲ್ಲಲ್ಲಿರುವ ಚಕಾರಗಳಿಗೆ ಬೇರೆ ಪ್ರಯೋಜನವನ್ನು ಅನ್ವೇಷಣ ಮಾಡಬೇಕಾಗಿಲ್ಲ. ಏಕಂ + ಅಕ್ಷರಂ = ಯಸ್ಯಾಃ, ಏಕಃ + ಅಕ್ಷರಃ = ಯಸ್ಯಾ ಎಂದು ವಿಗ್ರಹವು.

## ೩. ಓಂ ಏಕಾನೇಕಾಕ್ಷರಾಕೃತಯೇ ನಮಃ ।

ಏಕಾನೇಕಾಕ್ಷರಾಕೃತಿಃ ಏಕಂ ಈಶ್ವರಪ್ರತಿಬಿಂಬೋಪಾಧಿತಯಾ ಶುದ್ಧ ಸತ್ತ್ವಪ್ರಧಾನಂ ಅಕ್ಷರಮಜ್ಞಾನಂ, ಅನೇಕಾನಿ ಮಲಿನಸತ್ತ್ವ ಪ್ರಧಾನತಯಾ ಜೀವೋಪಾಧಿ ಭೂತಾನ್ಯಕ್ಷರಾಣ್ಯಜ್ಞಾನಾನಿ, "ಮಾಯಾ ಚಾವಿದ್ಯಾ ಚ ಸ್ವಯಮೇವ ಭವತೀ"ತಿ ಶ್ರುತೇಃ ಏಕಂ ಚಾನೇಕಾನಿ ಚ ಏಕಾನೇಕಾನಿತಾನಿ ಚ ಅಕ್ಷರಾಣಿ ಚ ತಾನಿ ತಥಾ "ಮಾಯಾಂ ತು ಪ್ರಕೃತಿ" ಮಿತಿ ಶ್ರುತೇಃ। ತೇಷ್ವಾಕೃತಯಃ ಪ್ರತಿಬಿಂಬಾನ್ಯವಚ್ಛಿನ್ನಾನಿ ವಾ ಚೈತನ್ಯಾನಿ ಘಟಸ್ಥೋದಕಾವಚ್ಛಿನ್ನಪ್ರತಿಬಿಂಬಿತಾಕಾಶವದ್ಯಸ್ಯಾಃ ಸಾ ತಥಾ। ಅಥವಾ ಏಕಾನಿ ಚ ಪ್ರಣವಾದ್ಯಾನಿ ಅನೇಕಾನಿ ಚ ಅಕಾರಾದಿ ಕ್ಷಕಾರಾಂತಾನಿ ಅಕ್ಷರಾಣಿ ವರ್ಣಾಃ ಆಕೃತಿಃ ಸ್ವರೂಪಂ ಯಸ್ಯಾಃ ಸಾ, ಮಾತೃಕಾಸ್ವರೂಪತ್ವೇನ ವಾ "ಅಕಾರಾದಿ ಕ್ಷಕಾರಾಂತಾ ಮಾತೃಕೇತ್ಯಭಿಧೀಯತೇ" ಇತಿ

---

೩. ಏಕ, ಮತ್ತು ಅನೇಕವಾದ ಅಕ್ಷರಗಳು ಅಜ್ಞಾನವಿಶೇಷಗಳು; ಈಶ್ವರ ರೂಪವಾದ ಚೈತನ್ಯ ಪ್ರತಿ ಬಿಂಬಕ್ಕೆ ಉಪಾಧಿಯಾಗಿರುವ ಶುದ್ಧ ಸತ್ತ್ವ ಪ್ರಧಾನವಾದ ಅಜ್ಞಾನವು ಏಕಾಕ್ಷರವು. ಜೀವ ಪ್ರತಿಬಿಂಬೋಪಾಧಿ ರೂಪವಾಗಿರುವ ಮಲಿನ ಸತ್ತ್ವಪ್ರಧಾನವಾದ ಅಜ್ಞಾನಗಳು ಅನೇಕಾಕ್ಷರಗಳು. "ಮಾಯಾ ಚಾವಿದ್ಯಾ ಚ ಸ್ವಯಮೇವ ಭವತಿ" ಎಂಬ ಶ್ರುತಿಯಿಂದ ಜೀವೇಶ್ವರ ಪ್ರತಿಬಿಂಬೋಪಾಧಿಗಳ ಭೇದವು ವ್ಯಕ್ತವಾಗುವುದು. ಇವು ಮಾಯಾ ಶಬ್ದದಿಂದ ಕರೆಯಲ್ಪಡುವುವೂ ಪ್ರಕೃತಿ ರೂಪಗಳೂ ಆಗಿವೆ. ಮಾಯಾಂತು ಪ್ರಕೃತಿಂ ಎಂಬ ಶ್ರುತಿಯು ಈ ಅರ್ಥದಲ್ಲಿ ಪ್ರಮಾಣವಾಗಿರುವುದು. ಆ ಅಕ್ಷರವೆಂಬ ಅಜ್ಞಾನಗಳಲ್ಲಿ ಚೈತನ್ಯವು ಪ್ರತಿಬಿಂಬ ಅಥವಾ ಅವಚ್ಛಿನ್ನ ರೂಪವನ್ನು ಹೊಂದುವುದು. ಗಡಿಗೆಯಲ್ಲಿರುವ ನೀರಿನಲ್ಲಿ ಆಕಾಶವು ಪ್ರತಿ ಬಿಂಬರೂಪ ಅಥವಾ ಅವಚ್ಛಿನ್ನರೂಪಗಳಿಂದ ಇರುವುದು. ಅದರಂತೆ ಇರುವ ಚೈತನ್ಯವುಳ್ಳವಳು. ಅಥವಾ ಪ್ರಣವ ಮುಂತಾದುದು ಏಕಾಕ್ಷರವು. ಅಕಾರ ಮೊದಲುಗೊಂಡು ಕ್ಷಕಾರ ಪರ್ಯಂತವಿರುವ ವರ್ಣಗಳು ಅನೇಕಾಕ್ಷರಗಳು ಅಂತಹ ಎಲ್ಲ ವರ್ಣಗಳು ಸ್ವರೂಪವಾಗಿ ಉಳ್ಳವಳೂ "ಅಕಾರಾದಿ ಕ್ಷಕಾರಾಂತಾ

ವಚನಾತ್। ಅಥವಾ ಏಚ ಕಶ್ಚ ಏಕಾರಕಕಾರೌ ತೌ ಚೇತ ರಾಣ್ಯ ನೇಕಾಕ್ಷರಾಣಿ ಚ ಸರ್ವಂ ಮಿಳಿತ್ವಾ ಪಂಚದಶ ವರ್ಣಾತ್ಮಿಕಾ ಮೂಲವಿದ್ಯಾ ಆಕೃತಿಃ ಸ್ವರೂಪಂ ಯಸ್ಯಾಃ ಸಾ। ಸಾಕ್ಷಿತಯಾ ಏಕೀಭೂತಾ ಅನೇಕಾಕ್ಷರೇಷು ಅನೇಕಾಜ್ಞಾನೇಷು ಆಕೃತಿಃ ಸ್ವರೂಪಂ ಶೋಧಿತ ತತ್ತ್ವಂಪದಾರ್ಥ ಸಾಮರಸ್ಯಾತ್ಮಕಂ ಯಸ್ಯಾಃ ಸಾ ತಥಾ।

## ೪. ಓಂ ಏತತ್ತದಿತ್ಯನಿರ್ದೇಶ್ಯಾಯೈ ನಮಃ।

ಏತತ್ತದಿತ್ಯನಿರ್ದೇಶ್ಯಾ। ಏತತ್ ಏತತ್ಕಾಲೇಽಪಿ ಇಯತ್ತಾ ಪರಿಚ್ಛೇದವದ್ವಸ್ತು ತತ್ ಪರೋಕ್ಷಮನಿಶ್ಚಿತ ಸ್ವರೂಪಂ। ಏತಚ್ಚ ತಚ್ಚ ಏತತ್ತತ್ ಇತಿಕಾರಃ ಇತ್ಥಂಭಾವೇ ತೃತೀಯಾರ್ಥೇ ತಥಾಚ ಏತತ್ತ್ವ ತತ್ತ್ವಾಭ್ಯಾ ಮಿತ್ಯರ್ಥಃ। ಏತತ್ತದಿತ್ಯನೇನ ನಿರ್ದೇಷ್ಟುಂ ನಿರ್ವಕ್ತುಂ ಯೋಗ್ಯಾ ನಿರ್ದೇಶ್ಯಾ ಸಾ ನ ಭವ

---

ಮಾತೃಕೇತ್ಯಭಿಧೀಯತೇ'' ಎಂಬ ವಚನದಿಂದ ವರ್ಣಗಳೆಲ್ಲವೂ ಮಾತೃಕಾ ರೂಪವಾದ್ದರಿಂದ ಮಾತೃಕಾಕಾರವುಳ್ಳವಳೂ ಎಂದು ಅರ್ಥವು. ಅಥವಾ ''ಏ'' + ''ಕ'' ಎಂಬ ಎರಡು ವರ್ಣಗಳು, ಮಿಕ್ಕ ಅನೇಕಾಕ್ಷರಗಳು ಸೇರಿ ಹದಿನೈದು ವರ್ಣಸ್ವರೂಪವಾದ ಮಂತ್ರದ ಆಕೃತಿಯುಳ್ಳವಳು. ಅಥವಾ ಏಕಭೂತವಾಗಿ ಅನೇಕಾಜ್ಞಾನಗಳಲ್ಲಿರುವ ಶೋಧಿತತತ್ತ್ವಂ ಪದಾರ್ಥಸಾಮರಸ್ಯವೆಂಬ ಆಕಾರವುಳ್ಳವಳು. ಅಕ್ಷರಂ ಚ + ಅಕ್ಷರಾಣಿ–ಚಅಕ್ಷರಾಣಿ= ಏಕಂ ಚ +ಅನೇಕಾನಿ ಚ + ಏಕಾನೇಕಾನಿ ತಾನಿ ಅಕ್ಷರಾಣಿ ಚ, ತೇಷು ಆಕೃತಿಃ ಯಸ್ಯಾಃ, ಏಕಾನಿಚ ಅನೇಕಾನಿಚ, ತಾನಿ ಅಕ್ಷರಾಣಿ ಆಕೃತಿರ್ಯಸ್ಯಾಃ, ಏ- ಚ + ಕಶ್ಚ–ಏಕೌ, ತೌಚ + ಅನೇಕಾಕ್ಷರಾಣಿ ಚ, ತಾನಿ ಆಕೃತಿರ್ಯಸ್ಯಾಃ, ಸಾ ಎಂದು ವಿಗ್ರಹವಾಕ್ಯವು.

೪. ವರ್ತಮಾನ ಕಾಲದಲ್ಲಿ ಇಯತ್ತೆಯಿಂದ ಪರಿಚ್ಛಿನ್ನ ವಸ್ತುವು ಏತತ್ ಎಂದೂ ಅನಿಶ್ಚಿತವಾದ ಪರೋಕ್ಷ ವಸ್ತುವು ತತ್ ಎಂದೂ ಕರೆಯಲ್ಪಡುವುವು. ''ಇತಿ'' ಶಬ್ದವು ಈ ರೀತಿಯಾಗಿ ಎಂಬ ಅರ್ಥಕ್ಕೆ ಬೋಧಕವಾಗಿದೆ. ಇಯತ್ತಾ ಪರಿಚ್ಛೇದ ರೂಪದಿಂದಾಗಲಿ ಅನಿಶ್ಚಿತ ಪರೋಕ್ಷರೂಪ

**ತೀತಿ ಅನಿರ್ದೇಶ್ಯಾ । ಲೋಕೇ ಸವಿಶೇಷೋ ಹಿ ಪದಾರ್ಥಃ ಪರೋಕ್ಷತ್ವಾಪರೋಕ್ಷತ್ವಾದಿ ಧರ್ಮವಿಶೇಷೇಣ ತದ್ಗತೇನ ನಿರ್ವಕ್ತುಂ ಶಕ್ಯಃ । ಶಬ್ದಪ್ರವೃತ್ತಿನಿಮಿತ್ತಜಾತಿಗುಣ ಕ್ರಿಯಾಷಷ್ಠ್ಯರ್ಥಾನಾಂ ಯತ್ರ ಸಂಬಂಧೋ ನಾಸ್ತಿ "ಅಶಬ್ದಮಸ್ಪರ್ಶಮರೂಪಮವ್ಯಯಮ್" "ನಿರ್ಗುಣಂ ನಿಷ್ಕಲಂ" ಇತ್ಯಾದಿಶ್ರುತ್ಯಾ' ತಾದೃಗ್ವಸ್ತು ಕೇನ ಕರಣೇನ ಕೇನ ವಾ ವಚನೇನ ನಿರ್ದೇಷ್ಟುಂ ಶಕ್ಯಮ್। ಯದ್ವಾಚಾನಭ್ಯುದಿತಮ್" ಇತಿ ಶ್ರುತೇಃ। ಅತಃ ಏತತ್ತದಿತ್ಯನಿರ್ದೇಶ್ಯಾ ವಾಙ್ಮನಸಾ ತೀತೇತ್ಯರ್ಥಃ । ಅಥವಾ ಏತತ್ ಪ್ರತ್ಯಕ್ಷಾದಿಪ್ರಮಾಣಸಿದ್ಧಂ ಕಾರ್ಯಂ ಪಶ್ಚಾದ್ಭಾವಿ । ತತ್ ಪರೋಕ್ಷತ್ವಾದಿ ವಿಶಿಷ್ಟಂ ಪೂರ್ವಕಾಲಸಂಬಂಧಿ ವ್ಯವಹಿತಂ ಕಾರಣಮುಚ್ಯತೇ । ಇತಿ ಶಬ್ದಃ ಉಭಯತ್ರ ಸಂಬಂಧನೀಯಃ। ಕಾರ್ಯಮಿತಿ ಕಾರಣಮಿತ್ಯಪಿ ಶುದ್ಧಚೈತನ್ಯರೂಪಾ ಅನಿರ್ದೇಶ್ಯಾ, ಕಾರ್ಯತ್ವ**

---

ದಿಂದಾಗಲಿ ದೇವಿಯು ನಿರ್ದೇಶಿಸಲು ಅಶಕ್ಯಳಾಗಿರುವಳು. ಲೋಕದಲ್ಲಿ ವಿಶೇಷ ಧರ್ಮಸಹಿತವಾದ ಪದಾರ್ಥವು ಪರೋಕ್ಷ ಅಥವಾ ಪ್ರತ್ಯಕ್ಷ ಎಂಬ ಬಗೆಯಿಂದ ನಿರ್ದೇಶಿಸಲು ಅರ್ಹವಾಗಿದೆ. ಒಂದು ಶಬ್ದವು ಒಂದು ವ್ಯಕ್ತಿಯನ್ನು ಬೋಧಿಸಲು ಪ್ರವರ್ತಿಸಬೇಕಾದರೆ ವ್ಯಕ್ತಿಯಲ್ಲಿ ಜಾತಿ, ಗುಣ, ಕ್ರಿಯಾ ಸಂಬಂಧಗಳ ಪೈಕಿ ಯಾವುದಾದರೊಂದು ಇರುವುದು ಅವಶ್ಯಕವು. ಪರಬ್ರಹ್ಮ ವಸ್ತುವು "ಅಶಬ್ದಮಸ್ಪರ್ಶಮರೂಪಮವ್ಯಯಂ" ನಿರ್ಗುಣಂ ನಿಷ್ಕಲಂ ಎಂಬ ಶ್ರುತಿಯಿಂದ ಜಾತ್ಯಾದಿ ಧರ್ಮರಹಿತವಾಗಿ ಪ್ರತಿಪಾದಿಸಲ್ಪಟ್ಟಿದೆ. ಅಂತಹ ವಸ್ತುವು ಯಾವ ಸಾಧನದಿಂದ ಯಾವ ವಚನದಿಂದ ನಿರ್ದೇಶಿಸಲು ಅರ್ಹವಾದೀತು? ಶಬ್ದವು ನಿರ್ದೇಶಿಸಲು ಅನರ್ಹವೆಂಬ ಅರ್ಥವನ್ನು "ಯದ್ವಾಚಾನಭ್ಯುದಿತಂ" ಎಂಬ ಶ್ರುತಿಯು ಬೋಧಿಸುತ್ತದೆ. ಆದ್ದರಿಂದ ಏತತ್ ತತ್ ಎಂಬುದಾಗಿ ನಿರ್ದೇಶಿಸಲು ಅನರ್ಹಳು. ಅಥವಾ ಪ್ರತ್ಯಕ್ಷಾದಿ ಪ್ರಮಾಣಕ್ಕೆ ಗೋಚರವಾಗಿ ಉತ್ತರ ಕಾಲದಲ್ಲಿ ಬರುವ ಕಾರ್ಯವು ಏತತ್ ಎಂದೂ ಪರೋಕ್ಷವಾಗಿ ಪೂರ್ವಕಾಲದಲ್ಲಿರುವ ವ್ಯವಹಿತ ವಸ್ತುವು ತತ್ ಎಂದೂ ಹೇಳಲ್ಪಡುವುದು. ಇತಿ ಶಬ್ದವನ್ನು ಏತತ್ + ತತ್ ಎಂಬ ಎರಡು

**ಕಾರಣತ್ವಘಟಕೋಪಾಧಿವಿರಹಿತತ್ವೇನ ಕಾರ್ಯಕಾರಣ ಭಾವಾಭಾವೇ ತದ್ವಾಚಕಶಬ್ದೈರ್ವಿಷಯೀಕರ್ತುಮಶಕ್ಯತ್ವಾತ್। ಅಥವಾ ಏತತ್ ಅಪರೋಕ್ಷತಯಾ ಅಹಮಿತಿ ಪ್ರತೀಯಮಾನಂ ಜೀವಚೈತನ್ಯಂ ತ್ವಂಪದವಾಚ್ಯಾರ್ಥಃ, ತತ್ ಪರೋಕ್ಷತಯಾ ಪ್ರತೀಯಮಾನಮೀಶ್ವರಚೈತನ್ಯಂ ತತ್ಪದ ವಾಚ್ಯಾರ್ಥಃ ಇತಿ–ಶಬ್ದ ಏವಕಾರಾರ್ಥಃ। ತಥಾ ಚ ವಾದಿ ಭೇದ ಸಿದ್ಧಾಂತ ಅನೂದಿತಃ। ಸಾಂಖ್ಯಮತೇ ಪ್ರಕೃತಿರ್ಜಗತ್ಕರ್ತ್ರೀ, ಜೀವೋ ನಾನಾಚೇತನೋ ಭೋಕ್ತಾ ಇತ್ಯತ ಈಶ್ವರ ಏವ ನಾಸ್ತೀತ್ಯಂಗೀಕೃತಮ್ । ಭಾಗವತಮತೇ ತು "ಗುಣೀ ಸರ್ವವಿತ್" ಇತಿ ಶ್ರುತೇಃ ನಿತ್ಯಗುಣವಿಶಿಷ್ಟಾತ್ ಪರಮೇಶ್ವರಾದ್ವಿಷ್ಣೋರ್ಜೀವಾನಾಮುತ್ಪತ್ತಿವಿನಾಶವತ್ತ್ವೇನ ಅನಿತ್ಯತ್ವಾತ್ ಸ ಏವ ಭಗವಾನ್ ಪಾರಮಾರ್ಥಿಕಃ ಏಕ ಇತ್ಯಂಗೀಕೃತಮ್ । ತದುಭಯವಾದಿಸಿದ್ಧಾಂತಸ್ಯ ಔಪನಿಷದ**

---

ಶಬ್ದಗಳ ಜೊತೆಗೆ ಸೇರಿಸಿ ಅರ್ಥಮಾಡಿದರೆ ಶುದ್ಧ ಚೈತನ್ಯ ರೂಪಳಾದ ದೇವಿಯು ಕಾರ್ಯಕಾರಣ ರೂಪಗಳನ್ನು ಕೊಡುವ ಸರ್ವೋಪಾಧಿವರ್ಜಿತಳಾಗಿ ಕಾರ್ಯಕಾರಣ ಭಾವದಿಂದ ಮುಕ್ತಳಾಗಿರುವುದರಿಂದ ಕಾರ್ಯಕಾರಣರೂಪ ಗಳಿಂದ ನಿರ್ದೇಶಾನರ್ಹಳು ಎಂದು ಸ್ಪಷ್ಟವಾಗುವುದು. ಅಥವಾ ಅಪರೋಕ್ಷ ವಾಗಿ ಅಹಂ ಎಂದು ತೋರುತ್ತಲಿರುವ ತ್ವಂಪದದ ವಾಚ್ಯಾರ್ಥವಾದ ಜೀವ ಚೈತನ್ಯವು ಏತತ್ ಶಬ್ದದ ಅರ್ಥವು. ಪರೋಕ್ಷವಾಗಿ ತೋರುವ ತತ್ಪದ ವಾಚ್ಯಾ ರ್ಥವಾದ ಈಶ್ವರ ಚೈತನ್ಯವು ತತ್ ಶಬ್ದದ ಅರ್ಥವು. ಇತಿ ಎಂಬುದು ಅವಧಾರ ಣಾರ್ಥವನ್ನು, ಬೋಧಿಸುತ್ತದೆ. ಈ ವ್ಯಾಖ್ಯಾನದಿಂದ ಅನೇಕವಾದಿಗಳ ಸಿದ್ಧಾಂ ತವು ಸೂಚಿಸಲ್ಪಡುವುದು. ಸಾಂಖ್ಯಮತದಲ್ಲಿ ಜಗತ್ಕರ್ತೃವಾದ ಪ್ರಕೃತಿ ತತ್ತ್ವ ಭೋಕ್ತೃಸ್ವರೂಪಾನೇಕಚೇತನಾತ್ಮಕ ಜೀವತತ್ತ್ವಗಳೆರಡರಿಂದ ಸಕಲಾರ್ಥಗಳು ನಿರ್ವಾಹವಾಗುವುದರಿಂದ ಈಶ್ವರನು ಇಲ್ಲವೆಂದು ಸಿದ್ಧಾಂತವು ಅಂಗೀಕರಿಸಲ್ಪಟ್ಟಿದೆ. "ಗುಣೀ ಸರ್ವವಿತ್" ಎಂಬ ಶ್ರುತ್ಯನುಸಾರವಾಗಿ ನಿತ್ಯಾನೇಕ ಕಲ್ಯಾಣಗುಣ ವಿಶಿಷ್ಟ ವಿಷ್ಣುವಿನಿಂದ ಜೀವಸೃಷ್ಟಿಯನ್ನು ಒಪ್ಪುವ ಭಾಗವತಮತದಲ್ಲಿ ಜೀವರಿಗೆ ಉತ್ಪತ್ತಿನಾಶಗಳಿರುವುದರಿಂದ ಅಶಾಶ್ವತರಾಗಿರು

ಮತೇ ನಿರಸ್ತತ್ವಾತ್ ತದುಭಯ ವಿಧಯಾ ಅನಿರ್ದೇಶ್ಯಾ, ಪರಮಾರ್ಥಸಚ್ಚಿದಾನಂದರೂಪತಯಾ ಛಾಂದೋಗ್ಯಗತ ದೇವತಾ ಶಬ್ದಾರ್ಥಸ್ಯ ಪ್ರತಿಪಾದನಾದಿತಿ ಭಾವಃ। ಅಥವಾ ತಟಸ್ಥೇಶ್ವರವಾದಿಕಾಣಾದಾದಿಸಿದ್ಧಾಂತವತ್ ವ್ಯವಸ್ಥಿತ ಭೇದವಜ್ಜೀವೇಶ್ವರ ರೂಪತಯಾ ಅನಿರ್ದೇಶ್ಯಾ ಭೇದವ್ಯವಸ್ಥಾಯಾ ಏವ ಸಾಧಿತುಮಶಕ್ಯತ್ವಾದಿತಿ ಏತತ್ತ ದಿತ್ಯನಿರ್ದೇಶ್ಯಾ।

## ೫. ಓಂ ಏಕಾನಂದಚಿದಾಕೃತಯೇ ನಮಃ।

ಏಕಾನಂದಚಿದಾಕೃತಿಃ।ಏಕಾ ಮುಖ್ಯಾ ಮೋಕ್ಷರೂಪತ್ವೇನ ಪ್ರಾಪಿತ್ಸಿತಾ। ಆನಂದಃ ಸುಖಂ। ಚಿತ್ ಚೈತನ್ಯಂ ಪ್ರಕಾಶ ಜ್ಞಾನಂ। ಆನಂದಾಶ್ಚಾಸೌ ಚಿಚ್ಚ ಆನಂದಚಿತ್ ಏಕಾ ಚಾಸಾವಾನಂದಚಿಚ್ಚ ಏಕಾನಂದಚಿತ್ ಆಕೃತಿಃ ಸ್ವರೂಪಂ ಯಸ್ಯಾಃ ಸಾ ಸಚ್ಚಿದಾನಂದ ಬ್ರಹ್ಮರೂಪಲಕ್ಷಣವತೀತ್ಯರ್ಥಃ " ವಿಜ್ಞಾ

---

ವುದರಿಂದ ವಿಷ್ಣು ಒಬ್ಬನೇ ಪಾರಮಾರ್ಥಿಕ ತತ್ತ್ವವೆಂಬ ಸಿದ್ಧಾಂತವು ಅಂಗೀಕರಿಸಲ್ಪಟ್ಟಿದೆ. ಔಪನಿಷದ ಮತದಲ್ಲಿ ಆ ಎರಡು ಸಿದ್ಧಾಂತಗಳನ್ನು ಖಂಡಿಸಿರುವುದರಿಂದ ಜೀವವೇ ತತ್ತ್ವ ಅಥವಾ ಈಶ್ವರನೇ ತತ್ತ್ವವೆಂದು ಜೀವೇಶ್ವರ ಮಾತ್ರ ರೂಪದಿಂದ ನಿರ್ದೇಶಿಸಲು ಅನರ್ಹಳು. ಛಾಂದೋಗ್ಯೋಪನಿಷತ್ತಿನಲ್ಲಿರುವ ದೇವತಾ ಶಬ್ದವನ್ನು ಸಚ್ಚಿದಾನಂದ ಪರವೆಂದು ಪ್ರತಿಪಾದಿಸಿದೆ, ಅಥವಾ ತಟಸ್ಥೇಶ್ವರವಾದಿ ತಾರ್ಕಿಕಾದಿಸಿದ್ಧಾಂತದಂತೆ ಭೇದವ್ಯವಸ್ಥೆಯನ್ನು ಸಿದ್ಧಾಂತ ಮಾಡಲು ಅಸಾಧ್ಯವಾದುದರಿಂದ ವ್ಯವಸ್ಥಿತ ಭೇದದಿಂದ ಕೂಡಿದ ಜೀವ ಈಶ್ವರ ತತ್ತ್ವಗಳ ರೂಪದಿಂದ ನಿರ್ದೇಶಿಸಲು ಅನರ್ಹಳು. ಏತಚ್ಚ + ತಚ್ಚ= ಏತತ್ತತ್, ಏತತ್ತತ್ + ಇತಿ ಏತತ್ತದಿತಿ, ಏತತ್ತದಿತಿ ನಿರ್ದೇಷ್ಟುಂ ಶಕ್ಯಾ ನ ಭವತೀತಿ ತಥಾ, ಎಂದು ವಿಗ್ರಹವು.

೫. ಮೋಕ್ಷರೂಪವಾಗಿ ಲಭಿಸುವುದರಿಂದ ಮುಖ್ಯವಾದ ಆನಂದ ರೂಪವಾದ ಚೈತನ್ಯ ಜ್ಞಾನವುಳ್ಳವಳು, ಸಚ್ಚಿದಾನಂದವೆಂಬ ಬ್ರಹ್ಮಸ್ವರೂಪ ಲಕ್ಷಣವುಳ್ಳವಳು ಎಂದು ತಾತ್ಪರ್ಯವು. ಆನಂದ ಪ್ರಕಾಶಗಳು ಬ್ರಹ್ಮನಸ್ವರೂಪ

ನಮಾನಂದಂ ಬ್ರಹ್ಮ" "ಆನಂದೋ ಬ್ರಹ್ಮೇತಿ ವ್ಯಜಾನಾತ್" ಇತಿ ಶ್ರುತೇಃ "ಆನಂದಾದಯಃ ಪ್ರಧಾನಸ್ಯ" ಇತಿನ್ಯಾಯಾಚ್ಚ ದೀಪ್ತಿಸ್ವರೂಪಪ್ರಕಾಶಾತ್ಮಕಪರಮಾನಂದಸ್ವರೂಪಸ್ಯ ಜೀವನ್ಮುಕ್ತ್ಯವಸ್ಥಾಯಾಂ ಪರಮಾತ್ಮಜ್ಞಾನವತ್ ಪುರುಷಾನುಭವರೂಪಪ್ರತ್ಯಕ್ಷಪ್ರಮಾಣಗೋಚರತ್ವಮಸ್ಯಾ ಇತಿ ವಾ ತಥಾ । ಅಥವಾ ಏಕೇಷಾಮಾನುಭಾವಿಕಾನಾಂ ಯೋಗಿನಾಮಾನಂದಸಾಕ್ಷಾತ್ಕಾರರೂಪಾ ಆಕೃತಿಃ ನಿರಾವರಣಪ್ರಕಾಶರೂಪಾಯಸ್ಯಾಃ ಸಾ ತಥಾ । ಅಥವಾ ಆನಂದಃ ಶಿವಾ, ಚಿತ್ ಪರಮೇಶ್ವರಃ ಏಕೇ ಮೂರ್ತಿಭೇದರಹಿತೇ ಆನಂದಚಿತೌ ಆಕೃತಿರ್ಯಸ್ಯಾಃ ಸಾ ತಥಾ ।

---

ಲಕ್ಷಣವೆಂಬುದನ್ನು "ವಿಜ್ಞಾನಮಾನಂದಂ ಬ್ರಹ್ಮ, ಆನಂದೋ ಬ್ರಹ್ಮೇತಿ ವ್ಯಜಾನಾತ್" ಎಂಬ ಶ್ರುತಿವಚನಗಳೂ ಆನಂದಾದಯಃ ಪ್ರಧಾನಸ್ಯ ಎಂಬ ಬ್ರಹ್ಮಸೂತ್ರೋಕ್ತ ನ್ಯಾಯವೂ, ಪ್ರತಿಪಾದಿಸುತ್ತವೆ. ಅಥವಾ ದೀಪ್ತಿ ಎಂಬ ಪ್ರಕಾಶಮಯವಾದ ಪರಮಾನಂದಸ್ವರೂಪವು ಜೀವನ್ಮುಕ್ತಿ ಅವಸ್ಥೆಯಲ್ಲಿ ಪರಮಾತ್ಮಜ್ಞಾನದಂತೆ ಅನುಭವ ಗೋಚರವಾಗುವುದರಿಂದ ಆನಂದಾನುಭವ ರೂಪವಾದ ಆಕಾರವುಳ್ಳವಳು, ಅಥವಾ ಆನಂದರೂಪಳಾದ ಶಿವಾ, ಚಿದ್ರೂಪನಾದ ಈಶ್ವರ, ಎಂಬೀರ್ವರ ಅಭಿನ್ನವಾದ ಆಕಾರವುಳ್ಳವಳು. ಅಥವಾ ಆನುಭವಿಕ ಯೋಗಿಗಳಿಗೆ ಆನಂದಸಾಕ್ಷಾತ್ಕಾರ ರೂಪವಾದ ನಿರಾವರಣಪ್ರಕಾಶದ ಆಕೃತಿಯುಳ್ಳವಳು. ಆನಂದಶ್ಚಾಸೌ ಚಿಚ್ಚ + ಆನಂದ ಚಿತ್, ಏಕಾ ಚಾಸೌ ಆನಂದ ಚಿಚ್ಚ ಏಕಾನಂದಚಿತ್, ಸಾ ಆಕೃತಿಃ ಸ್ವರೂಪಂ ಯಸ್ಯಾಃ ಸಾ ಏಕೇಷಾಂ + ಆನಂದಚಿತ್ + ಆಕೃತಿಃ ಯಸ್ಯಾಸ್ಸಾ, ಏಕೇ + ಆನಂದಚಿತೌ + ಆಕೃತಿಃ ಯಸ್ಯಾಸ್ಸಾ ಎಂದು ವಿಗ್ರಹವು.

೬

ಏವಮಿತ್ಯಾಗಮಾಬೋಧ್ಯಾ ಚೈಕಭಕ್ತಿಸಮರ್ಚಿತಾ ।
ಏಕಾಗ್ರಚಿತ್ತನಿರ್ಧ್ಯಾತಾ ಚೈಷಣಾರಹಿತಾದೃತಾ

೬. ಓಂ ಏವಮಿತ್ಯಾಗಮಾಬೋಧ್ಯಾಯೈ ನಮಃ ।

ಏವಮಿತ್ಯಾಗಮಾಬೋಧ್ಯಾ । ನನು ಆನಂದ ಶಬ್ದಸ್ಯ ಲಕ್ಷಣಯಾ ಆನಂದಮಯೋ ವಾಚ್ಯಃ "ಯ ಏಕೋ ಜಾಲವಾನೀಶತ ಈಶನೀಭಿಃ" ಇತಿ ಶ್ರುತ್ಯುಕ್ತೈಕತ್ವಮಪಿ ಜೀವೇ ಸಿದ್ಧ್ಯತಿ । ತಥಾ ಚ ಏಕಶ್ಚಾಸಾವಾನಂದಶ್ಚ ತಸ್ಯ ಚಿತ್ ಅಧಿಷ್ಠಾನ ಪ್ರಕಾಶಕ ಚೈತನ್ಯಮಾಕೃತಿಃ ಯಸ್ಯಾಃ ಸೇತಿ ವಿಗ್ರಹಃ ಸಂಭವತಿ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತಿ ತತ್ಪ್ರಕಾಶಕ ಚೈತನ್ಯಸ್ಯ ಪುಚ್ಛಶಬ್ದೇನ ಪರಾಮರ್ಶಾತ್ ಏವಂ ಚ ಸತಿ ಪ್ರಕಾಶಕ ನಿತ್ಯತ್ವಸ್ಯ ಪ್ರಕಾಶ್ಯ ನಿತ್ಯತ್ವಾಪೇಕ್ಷತ್ವಾತ್ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿ ಬ್ರಹ್ಮಸ್ವರೂಪ ಲಕ್ಷಣವಾಕ್ಯೇಷು ವಾಚ್ಯಾರ್ಥ ಪ್ರಾಧಾನ್ಯೇನ ವಿಧಿಮುಖೇ

---

೬. ಇಂತಹ ವಿಶೇಷರೂಪದಿಂದ ಕೂಡಿರುವಳೆಂದು ಪ್ರತ್ಯಕ್ಷವಾಗಿ ಆಗಮಗಳಿಂದ ಬೋಧಿಸಲು ಅಶಕ್ಯಳಾದವಳು. ಬ್ರಹ್ಮವಸ್ತುವಿಗೆ ಆಗಮ ಬೋಧ್ಯತ್ವವು ಸಂಭವಿಸುವುದಿಲ್ಲ. ಬೋಧ್ಯತ್ವವನ್ನು ಉಪಪಾದಿಸಬೇಕಾದರೆ ಈ ಪ್ರಕ್ರಿಯೆಯನ್ನು ಅವಲಂಬಿಸಬೇಕು. ಆನಂದ ಶಬ್ದವು ಲಕ್ಷಣಾವೃತ್ತಿಯಿಂದ ಆನಂದಮಯನನ್ನು ಬೋಧಿಸುವುದು. "ಯ ಏಕೋ ಜಾಲವಾನ್ ಈಶತ ಈಶನೀಭಿಃ" ಎಂಬ ಶ್ರುತಿಯಲ್ಲಿ ಮಾಯಾಜಾಲವುಳ್ಳ ಒಬ್ಬ ಜೀವನು ಅನೇಕ ಮಾಯಾಶಕ್ತಿಗಳಿಂದ ನಿಯಮಿಸುತ್ತಾನೆ. ಎಂದು ಹೇಳಿರುವ ಏಕತ್ವವು ಜೀವಾತ್ಮನಲ್ಲಿಯೂ ಸಂಭವಿಸುವುದು. ಆಗ ಆನಂದಮಯವೆಂಬ ಏಕಾನಂದಕ್ಕೆ ಪ್ರಕಾಶಕವಾದ ಅಧಿಷ್ಠಾನ ಚೈತನ್ಯವು ಆಕೃತಿಯಾಗಿ ಉಳ್ಳವಳು ಎಂಬ ಅರ್ಥವನ್ನು ವಿಗ್ರಹವಾಕ್ಯದಿಂದ ತೋರಿಸಬಹುದು. "ಬ್ರಹ್ಮಪುಚ್ಛಂ ಪ್ರತಿಷ್ಠಾ" ಎಂಬ ಶ್ರುತಿವಾಕ್ಯವು ಪ್ರಕಾಶಕವಾದ ಅಧಿಷ್ಠಾನ ಚೈತನ್ಯವನ್ನು

ನ್ನೈವ ಬ್ರಹ್ಮಪ್ರತಿಪಾದನೇ ಅತದ್ವ್ಯಾವೃತ್ತಿರೂಪನಿಷೇಧ ಮುಖೇನ ಲಕ್ಷಣಾರ್ಥಪ್ರಾಧಾನ್ಯೇನ ಬ್ರಹ್ಮಸ್ವರೂಪಲಕ್ಷಣ ಪ್ರತಿಪಾದನಾಯೋಗೇ ತತ್ತ್ವಮಸಿವಾಕ್ಯೇ ವೈಶಿಷ್ಟ್ಯಂ ವಾಕ್ಯಾರ್ಥಃ ಸಂಭವತೀತಿ ಚೇತ್, ನೇತ್ಯಾಹ,ಏವಮಿತ್ಯಾಗಮಾ ಬೋಧ್ಯೇತಿ, ಏವಂ ವಿಶಿಷ್ಟತಯಾ ಇತಿ ಪ್ರತ್ಯಕ್ಷಸಿದ್ಧತ್ವೇನ ಆಗಮ್ಯೈಃ ವೇದ್ಯೈಃ ಜ್ಞಾಪನೀಯಾ ನ ಭವತಿ। ಆನಂದ ಶಬ್ದಸ್ಯಾ ನಂದಮಾತ್ರ ವಾಚಕಸ್ಯ ತತ್ಪ್ರಚುರೇ ಸಂಭಾವಿತೇಷದ್ದುಃಖೇ ಜೀವೇ ಲಕ್ಷಣಾಯಾಂ ತ್ರಯೋ ದೋಷಾಃ। ಪಾರಮಾರ್ಥಿಕ ಭಿನ್ನಸತ್ತಾಕವಸ್ತ್ವಂತರಾಭಾವೇನ ತತ್ತ್ವಂಪದವಾಚ್ಯಾರ್ಥ ನಿಷ್ಠವಿಶೇಷಣದ್ವಯಸ್ಯಾನ್ಯೋನ್ಯವಿರೋಧವತ್ತಯಾ ತಮಃ ಪ್ರಕಾಶವದ್ವೈಶಿಷ್ಟ್ಯಾಯೋಗೇ ಅಖಂಡಾರ್ಥೋ ವಾಕ್ಯಾರ್ಥಃ ಸಂಪದ್ಯತೇ। ತಥಾ ಚ ಸ್ವರೂಪಲಕ್ಷಣವಾಕ್ಯೇಷು ವಾಚ್ಯಾ

---

ಸೂಚಿಸುತ್ತಿದೆ. ಆದ್ದರಿಂದ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಮುಂತಾದ ಬ್ರಹ್ಮಸ್ವರೂಪ ಲಕ್ಷಣಗಳನ್ನು ತೋರಿಸುವ ವಾಕ್ಯಗಳಲ್ಲಿ ಪ್ರಕಾಶ್ಯವಸ್ತುವಿನ ನಿತ್ಯತ್ವವನ್ನು ಅಪೇಕ್ಷಿಸಿ ನಿತ್ಯತ್ವ ಧರ್ಮಾಕ್ರಾಂತವಾದ ವಾಚ್ಯಾರ್ಥ ಬ್ರಹ್ಮ ವಸ್ತುವನ್ನು ವಿಧಿರೂಪದಿಂದ ತಿಳಿಯಬಹುದು. ಇದಕ್ಕಾಗಿ ಲಕ್ಷಣಾವೃತ್ತಿಯನ್ನು ಅವಲಂಬಿಸಿ ಅತದ್ವ್ಯಾವೃತ್ತಿ=ತದ್ವ್ಯತಿರಿಕ್ತವಲ್ಲದ್ದು ಎಂಬ ರೀತಿಯ ನಿಷೇಧ ರೂಪದಿಂದ ಬ್ರಹ್ಮವಸ್ತು ಪ್ರತಿಪಾದನವನ್ನು ಅಂಗೀಕರಿಸಬೇಕಾಗಿಲ್ಲ. ತತ್ತ್ವ ಮಸಿ ವಾಕ್ಯವು ವಾಚ್ಯಾರ್ಥಗಳ ವೈಶಿಷ್ಟ್ಯವನ್ನು ನಿರ್ಬಾಧವಾಗಿ ಬೋಧಿಸಬಲ್ಲದು ಎಂದು ಆಗಮ ಬೋಧ್ಯತ್ವವನ್ನು ಸಮರ್ಥಿಸಲು ಯತ್ನಿಸಬೇಕು. ಆದರೆ ಈ ಪ್ರಕ್ರಿ ಯೆಯು ನಿರ್ದುಷ್ಟವಾಗಲಾರದು. ಆನಂದಶಬ್ದವು ಪರಿಪೂರ್ಣಾನಂದವನ್ನು ಬೋಧಿಸಲು ಶಕ್ತವಾಗಿರುವುದರಿಂದ ಅಲ್ಪ ದುಃಖ ಸಂಪೃಕ್ತನಾದ ಜೀವನನ್ನು ಬೋಧಿಸುವುದೆಂದು ಒಪ್ಪಲಾಗುವುದಿಲ್ಲ. ಹಾಗೆ ಶಬ್ದಾರ್ಥವನ್ನು ಕಲ್ಪಿಸಿದರೆ ಶ್ರುತಹಾನಿ ಮುಂತಾದ ದೋಷಗಳು ಬರುತ್ತವೆ. ಪಾರಮಾರ್ಥಿಕವಾಗಿ ದ್ವೈತ ವಸ್ತುವು ಸಂಭವಿಸದಿರುವುದರಿಂದ ತತ್ತ್ವಂ ಪದಗಳ ವಾಚ್ಯಾರ್ಥಗಳಲ್ಲಿ ಸೇರಿದ ಪರಸ್ಪರ ವಿರುದ್ಧ ವಿಶೇಷಣಗಳಿಗೆ ತಮಃಪ್ರಕಾಶಗಳಂತೆ ವಿಶಿಷ್ಟತೆಯು ಅಸಂಗತ ವಾಗುವುದು. ಆದ್ದರಿಂದ ಭಾಗತ್ಯಾಗ ಲಕ್ಷಣಾವೃತ್ತಿಯಿಂದ ಅಖಂಡಾರ್ಥ

ರ್ಥಸ್ಯ "ಅತೋಽನ್ಯದಾರ್ತಮ್" ಇತಿ ಶ್ರುತ್ಯಾ ಮಿಥ್ಯಾತ್ವ ಪ್ರತಿಪಾದನಾತ್ ನಿಷೇಧಮುಖೇನೈವ ಅತದ್ವ್ಯಾವೃತ್ತಿ ಸ್ವರೂಪಪ್ರತಿಪಾದನೇನ ಲಕ್ಷಣವಾಕ್ಯಾನಿ ಸಮಂಜಸಾನಿ ಭವಂತೀತಿ ಭಾವಃ ।

## ೭. ಓಂ ಏಕಭಕ್ತಿಸಮರ್ಚಿತಾಯೈ ನಮಃ

ಏಕಭಕ್ತಿಸಮರ್ಚಿತಾ । ಏಕಸ್ಮಿನ್ನಭೇದೇ ಜೀವಬ್ರಹ್ಮಣೋಃ ಭಕ್ತಿಃ ಭಜನೀಯತ್ವಬುದ್ಧಿಃ ತತ್ಪರಿಜಿಜ್ಞಾಸಾ ಯೇಷಾಂ ಅಸ್ತಿ ತೈರರ್ಚಿತಾಪೂಜಿತಾ ಇತ್ಯೇತದುಪಲಕ್ಷಣಂ ಸ್ತುತಾ ಧ್ಯಾತಾ ನಮಸ್ಕೃತೇತ್ಯೇವಮಾದೀನಾಂ, "ಯನ್ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ" ಇತಿ ಶ್ರುತೇಃ, ಮಾನಸಿಕವ್ಯಾಪಾರ ಪೂರ್ವಕಾಣಿ ಹಿ ಇತರೇಂದ್ರಿಯಕರ್ಮಾಣಿ ಭವಂತೀತ್ಯಭಿಪ್ರಾಯಃ। ಅಥವಾ ಅಸ್ಮಿನ್ ಸಂಸಾರಮಂಡಲೇ ತತ್ಸ್ವರೂಪಪರಿಜ್ಞಾತಾರಃ ಯೇ ಕೇಚನ ತೇಷಾಂ ಭಜನೀಯತ್ವಾಧ್ಯವ

---

ವನ್ನು ವಾಕ್ಯಾರ್ಥವಾಗಿ ಸ್ವೀಕರಿಸಬೇಕು. ಸ್ವರೂಪಲಕ್ಷಣವಾಕ್ಯಗಳಲ್ಲಿ ಆಯಾಯ ಪದವಾಚ್ಯಾರ್ಥಗಳು "ಅತೋಽನ್ಯದಾರ್ತಮ್" ಎಂಬ ಪ್ರಮಾಣದಿಂದ ಮಿಥ್ಯಾಭೂತವಾದುವುಗಳು. ಆದ್ದರಿಂದ ಅತದ್ವ್ಯಾವೃತ್ತಿ ಯೆಂಬ ನಿಷೇಧ ರೂಪದಿಂದ ಲಕ್ಷಣವಾಕ್ಯಗಳು ಬ್ರಹ್ಮವಸ್ತುವನ್ನು ಬೋಧಿಸು ವುದೆಂಬುದು ಉಚಿತವು. ಆದ್ದರಿಂದ ಆಗಮಗಳಿಂದ ವಿಶಿಷ್ಟಪ್ರತ್ಯಕ್ಷ ರೂಪ ದಿಂದ ಬೋಧಿಸಲು ಅಶಕ್ಯವಾದವಳು. ಏವಮಿತಿ ಆಗಮೈರ್ಬೋಧಯಿತುಂ ಶಕ್ಯಾ ನ ಭವತಿ ಎಂದು ವಿಗ್ರಹವು.

೭. ಜೀವ ಬ್ರಹ್ಮವಸ್ತುಗಳ ಅಭೇದದಲ್ಲಿ ಜಿಜ್ಞಾಸೆಯೆಂಬ ಭಜನೀಯತ್ವ ಬುದ್ಧಿಯುಳ್ಳ ಮುಮುಕ್ಷುಗಳಿಂದ ಸ್ತುತಿ ಧ್ಯಾನ ನಮಸ್ಕಾರ ಪೂಜಾದಿ ಕರ್ಮ ಗಳಿಂದ ಸತ್ಕರಿಸಲ್ಪಟ್ಟವಳು. "ಯನ್ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ" ಎಂಬ ಶ್ರುತಿಯು ಮಾನಸ ವ್ಯಾಪಾರ ಪೂರ್ವಕವಾಗಿ ಇತರೇಂದ್ರಿಯ ವ್ಯಾಪಾರಗಳನ್ನು ಬೋಧಿಸುವುದರಿಂದ ಅರ್ಚಿತ ಎಂಬ ಪದಕ್ಕೆ

ಸಾಯೋ ಭಕ್ತಿಃ ತದೇಕಪ್ರವಣತಾ ಸಗುಣಬ್ರಹ್ಮ ವಿಷಯಾ ಅಷ್ಟವಿಧಾ। ತೈರೇಕಭಕ್ತಿಮದ್ಭಿರರ್ಚಿತಾ ಅಂತರ್ಯಾಗ- ಬಹಿರ್ಯಾಗ- ಮಹಾಯಾಗ ಪ್ರಕಾರೈಃ ಪೂಜಿತಾ ಇತ್ಯರ್ಥಃ।

## ೮. ಓಂ ಏಕಾಗ್ರಚಿತ್ತನಿರ್ಧ್ಯಾತಾಯೈ ನಮಃ

ಏಕಾಗ್ರಚಿತ್ತ ನಿರ್ಧ್ಯಾತಾ। ಏಕಂ ಐಕ್ಯರೂಪಂ ಅಗ್ರಂ ಆಲಂಬನಂ ವಿಷಯಃ ವಿಜಾತೀಯ ಪ್ರತ್ಯಯ ತಿರಸ್ಕಾರಪೂರ್ವಕ ಸಜಾತೀಯವೃತ್ತಿಕಾಭಿಃ ನಿರಂತರವ್ಯಾಪ್ತಿವಿಷಯೀಕೃತ ಚೈತನ್ಯಂ ಯಸ್ಯ ತತ್ತಾದೃಶಂ ಚಿತ್ತಮಂತಃಕರಣಂ ಯೇಷಾಂ ತೈಃ ಯಮನಿಯಮಾಸನ - ಪ್ರಾಣಾಯಾಮ - ಪ್ರತ್ಯಾಹಾರ ಧಾರಣಾ-ಧ್ಯಾನ- ಸಮಾಧೀನಾಂ ಪರಿಪಾಕಾತಿಶಯೇನ ಪಶ್ಚಾತ್ಸಂಪದ್ಯಮಾನಾ ಸಂಪ್ರಜ್ಞಾತಸಮಾಧೇಃ ತ್ರಿವಿಧಾ ಭೂಮಿಕಾ।

---

ಧ್ಯಾನಾದಿ ಸಕಲ ವ್ಯಾಪಾರಗಳಿಂದ ಸತ್ಕರಿಸಲ್ಪಟ್ಟವಳೆಂದು ಅರ್ಥಮಾಡಬೇಕು. ಅಥವಾ ಏಕ ಭಕ್ತಿಮಂತರೆಂದರೆ ಈ ಸಂಸಾರಮಂಡಲದಲ್ಲಿ ಬ್ರಹ್ಮಸ್ವರೂಪವನ್ನು ತಿಳಿದು ಭಜಿಸಿಯುತ ಬುದ್ಧಿಯಿಂದ ತತ್ಪರರಾಗಿರುವ ಭಕ್ತಿನಿಷ್ಠೆಯುಳ್ಳವರು, ಸಗುಣಬ್ರಹ್ಮ ವಿಷಯದಲ್ಲಿ ಅನೇಕ ವಿಧವಾದ ಭಕ್ತಿನಿಷ್ಠೆಯಿಂದ ಕೂಡಿದ ಅಂತಹ ಸುಕೃತಿಗಳಿಂದ ಅಂತರ್ಯಾಗ-ಬಹಿರ್ಯಾಗ- ಮಹಾಯಾಗವೆಂಬ ಪೇಪೀ ಅರ್ಚನಾಕಲ್ಪೋಕ್ತ ವಿಧಾನಗಳಿಂದ ಅರ್ಚಿಸಲ್ಪಟ್ಟವಳು. ಏಕಸ್ಮಿನ್ + ಭಕ್ತಿಃ, ಸಾ ಯೇಷಾಮಸ್ತಿ, ತೈರರ್ಚಿತಾ ಎಂದು ವಿಗ್ರಹವು.

೮. ಐಕ್ಯವೆಂಬ ವಿಷಯವನ್ನು ಆಲಂಬಿಸಿ ನಿರಂತರವಾಗಿ ವಿಜಾತೀಯ ವೃತ್ತಿಗಳಿಂದ ವ್ಯವಧಾನವಿಲ್ಲದೆ ಪ್ರವಾಹವಾಗಿ ಹುಟ್ಟುತ್ತಲಿರುವ ಸಜಾತೀಯ ವೃತ್ತಿಗಳಿಗೆ ಚೈತನ್ಯವು ವಿಷಯವಾಗುವುದು. ಹಾಗೆ ಚೈತನ್ಯವನ್ನು ವಿಷಯೀಕರಿಸಿದ ವ್ಯಕ್ತಿಗಳಿಂದ ತುಂಬಿದ ಅಂತಃಕರಣವುಳ್ಳ ಯೋಗಿಗಳಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿ ಧ್ಯಾನಾವಸ್ಥೆಯಿಂದ ಅತಿಕ್ರಮಿಸಲ್ಪಟ್ಟವಳು. ಯಮ-ನಿಯಮ ಆಸನ- ಪ್ರಾಣಾಯಾಮ— ಪ್ರತ್ಯಾಹಾರ- ಧಾರಣಾ- ಧ್ಯಾನ— ಸಮಾಧಿಗಳೆಂಬ ಯೋಗಶಾಸ್ತ್ರದಲ್ಲಿ ಹೇಳಿದ ಅಷ್ಟಾಂಗಯೋಗಗಳ ಅಭ್ಯಾಸಪರಿಪಾಕದಿಂದ

ಋತಂಭರಾ, ಪ್ರಜ್ಞಾಲೋಕಾ, ಪ್ರಶಾಂತವಾಹಿತಾ ಚೇತಿ ।
ಋತಂ ಯಥಾಭೂತಂ ಸಚ್ಚಿದಾನಂದಲಕ್ಷಣಂ ಬ್ರಹ್ಮ ಭರತಿ
ವೃತ್ತಿವ್ಯಾಪ್ತ್ಯಾ ವಿಷಯೀಕರೋತೀತಿ ಪ್ರಥಮಾ ತಥಾ। "ಆತ್ಮ
ನ್ಯೇವ ವಶಂ ನಯೇತ್" ಇತಿ ಭಗವದ್ವಚನಾತ್ । ಪ್ರಜ್ಞಾ
ಲೋಕಾ । ಪ್ರಜ್ಞಾಯಾಂ ಅಖಂಡಾಕಾರ ವೃತ್ತೌ ನಿತ್ಯನಿರಂತ
ರಾಭ್ಯಾಸೇನ ಪರಿಪಾಕಂ ನೀತಾಯಾಂ ಬ್ರಹ್ಮವಿಷಯಿಣ್ಯಾಂ
ಆವರಣಾಭಿಭವಂ ಕುರ್ವಂತ್ಯಾಂ ಸತ್ಯಾಂ, "ಪ್ರಜ್ಞಾ
ಪ್ರತಿಷ್ಠಾ"ಇತಿ ಶ್ರುತೇಃ। ಪ್ರಜ್ಞಾಯಾ ಬ್ರಹ್ಮಸ್ವರೂಪಾಯಾ
ಆಲೋಕ ಅಭಿವ್ಯಕ್ತಿಃ ಸಾಕ್ಷಾತ್ಕಾರಃ ಯಸ್ಯಾಂ ಸಂಪದ್ಯತೇ
ಸಾ ಕಾರಣವಿಜ್ಞಾನಂ "ಯಸ್ಮಿನ್ ವಿಜ್ಞಾತೇ ಸರ್ವಮಿದಂ
ವಿಜ್ಞಾತಂ ಭವತೀ"ತ್ಯೇಕ ವಿಜ್ಞಾನೇನ ಸರ್ವವಿಜ್ಞಾನ ರೂಪಂ।
ಪ್ರಾರಬ್ಧವಶಾತ್ತದಾ ಚಿತ್ತಂ ತದಧ್ಯಸ್ತಂ ಸರ್ವಜಗದ್ದ್ರಷ್ಟು
ಮಿಚ್ಛತಿ ಯದಿ, ತದಾನೀಂ ಚೈತನ್ಯ ಪ್ರಕಾಶೇನೈವ ಪ್ರಕಾಶಿತಂ

---

ಹುಟ್ಟುವ ಅಸಂಪ್ರಜ್ಞಾತಸಮಾಧಿಯು ಮೂರು ಭೂಮಿಕೆಗಳಿಂದ ಕೂಡಿರು
ವುದು. ಆ ಭೂಮಿಕೆಗಳಿಗೆ ಋತಂಭರಾ ಪ್ರಜ್ಞಾಲೋಕಾ, ಪ್ರಶಾಂತವಾ
ಹಿತಾ ಎಂದು ಕ್ರಮವಾಗಿ ಹೆಸರು. ಋತಂ ಭರತಿ ಎಂಬ ವ್ಯುತ್ಪತ್ತಿಯಿಂದ
ಸಚ್ಚಿದಾನಂದಸ್ವರೂಪವಾದ ಬ್ರಹ್ಮವಸ್ತುವನ್ನು ವೃತ್ತಿವ್ಯಾಪ್ತಿಯಿಂದ ವಿಷಯೀ
ಕರಿಸುವ ಸಮಾಧಿಭೂಮಿಕೆಯು ಆ ಶಬ್ದದಿಂದ ಲಭ್ಯವಾಗುವುದು "ಆತ್ಮನ್ಯೇವ
ವಶಂ ನಯೇತ್" ಎಂದು ಈ ಅರ್ಥದಲ್ಲಿ ಭಗವತ್ಸ್ಮೃತಿಯು ಇರುವುದು.
ಪ್ರಜ್ಞಾಲೋಕಾ ಎಂಬುದು ಎರಡನೆಯ ಭೂಮಿಕೆಯು. ಪ್ರಜ್ಞಾಯಾಂ
ಆಲೋಕಃ ಯಸ್ಯಾಂ ಸಾ ಎಂದು ಆ ಸಂಜ್ಞಾಶಬ್ದದ ವ್ಯುತ್ಪತ್ತಿಯು. ಅಖಂಡಾ
ಕಾರವೃತ್ತಿಯಲ್ಲಿ ನಿತ ನಿರಂತರಾಭ್ಯಾಸಪರಿಪಾಕದಿಂದ ಆವರಣವು ಭಗ್ನವಾಗಿ
"ಪ್ರಜ್ಞಾ ಪ್ರತಿಷ್ಠಾ" ಎಂಬ ಶ್ರುತಿವಚನದಿಂದ ಪ್ರಜ್ಞಾಸ್ವರೂಪವಾದ ಬ್ರಹ್ಮ
ವಸ್ತುವಿನ ಅಭಿವ್ಯಕ್ತಿಯಾಗುವುದು. ಅದು "ಯಸ್ಮಿನ್ ವಿಜ್ಞಾತೇ ಸರ್ವ
ಮಿದಂ ವಿಜ್ಞಾತಂ ಭವತಿ" ಎಂದು ಶ್ರುತಿಯಲ್ಲಿ ಹೇಳಿದ ಸರ್ವವಿಜ್ಞಾನರೂಪ
ವಾದ ಕಾರಣವಿಜ್ಞಾನಾತ್ಮಕವಾಗಿರುವುದು. ಆ ಅವಸ್ಥೆಯಲ್ಲಿ ಚಿತ್ತವು ಪ್ರಾರಬ್ಧಾ
ಧೀನತೆಯಿಂದ ಅಧ್ಯಸ್ತವಾದ ಜಗತ್ತನ್ನು ನೋಡಬಯಸುವುದಾದರೆ ಚೈತನ್ಯ

**ಜಗತ್ಸ್ವಪ್ನ ಪದಾರ್ಥವದಶೇಷಂ ಭಾಸತೇ। ಇದಂ ಚ ಭರದ್ವಾಜಾದೀನಾಮಸ್ತೀತಿ ಪುರಾಣಾದಿಪ್ರಮಾಣವೇದ್ಯಮಸ್ಮಾಕಮ್। ತಥಾ ಚ ತಸ್ಯಾಂ ಭೂಮಿಕಾಯಾಂ ನಿರುದ್ಧಸಾಮರ್ಥ್ಯಂ ಸದನ್ತಃಕರಣಂ ಸಾಕಾರಸ್ವರೂಪಂ ನಿರ್ವಾಸನಂ ಯದಾ ನಶ್ಯತಿ ತದಾ ಪ್ರಶಾಂತವಾಹಿತಾ ಭವತಿ। ವಹಃ ಪ್ರವಾಹಃ ಸಂತತ ವೃತ್ತಿಃ ಧಾರಾ ಅಸ್ಯ ಅಸ್ತೀತಿ ವಾಹೀ, ವಾಹಿನಃ ಭಾವೋ ವಾಹಿತಾ,ಪ್ರಶಾಂತಾ ಚ ಸಾ ವಾಹಿತಾ ಚ ಪ್ರಶಾಂತವಾಹಿತಾ। ಅಥವಾ ಪ್ರಶಾಂತಃ ವಾಹಃ ಅಸ್ಯ ಅಸ್ತೀತಿ ಪ್ರಶಾಂತ ವಾಹೀ, ಪ್ರಶಾಂತವಾಹಿನಃ ಭಾವಃ ಪ್ರಶಾಂತವಾಹಿತಾ "ಮನಸೋ ವೃತ್ತಿ ಶೂನ್ಯಸ್ಯ ಬ್ರಹ್ಮಾಕಾರತಯಾ ಸ್ಥಿತಿಃ। ಅಸಂಪ್ರಜ್ಞಾತ ನಾಮೇತಿ ಸಮಾಧಿರ್ಯೋಗಿನಾಂ ಪ್ರಿಯಃ" ಇತಿ ವಚನಾತ್ "ಪ್ರಶಾಂತಮಾನಸಂ ಹ್ಯೇನಂ" ಇತಿ ಭಗವದ್ವಚನಾತ್ "ಪೃಥಿವ್ಯಪ್ತೇಜೋಽನಿಲಖೇ ಸಮುತ್ಥಿತೇ ಪಂಚಾತ್ಮಕೇ**

---

ಪ್ರಕಾಶದಿಂದ ಜಗತ್ತು ಪ್ರಕಾಶಿಸಲ್ಪಟ್ಟು ಸ್ವಪ್ನವಸ್ತುವು ಭಾಸವಾಗುವಂತೆ ತೋರುವುದು. ಇಂತಹ ಜಗದ್ದರ್ಶನವು ಭರದ್ವಾಜಾದಿ ಮುನಿಗಳಲ್ಲಿ ಇತ್ತೆಂಬುದು ಪುರಾಣಾದಿಪ್ರಮಾಣದಿಂದ ನಮಗೆ ವೇದ್ಯವಾಗಿದೆ. ಇಲ್ಲಿಂದ ಮುಂದೆ ಸಾಮರ್ಥ್ಯದ ಕ್ಷಯದಿಂದ ಅಂತಃಕರಣವು ಸಾಕಾರಸ್ವರೂಪವಾಸನೆಯನ್ನು ತ್ಯಜಿಸಿ ಲಯಹೊಂದಿದರೆ ಆಗ ಪ್ರಶಾಂತವಾಹಿತಾ ಎಂಬ ಭೂಮಿಕೆಯು ಉದಯಿಸುವುದು. ಪ್ರವಹ ಏವ ಪ್ರವಾಹಃ ಸೋಽಸ್ಯಾಸ್ತೀತಿ ವಾಹೀ, ತಸ್ಯ ಭಾವಃ, ಪ್ರಶಾಂತಾ ಚ ಸಾ ವಾಹಿತಾ ಚ ಎಂದು ಒಂದುವಿಧದ ವ್ಯುತ್ಪತ್ತಿಯು. ಅಥವಾ ಪ್ರಶಾಂತೋ ವಾಹೋಽಸ್ಯಾಸ್ತೀತಿ ತಸ್ಯ ಭಾವಃ ಎಂದು ಮತ್ತೊಂದು ವಿಧದ ವ್ಯುತ್ಪತ್ತಿಯು. ಪ್ರವಾಹರೂಪವಾಗಿ ಬರುವ ಸಂತತ ವೃತ್ತಿಯು ಶಾಂತವಾಗಿರುವುದೆಂಬುದು ವ್ಯುತ್ಪತ್ತಿಲಭ್ಯಾರ್ಥವು. "ಮನಸೋ ವೃತ್ತಿಶೂನ್ಯಸ್ಯ ಬ್ರಹ್ಮಾಕಾರತಯಾ ಸ್ಥಿತಿಃ। ಅಸಂಪ್ರಜ್ಞಾತನಾಮೇತಿ ಸಮಾಧಿರ್ಯೋಗಿನಾಂ ಪ್ರಿಯಃ" "ಪ್ರಶಾಂತಮನಸಂ ಹ್ಯೇನಮ್," "ಪೃಥಿವ್ಯಪ್ತೇಜೋಽನಿಲಖೇ ಸಮುತ್ಥಿತೇ ಪಂಚಾತ್ಮಕೇ ಯೋಗಗುಣೇ ಪ್ರವೃತ್ತೇ। ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀ

ಯೋಗಗುಣೇ ಪ್ರವೃತ್ತೇ। ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಮ್'' ಇತಿ ಶ್ರುತ್ಯಾ ಉಕ್ತಲಕ್ಷಣಸಾಧನಪರಿಪಾಕವಶಾದ್ಭವತಿ। ತೈರ್ನಿರ್ಧ್ಯಾರ್ತಾ ಧ್ಯಾನಸ್ಯ ನಿರ್ಗತತ್ವಾತ್। ಭೇದಾಸ್ಫೂರ್ತೌ ಧ್ಯಾನವಿಷಯೋ ನ ಭವತಿ ಧ್ಯಾತುಃ ಸ್ವರೂಪಮೇವ ಪ್ರಕಾಶತೇ, "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತಿಶ್ರುತೇಃ। ನಿಧ್ಯಾತಾ ಇತಿ ಪಾಠೇ ನಿತರಾಂ ಶ್ರವಣ-ಮನನ-ನಿದಿಧ್ಯಾಸನೇನ ಸಾಕ್ಷಾತ್ಕೃತಾ ಇತ್ಯರ್ಥಃ

### ೯. ಓಂ ಏಷಣಾರಹಿತಾದೃತಾಯೈ ನಮಃ।

ಏಷಣಾರಹಿತಾದೃತಾ। ಏಷಣಾ ಇಚ್ಛಾ। ಸಾ ತ್ರಿವಿಧಾ ಏತಲ್ಲೋಕಜಯಾಯ ಪುತ್ರೈಷಣಾ। ಪಿತೃಲೋಕ ಜಯಸಾಧನ ಕರ್ಮಸಂಪಾದನಾಯ ವಿತ್ತೈಷಣಾ। ಉಪಾಸನಾದಿನಾ ಜಯ

---

ರಮ್'' ಎಂಬ ವಚನಗಳಿಂದ ಈ ಭೂಮಿಕೆಯು ಸಾಧನಾಭ್ಯಾಸಪರಿಪಾಕದಿಂದ ಬರುವುದು. ಇಂತಹ ಅಸಂಪ್ರಜ್ಞಾತಸಮಾಧಿಭೂಮಿಕಾರೂಢರು ಏಕಾಗ್ರಚಿತ್ತರು. ಇವರಿಂದ ಧ್ಯಾನರೂಪವೃತ್ತ್ಯತಿಕ್ರಾಂತಳಾಗಿ ಮಾಡಲ್ಪಟ್ಟವಳು. ಆಗ ಧ್ಯಾತೃ- ಧ್ಯೇಯಭೇದವು ತೋರದಿದ್ದರೆ ಧ್ಯೇಯವಸ್ತುವು ಧ್ಯಾನವಿಷಯವಾಗುವುದಿಲ್ಲ. ಧ್ಯಾತೃಸ್ವರೂಪವೇ ಆಗ ಪ್ರಕಾಶಿಸುವುದು. ಈ ಅಂಶವನ್ನು "ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ಶ್ರುತಿಯು ಬೋಧಿಸುವುದು. ನಿಧ್ಯಾತಾ ಎಂದು ಮೂಲಪಾಠವನ್ನಿಟ್ಟುಕೊಂಡರೆ ಅಂತಹ ಯೋಗಿಗಳಿಂದ ಶ್ರವಣ–ಮನನ–ನಿದಿಧ್ಯಾಸನಗಳ ಮೂಲಕವಾಗಿ ಸಾಕ್ಷಾತ್ಕರಿಸಲ್ಪಟ್ಟವಳು. ಏಕಂ । ಅಗ್ರಂ ಯಸ್ಯ ತತ್, ತಾದೃಶಂ ಚಿತ್ತಂ ಯೇಷಾಂ, ತೈಃ ನಿರ್ಧ್ಯಾರ್ತಾ (ನಿಧ್ಯಾತಾ) ಎಂದು ವಿಗ್ರಹವು.

೯. ಏಷಣಾ ಎಂದರೆ ಇಚ್ಛೆಯು, ಇದು ಸಾಮಾನ್ಯವಾಗಿ ಮೂರು ಭೇದಗಳಿಂದ ಕೂಡಿದೆ. ಇಹ ಲೋಕಜಯಕ್ಕೆ ಸಾಧನವಾದ ಸಂತತಿಯ ಬಯಕೆಯು ಒಂದು ಪುತ್ರೈಷಣೆಯು, ಪಿತೃಲೋಕಜಯಕ್ಕೆ ಸಾಧನವಾದ ಕರ್ಮ

**ಸಾಧನಂ ದೇವಲೋಕಃ, ತಸ್ಮಿನ್ನೇಷಣಾ ಲೋಕೈಷಣಾ। ಆಭಿಃ ರಹಿತೈಃ ಅನಾಕೃಷ್ಟಚಿತ್ತೈಃ। "ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ" ಇತಿ ಶ್ರುತೇಃ, ಏಷಣಾರಹಿತಾ ಯೇ ಪರಮಹಂಸ ಪರಿವ್ರಾಜಕಾಃ ಸನ್ನ್ಯಾಸಿನಃ ತೈಃ ಆದರೇಣ ಅತಿಶಯಪ್ರೇಮ್ಣಾ ಸ್ವಸ್ವರೂಪೇಣ ಆದೃತಾ ಅಂಗೀಕೃತಾ ನಿರಂತರಧ್ಯಾನೇನ ಸಾಕ್ಷಾತ್ಕೃತಾ ಸತೀ ಮೋಕ್ಷರೂಪತಯಾ ಪ್ರಾಪ್ತೇತ್ಯರ್ಥಃ।**

---

ಸಂಪಾದನಕ್ಕೆ ಅನುಕೂಲವಾದ ಹಣದ ಆಸೆಯು ವಿತ್ತೈಷಣೆಯು, ಉಪಾಸನಾದಿಗಳಿಂದ ಲಭಿಸುವ ದೇವಲೋಕದಲ್ಲಿ ಆಸೆಯು ಲೋಕೈಷಣೆಯು. ಈ ಏಷಣಾತ್ರಯದಿಂದ ನಿರ್ಮುಕ್ತರಾದ ಪರಮಹಂಸಪರಿವ್ರಾಜಕಾದಿಯೋಗಿವರ್ಯರಿಂದ ಅತಿಶಯವಾದ ಪ್ರೇಮಪೂರ್ವಕವಾಗಿ ನಿರಂತರಧ್ಯಾನದಿಂದ ಸಾಕ್ಷಾತ್ಕರಿಸಲ್ಪಟ್ಟವಳಾಗಿ ಮುಕ್ತಿರೂಪದಿಂದ ಹೊಂದಲ್ಪಟ್ಟವಳು. "ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ" ಎಂಬ ಶ್ರುತಿಯು ಏಷಣಾತ್ರಯರಹಿತರಿಗೆ ಬ್ರಹ್ಮವು ಪ್ರಾಪ್ತವೆಂಬುದನ್ನು ಬೋಧಿಸುತ್ತಿದೆ. ಏಷಣಾಭಿಃ ರಹಿತಾಃ, ತೈಃ ಆದೃತಾ ಎಂದು ವಿಗ್ರಹವು.

# ೭

ಏಲಾಸುಗಂಧಿಚಿಕುರಾ ಚೈನಃಕೂಟವಿನಾಶಿನೀ ।
ಏಕಭೋಗಾ ಚೈಕರಸಾ ಚೈಕೈಶ್ವರ್ಯಪ್ರದಾಯಿನೀ

## ೧೦. ಓಂ ಏಲಾಸುಗಂಧಿ ಚಿಕುರಾಯೈ ನಮಃ ।

ಏಲಾಸುಗಂಧಿ ಚಿಕುರಾ। ಏಲಾವದಿತಿ ದೃಷ್ಟಾಂತ ಪ್ರದರ್ಶನಂ ಸೌಗಂಧ್ಯಮಾತ್ರ ಸದ್ಭಾವಪ್ರದರ್ಶನೇನಾಕಲ್ಪಿತದಿವ್ಯಪರಿಮಲಸದ್ಭಾವೇ ಹೇತುಃ। ನ ತು ಪ್ರಾಕೃತತತ್ವದರ್ಶನಪರಮ್ ಬ್ರಹ್ಮಣಃ ಸ್ವಾಧೀನಮಾಯುತ್ವಾತ್, ತದ್ವತ್ ಸುಗಂಧ ಇತಿ ಸಾಜಾತ್ಯಮಾತ್ರಂ ವ್ಯಜ್ಯತೇ ಗುಣಮಾತ್ರಾದಾನೇನ ಸರ್ವತ್ರ ಪದಾರ್ಥಾಂತರಸ್ಯ ದೃಷ್ಟಾಂತೀಕರಣಾತ್ । ಸುಗಂಧಾ ಯೇಷಾಂ ಸಂತೀತಿ ಸುಗಂಧಿನಃ ತಾದೃಶಾಃ ಚಿಕುರಾಃ

---

೧೦. ಏಲಕ್ಕಿಯಂತೆ ಸುಗಂಧ ಯುಕ್ತವಾದ ಮುಂಗೂದಲುಗಳಿಂದ ಶೋಭಿತಳು. ಇಲ್ಲಿ ಏಲಾ ದೃಷ್ಟಾಂತವನ್ನು ಪ್ರಾಕೃತಸುಗಂಧವನ್ನು ದೇವಿಯಲ್ಲಿ ತೋರಿಸುವ ತಾತ್ಪರ್ಯದಿಂದ ತೆಗೆದುಕೊಂಡಿಲ್ಲ. ಬ್ರಹ್ಮವಸ್ತುವಿಗೆ ಮಾಯೆಯು ಸ್ವಾಧೀನವಾದುದು. ಆದ್ದರಿಂದ ಪ್ರಕೃತಿಯಿಂದ ಯಾವ ಗುಣವನ್ನೂ ಬ್ರಹ್ಮವಸ್ತುವು ಹೊಂದುವುದಿಲ್ಲ. ಆದರೆ ಈ ದೃಷ್ಟಾಂತದಿಂದ ಸುಗಂಧವನ್ನು ತೋರಿಸಿರುವುದು ಅಕಲ್ಪಿತವಾದ ದಿವ್ಯಪರಿಮಳವನ್ನು ಸೂಚಿಸುತ್ತಿದೆ. ಏಲಾಗಂಧಕ್ಕೆ ಸಜಾತಿಯವಾದ ದಿವ್ಯಸುಗಂಧವು ದೇವೀಅವಯವಗಳಲ್ಲಿ ಇದೆಯೆಂದು ಈ ನಾಮದಿಂದ ವಿವಕ್ಷಿತವಾದುದು. ದೃಷ್ಟಾಂತಕ್ಕೋಸ್ಕರ ಒಂದು ಸಾಮಾನ್ಯಗುಣವನ್ನು ಸ್ವರೂಪವರ್ಣನೆಯ ಸಂದರ್ಭದಲ್ಲಿ ಎಲ್ಲ ಕಡೆ ಪರಿಗ್ರಹಿಸಲ್ಪಡುವುದು. ದೃಷ್ಟಾಂತದಲ್ಲಿರುವಷ್ಟೇ ಪರಿಚ್ಛೇದವು ಉಪಮೇಯವಸ್ತುವಿನಲ್ಲಿಯೂ ಇರುವುದೆಂದು ಮಾತ್ರ ಭಾವಿಸಲಾಗದು, ಇಲ್ಲಿ ನಿಖಿಲ ಅವಯವಗಳನ್ನು ಹೇಳುವ ಬದಲು ಚಿಕುರವೆಂಬ ಒಂದು ಅವಯವವನ್ನು ತೆಗೆದುಕೊಂಡಿ

ಕುಂತಲಾಃ ಯಸ್ಯಾಃ ಸಾ ತಥಾ, ಸ್ವಭಾವಸಿದ್ಧ ದಿವ್ಯಪರಿಮಲ ಶಾಲಿ ಸರ್ವಾಂಗಸೌರಭ್ಯವತೀ, ಚಿಕುರಪದಸ್ಯ ಉಪಲಕ್ಷಣ ತ್ವಾದಿತಿ ಭಾವಃ।

## ೧೧. ಓಂ ಏನಃಕೂಟವಿನಾಶಿನ್ಯೈ ನಮಃ ।

ಏನಃ ಕೂಟವಿನಾಶಿನೀ। ಏನಸಾಂ ಪಾಪಾನಾಂ ಕೂಟಂ ಸಮು ದಾಯಃ ಆಗಾಮಿಸಂಚಿತಪ್ರಾರಬ್ಧಭೇದೇನ ಸಮುಷ್ಟಿರೂಪೇಣ ದೃಢತರಂ ತತ್ತ್ವಜ್ಞಾನೇನ ವಿನಾ ಅನ್ಯಸ್ಯ ಭೋಗಮಾತ್ರಸ್ಯ ತದ್ವಿನಾಶಕತ್ವಾವಗಮಾತ್ । ತೇಷಾಂ ಚ ಕಲ್ಪಕೋಟಿಕಾಲಂ ಕ್ರಮಿಕಭೋಗಪ್ರದಾನಂ ವಿನೋಪಾಯಾಂತರೇಣ ಕ್ಷಯೋ ಪ್ಸೂನಾಮಾತ್ಮಬ್ರಹ್ಮಾ ಭೇದಜ್ಞಾನ ವಿಷಯತಯಾ ಚೈತನ್ಯಂ ನಾಶಯತೀತಿ ತಥಾ "ಏವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ"

---

ರುವುದರಿಂದ ಸ್ವಾಭಾವಿಕದಿವ್ಯಪರಿಮಳದಿಂದ ಶೋಭಿಸುವ ನಿಖಿಲಾವಯವ ಗಳುಳ್ಳವಳೆಂಬುದು ವಿವಕ್ಷಿತವಾದ ಅರ್ಥವು. ಏಲಾವತ್ ಸುಗಂಧಾಃ + ಯೇಷಾಂ ತೇ, ತಾದೃಶಾಃ ಚಿಕುರಾಃ ಯಸ್ಯಾಃ ಸಾ ಎಂದು ವಿಗ್ರಹವು.

೧೧. ತತ್ತ್ವಜ್ಞಾನವು ಉಂಟಾದ ಹೊರತು ಫಲಾನುಭವಮಾತ್ರದಿಂದ ನಾಶ್ಯವಾಗಿರುವ ದೃಢವಾಗಿ ಬಂಧಿಸಿರುವ ಆಗಾಮಿ–ಸಂಚಿತ–ಪ್ರಾರಬ್ಧವೆಂಬ ಮೂರುವಿಧವಾದ ಪಾಪಗಳ ಸಮುಷ್ಟಿಯು ಏನಃಕೂಟವೆಂಬ ಶಬ್ದದಿಂದ ಪ್ರತಿ ಪಾದ್ಯವಾಗಿದೆ. ಕೋಟಿಕಲ್ಪಗಳು ಕಳೆದರೂ ಭೋಗವನ್ನು ಕೊಡದೆ ನಾಶ ವಾಗದಿರುವ ಕರ್ಮಗಳನ್ನು ಕ್ಷಯಮಾಡುವ ಉಪಾಯಾನ್ವೇಷಣಪರರಿಗೆ ಆತ್ಮಬ್ರಹ್ಮಾಭೇದ ಬುದ್ಧಿಯಲ್ಲಿ ವಿಷಯವಾಗಿ ಆ ಪಾಪಕರ್ಮಪುಂಜವನ್ನು ನಾಶಮಾಡುವವಳು. ಈ ಅರ್ಥದಲ್ಲಿ "ಅಶರೀರಂ ವಾವ ಸಂತಂ ನ ಪ್ರಿಯಾ ಪ್ರಿಯೇ ಸ್ಪೃಶತಃ" "ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಮುಂತಾದ ಶ್ರುತಿಸ್ಮೃತಿವಚನಗಳು ಆಧಾರವು. ಅಥವಾ ಪಾಪಗಳನ್ನೂ ಅವುಗಳ ಕಾರಣವಾದ ಕಪಟವಚನೋಕ್ತಿಯನ್ನೂ, ಸರ್ವಕ್ಕೂ ಮೂಲಕಾರಣ

"ಅಶರೀರಂ ವಾವ ಸಂತಂ ಪ್ರಿಯಾಪ್ರಿಯೇ ನ ಸ್ಪೃಶತ" ಇತ್ಯಾದಿಶ್ರುತೇಃ, "ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷ ಯಿಷ್ಯಾಮಿ" ಇತಿ ಸ್ಮೃತೇ ಶ್ಚ। ಅಥವಾ ಏನಾಂಸಿ ಚ ತತ್ಕಾರಣೀ ಭೂತಂ ಕೂಟಂ ಕಪಟವಚನಾಭಿಧಾನಂ ಚ ತತ್ಕಾರಣಂ ಮಾಯಾಂ ಚ ನಾಶಯತೀತಿ ತಥಾ।

## ೧೨. ಓಂ ಏಕಭೋಗಾಯೈ ನಮಃ।

ಏಕಭೋಗಾ। ಏಕೇನ ಕಾಮೇಶ್ವರೇಣ ಸಾಕಂ ಭೋಗಃ ಮುಕ್ತಿಃ ಭೋಗಃ ಸ್ವಸ್ವರೂಪಾನಂದಾನುಭವಃ ಯಸ್ಯಾಃ ಸಾ ತಥಾ। ಅಥವಾ ಏಕಸ್ಯ ಅಜ್ಞಾನತತ್ಕಾರ್ಯಸ್ಯ ಕಾರ್ಯ ಕಾರಣರೂಪೇಣ ಅಭಿನ್ನಸ್ಯ ತದಧಿಷ್ಠಾನತಯಾ ಸ್ವಸತ್ತಾ ಧಾಯಕತ್ವೇನ ಭೋಗಃ ಪರಿಪಾಲನಂ ಯಸ್ಯಾಃ ಸಾ।

---

ವಾದ ಮಾಯೆಯನ್ನೂ ನಾಶಮಾಡುವವಳು. ಏನಸಾಂ + ಕೂಟಂ + ವಿನಾಶಯ ತೀತಿ। ಏನಶ್ಚ + ಕೂಟಂ ಚ ನಾಶಯತಿ ಇತಿ ಎಂದು ಎರಡುಬಗೆಯ ವಿಗ್ರಹಗಳು.

೧೨. ಕಾಮೇಶ್ವರನೊಬ್ಬನೊಡನೆ ಸ್ವಸ್ವರೂಪಾನುಭವವೆಂಬ ಭೋಗವುಳ್ಳ ವಳು. ಅಥವಾ ಕಾರ್ಯಕಾರಣರೂಪದಿಂದ ಅಭಿನ್ನವಾದ ಅಜ್ಞಾನ ತತ್ಕಾರ್ಯ ಗಳ ಪರಿಪಾಲನ ವೆಂಬ ಭೋಗವುಳ್ಳವಳು. ಪ್ರಪಂಚೋತ್ಪತ್ತಿ–ಸ್ಥಿತಿ–ನಾಶ ಗಳಿಗೆ ಕಾರಣವಾದ ಮಾಯೋಪಾಧಿಯಿಂದ ಕೂಡಿದ ಚೈತನ್ಯಾತ್ಮಕಳು ಎಂದು ಅರ್ಥವು. ಅಥವಾ "ಏಕಾಕೀ ನ ರಮತೇ ತತಃ ಪತಿಶ್ಚ ಪತ್ನೀ ಚಾಭವ ತಾಮ್" ಎಂಬ ಪುರುಷವಿಧ ಬ್ರಾಹ್ಮಣವಚನದಿಂದ ದಂಪತಿಗಳಿಗೆ ಐಚ್ಛಿಕ ವಾದ ಭೇದವಿರುವುದರಿಂದ ಚೈತನ್ಯವೆಂಬ ಏಕಸ್ವರೂಪವುಳ್ಳ ದಂಪತಿಗಳಿಗೆ ಭೋಗವು ಅಭಿನ್ನವಾಗಿರುವುದರಿಂದ ಏಕಭೋಗವುಳ್ಳವಳು, ಏಕೇನ + ಭೋಗೋ ಯಸ್ಯಾಃ ಅಥವಾ, ಏಕಃ + ಭೋಗಃ ಯಸ್ಯಾಃ ಎಂದು ವಿಗ್ರಹವು.

ಪ್ರಪಂಚೋತ್ಪತ್ತಿ ಸ್ಥಿತಿನಾಶಹೇತುಮಾಯೋಪಾಧಿಕಚೈತನ್ಯ ಮಿತ್ಯರ್ಥಃ "ಏಕಾಕೀ ನ ರಮತೇ ತತಃ ಪತಿಶ್ಚ ಪತ್ನೀಚಾ ಭವತಾಮ್" ಇತಿ ಪುರುಷವಿಧಬ್ರಾಹ್ಮಣವಚನಾತ್ ದಂಪ ತ್ಯೋರೈಚ್ಛಿಕಭೇದಕತ್ವಾವಗಮೇನ ಪರಮಾರ್ಥತಃ ಏತ ತ್ಸ್ವರೂಪಸ್ಯೈಕ ಚೈತನ್ಯರೂಪತಾವಗಮಾತ್, ತದುಭಯ ಭೋಗಸ್ಯಾಪಿ ತದ್ವತೀತಿ ವಾ ।

## ೧೩. ಓಂ ಏಕರಸಾಯೈ ನಮಃ ।

ಏಕರಸಾ । ಏಕಃ ಅಭಿನ್ನಃ, ರಸಃ ಸಾಮರಸ್ಯಂ ಯಸ್ಯಾಃ। ಸಾ "ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತೀ"ತಿ ಶ್ರುತೇಃ ಏಕಃ ನವರಸೇಷು ಮುಖ್ಯಃ ಶೃಂಗಾರರಸಃ ಯಸ್ಯಾಃ ಸಾ ತಥಾ ಅಥವಾ ಏಕೇನ ಪರಮೇಶ್ವರೇಣ ಅಸ್ಯಾಂ ಕ್ರಿಯಮಾಣಃ ಪ್ರೀತ್ಯತಿಶಯರೂಪಃ ರಸಃ ಏತದ್ವಿಷಯಕಃ ಯಸ್ಯಾಃ ಸಾ । ಅಥವಾ ಏಕಸ್ಮಿನ್ನೇವ ಸ್ವಭರ್ತರಿ ರಸಃ ನಿರತಿಶಯಪ್ರೀತಿಃ

---

೧೩. ಭೇದವಿಲ್ಲದ ಸಾಮರಸ್ಯವೆಂಬ ಏಕ ರಸವುಳ್ಳವಳು. "ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ" ಎಂಬ ಉಪನಿಷದ್ವಚನವು ರಸರೂಪ ವನ್ನು ಪರಬ್ರಹ್ಮವಸ್ತುವಿನಲ್ಲಿ ತೋರಿಸುವುದು. ಅಥವಾ ನವರಸಗಳಲ್ಲಿ ಮುಖ್ಯ ವಾಗಿರುವ ಶೃಂಗಾರವೆಂಬ ರಸವುಳ್ಳವಳು. ಅಥವಾ ಪರಮೇಶ್ವರನಿಂದ ಇಡಲ್ಪಟ್ಟಿರುವ ಪ್ರೇಮಾತಿಶಯವೆಂಬ ರಸಕ್ಕೆ ಪಾತ್ರಳಾದವಳು. ಅಥವಾ ತನ್ನ ಭರ್ತೃವಾದ ಕಾಮೇಶ್ವರನಲ್ಲಿ ಮಾತ್ರ ಅನುರಾಗವೆಂಬ ನಿರತಿಶಯಪ್ರೀತಿ ಯುಳ್ಳವಳು. ಸತ್ತ್ವಗುಣಪ್ರಧಾನವಾದ ಮಾಯೋಪಾಧಿಸಹಿತವಾದ ಚೈತನ್ಯ ಸ್ವರೂಪಳಾದ್ದರಿಂದ ಷಡ್ರಸಗಳಲ್ಲಿ ಮುಖ್ಯವಾದ ಮಧುರರಸವು ಮಾತ್ರ ಪ್ರಿಯ ವಾಗಿ ಉಳ್ಳವಳು. "ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕ ಪ್ರಿಯಾಃ" ಎಂಬ ಗೀತೋಕ್ತಿಯಿಂದ ಮಧುರಾದಿರಸವು ಸಾತ್ತ್ವಿಕಪ್ರಿಯ ವೆಂದು ತಿಳಿಯುವುದು. ಏಕಃ + ರಸಃ ಯಸ್ಯಾಃ ಸಾ ಏಕೇನ ಏಕಸ್ಮಿನ್ ವಾ ರಸಃ ಯಸ್ಯಾಃ ಎಂದು ವಿಗ್ರಹಗಳು.

ಅನುರಾಗಸಂಜ್ಞಾ ಯಸ್ಯಾಃ ಸಾ। ಅಥವಾ ಷಡ್ರಸೇಷು ಮುಖ್ಯಃ ಮಧುರರಸಃ ಪ್ರಿಯತ್ವೇನ ಯಸ್ಯಾಃ ಸಾ। ಸತ್ತ್ವ ಗುಣಪ್ರಧಾನಮಾಯೋಪಾಧಿಕಚೈತನ್ಯಸ್ವರೂಪತ್ವಾತ್ । "ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕ ಪ್ರಿಯಾ" ಇತಿ ಭಗವದ್ವಚನಾತ್।

## ೧೪. ಓಂ ಐಕ್ಯೈಶ್ವರ್ಯಪ್ರದಾಯಿನ್ಯೈ ನಮಃ।

ಐಕ್ಯೈಶ್ವರ್ಯಪ್ರದಾಯಿನೀ। ಈಷ್ಟೇ ಪ್ರೇರಯತಿ ಅಂತ ರ್ಯಾಮಿತ್ವೇನ ಸರ್ವಾಣಿ ಇತಿ ಈಶ್ವರಃ ಯಃ ಸರ್ವೇಷು ಭೂತೇಷು ತಿಷ್ಠನ್ ಯಃ ಸರ್ವಾಣಿ ಭೂತಾನ್ಯಂತರೋ ಯಮಯತಿ ಇತಿ ಶ್ರುತೇಃ। ತತ್ಪ್ರೇರ್ಯಮಾಣಾನಾಂ ಜೀವಾ ನಾಂ ಭೂತಶಬ್ದವಾಚ್ಯಾನಾಂ ಅಜ್ಞಾನತತ್ಕಾರ್ಯಾಂತಃಕರ ಣೋಪಹಿತಪ್ರತಿಬಿಂಬಚೈತನ್ಯರೂಪಾಣಾಂ ಜಾಗ್ರದಾದ್ಯವ ಸ್ಥಾಭಿಮಾನಿನಾಂ ಅಖಂಡಬ್ರಹ್ಮಸಾಕ್ಷಾತ್ಕಾರವೇಲಾಯಾಂ ಅ ಭೇದಾನುಭವಾತ್ "ತತ್ತ್ವಮಸೀ"ತಿ ಶ್ರುತೇಶ್ಚ ಏಕಮೇ ವಾದ್ವಿತೀಯಮಿತಿ ವಿಶೇಷಿತತ್ವಾಚ್ಚ। ಏಕಶ್ಚಾಸಾವೀಶ್ವರಶ್ಚ

---

೧೪. ಸರ್ವಭೂತಗಳಲ್ಲಿ ಅಂತರ್ಯಾಮಿಯಾಗಿದ್ದು ಪ್ರೇರಿಸುವವನು ಈಶ್ವರನು, "ಯಃ ಸರ್ವೇಷು ಭೂತೇಷು ತಿಷ್ಠನ್ ಯಃ ಸರ್ವಾಣಿ ಭೂತಾನಿ ಅಂತರೋ ಯಮಯತಿ" ಎಂಬುದು ಅಂತರ್ಯಾಮಿಯ ಅಸ್ತಿತ್ವವನ್ನು ಸೂಚಿಸು ತ್ತಿದೆ. ಅಂತಹ ಈಶ್ವರನಿಂದ ಪ್ರೇರೇಪಿಸಲ್ಪಡುವ ಭೂತಗಳು ಅಜ್ಞಾನತ ತ್ಕಾರ್ಯಗಳೆಂಬ ಉಪಾಧಿಯಲ್ಲಿ ಪ್ರತಿಬಿಂಬಿಸಿದ ಚೈತನ್ಯರೂಪಗಳಾಗಿಯೂ ಜಾಗ್ರದಾದಿ ಅವಸ್ಥಾಭಿಮಾನಿಗಳಾಗಿಯೂ ಇರುವ ಜೀವರೂಪಗಳಾಗಿವೆ. ಅಂತಹ ಜೀವಾತ್ಮರಿಗೆ ಅಖಂಡಬ್ರಹ್ಮಸಾಕ್ಷಾತ್ಕಾರಸಮಯದಲ್ಲಿ "ತತ್ತ್ವ ಮಸಿ" "ಏಕಮೇವಾದ್ವಿತೀಯಂ" ಎಂದು ಶ್ರುತಿಗಳಿಂದ ಸಾರಿ ಹೇಳಲ್ಪಟ್ಟಿ ರುವ ಈಶ್ವರೈಕ್ಯವನ್ನು ಕೊಡುವವಳು. ಅಥವಾ ವಿದ್ಯಾಧನಾದಿಸಂಪನ್ನರಾದ ಅನೇಕ ವ್ಯಕ್ತಿಗಳ ಗುಂಪಿನಲ್ಲಿ ಒಬ್ಬನನ್ನು ವಿದ್ಯಾಧನಾದಿಸಂಪನ್ನನೆಂದು ನಿರ್ದೇ ಶಿಸಿದರೆ ಅವನ ವಿದ್ಯಾದಿಗಳಲ್ಲಿ ಅತಿಶಯವು ತೋರುವುದು. ಅದರಂತೆ ನಿರತಿಶಯ

ಏಕೇಶ್ವರಃ ತಸ್ಯ ಭಾವಃ ತದೈಕ್ಯಂ ತತ್ ಪ್ರದದಾತೀತಿ ತಥಾ । ಬಹುಷು ವಿದ್ಯಾಧನವತ್ಸು ತೇಷ್ವೇಕೋ ವಿದ್ಯಾಧನವಾನಿತ್ಯುಕ್ತೇ ತತ್ರತ್ಯಜನನಿಷ್ಠ ವಿದ್ಯಾಭಾವೇ ತದತಿಶಯಪ್ರತೀತಿವತ್ । ಏಕಂ ಚ ನಿರತಿಶಯಮಣಿಮಾದಿಕಮೈಶ್ವರ್ಯಂ ನಿಶ್ರೇಯಸಂ ಪ್ರದದಾತೀತಿ ವಾ । ಯದ್ವಾ ಏಕಂ ಮಾನುಷಂ ಸರ್ವೋತ್ಕೃಷ್ಟಂ ಸಾರ್ವಭೌಮತ್ವಾದಿಲಕ್ಷಣಮಭ್ಯುದಯಸಾಮಾನ್ಯಮೈಶ್ವರ್ಯಂ ಪ್ರದದಾತೀತಿ ವಾ ತಥಾ ।

---

ವಾದ ಅಣಿಮಾದಿ ಐಶ್ವರ್ಯವನ್ನು ಕೊಡುವವಳು. ಅಥವಾ ಮಾನುಷವೂ ಸರ್ವೋತ್ಕೃಷ್ಟವೂ ಆದ ಸಾರ್ವಭೌಮತ್ವಾದ್ಯೈಶ್ವರ್ಯವನ್ನು ಕೊಡುವವಳು. ಈಷ್ಟೇ ಇತಿ ಈಶ್ವರಃ ಏಕಶ್ಚಾಸಾವೀಶ್ವರಶ್ಚ, ತಸ್ಯ ಭಾವಃ ಏಕೈಶ್ವರ್ಯಂ ತತ್ ಪ್ರದದಾತೀತಿ, ಅಥವಾ ಏಕಂ ಐಶ್ವರ್ಯಂ ಪ್ರದದಾತಿ ಎಂಬುದಾಗಿ ವಿಗ್ರಹವು.

## ೭

**ಏಕಾತಪತ್ರಸಾಮ್ರಾಜ್ಯಪ್ರದಾ ಚೈಕಾಂತಪೂಜಿತಾ ।**
**ಏಧಮಾನಪ್ರಭಾ ಚೈಜದನೇಕಜಗದೀಶ್ವರೀ ॥**

### ೧೫. ಓಂ ಏಕಾತಪತ್ರಸಾಮ್ರಾಜ್ಯಪ್ರದಾಯೈ ನಮಃ ।

ಏಕಾತಪತ್ರಸಾಮ್ರಾಜ್ಯಪ್ರದಾ । ಆತಪಾತ್ ಆ ಸಮಂತಾತ್ ಅಧ್ಯಾತ್ಮಾಧಿದೈವತಾಧಿಭೂತಾನಿ ಆ ಶಬ್ದಾರ್ಥಃ ತೇಭ್ಯೋ ಜಾತಾಃ ತಾಪಾಃ ಆತಪಾಃ ತಪಂತಿ ಶೋಷಯಂತೀತಿ ತಪಾಃ ಆತಪೇಭ್ಯಃ ತ್ರಾಯತಿ ರಕ್ಷತೀತಿ ಆತಪತ್ರಂ ಸರ್ವಸಂಸಾರ ದುಃಖೋಪಶಮಾತ್ಮಕಮಾತ್ಮಜ್ಞಾನಂ । "ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ" ಇತಿ ಭಗವದ್ವಚನಾತ್ । ಅಖಿಲದುಃಖನಿದಾನಾಜ್ಞಾನನಿವರ್ತಕಮೇಕಂ ಲಕ್ಷಣಯಾ ಅಭಿನ್ನಬ್ರಹ್ಮವಿಷಯಕಮಿತ್ಯರ್ಥಃ । ಏಕಂ ಚ ತದಾತಪತ್ರಂ ಚ ಅಖಂಡಾಕಾರಜ್ಞಾನಂ ತೇನ ಜಾಯಮಾನಂ ಯತ್

---

೧೫. ಅಧ್ಯಾತ್ಮ-ಅಧಿದೈವ-ಅಧಿಭೂತಗಳಿಂದ ಹುಟ್ಟುವ ಮತ್ತು ಸುತ್ತ ಮುತ್ತಲೂ ವ್ಯಾಪಿಸಿರುವ ತಾಪಗಳಿಂದ ರಕ್ಷಿಸುವುದೂ ಅದ್ವೈತ ಬ್ರಹ್ಮ ವಿಷಯಕವೂ ಸಮಸ್ತ ದುಃಖ ಮೂಲಕಾರಣವಾದ ಅಜ್ಞಾನವನ್ನು ನಾಶ ಮಾಡುವುದೂ ಆದ ಸರ್ವಸಂಸಾರದುಃಖೋಪಶಮರೂಪವಾದ ಆತ್ಮಜ್ಞಾನವನ್ನು ಏಕಾತಪತ್ರ ಎಂಬ ಪದವು ಬೋಧಿಸುವುದು. ಅಂತಹ ಅಖಂಡಾಕಾರ ಜ್ಞಾನದಿಂದ ಲಭಿಸುವ ಸಾಮ್ರಾಜ್ಯರೂಪವಾದ ಸರ್ವೋತ್ತಮತ್ವವನ್ನು ಕೊಡುವವಳು. ಆತ್ಮಜ್ಞಾನವು ದುಃಖೋಪಶಮ ರೂಪವಾದುದೆಂಬುದಕ್ಕೆ "ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ" ಎಂಬ ಗೀತಾವಚನವು ಆಧಾರವು. ಅಥವಾ ಏಕಚ್ಛತ್ರಾಧಿಪತ್ಯರೂಪವಾದ ಸಾರ್ವಭೌಮಪದವನ್ನು ಕೊಡುವವಳು. ಆ+ ಸಮಂತಾತ್ + ತಪಂತೀತಿ=ಆತಪಾಃ ತೇಭ್ಯಃ ತ್ರಾಯತ ಇತಿ ಆತಪತ್ರಂ, ಏಕಂ ಚ ತತ್ ಆತಪತ್ರಂ ಚ, ತೇನ ಸಮ್ರಾಜೋ

ಸಾಮ್ರಾಜ್ಯಂ ಸಮ್ರಾಜೋ ಭಾವಃ ಸರ್ವೋತ್ತಮತ್ವಂ ತತ್ಪ್ರದ ದಾತೀತಿ ತಥಾ। ಅಥವಾ ಏಕಾತಪತ್ರಸಾಮ್ರಾಜ್ಯಂ ಚಕ್ರ ವರ್ತಿತ್ವಂ ತತ್ಪ್ರದದಾತೀತಿ ವಾ ॥

## ೧೬. ಓಂ ಏಕಾಂತಪೂಜಿತಾಯೈ ನಮಃ ।

ಏಕಾಂತಪೂಜಿತಾ । ಏಕಸ್ಯ ಅದ್ವಿತೀಯಸ್ಯ ಶೋಧಿತತ್ವಂ ಪದಾರ್ಥಸ್ಯ ಅಂತೇ ಉಪಾಧೌ ಹೃದಿ ಪರಿಚ್ಛೇದಕತ್ವಾತ್ ಪೂಜಿತಾ ಅಹಮಿತ್ಯಪರೋಕ್ಷೀಕೃತಾ "ಯತ್ಸಾಕ್ಷಾದ ಪರೋಕ್ಷಾದ್ಬ್ರಹ್ಮ" ಇತಿ ಶ್ರುತೇಃ। ಏಕಸ್ಯ ಬ್ರಹ್ಮಣಃ ಅಂತೇ ಉಪಪೂಜಿತಾ ಷದ್ ಗತ್ಯವಸಾನಾರ್ಥಯೋರಿತಿ । ಧಾತು ಪಾಠಾತ್ ಉಪನಿಷದ್ಬ್ರಹ್ಮಮಾತ್ರತಯಾ ಪರ್ಯವಸ್ಯತೀ ತ್ಯರ್ಥಃ। ಏಕಾಂತಪೂಜಿತೇತಿ ನಾಮ್ನೋಪನಿಷದಿತ್ಯರ್ಥಃ । ಅಥವಾ ಏಕಾಂತೇ "ಗುಹಾನಿವಾತಾಶ್ರಯೇಣ ಪ್ರಯೋಜ

---

ಭಾವಃ ಸಾಮ್ರಾಜ್ಯಂ ತತ್ ಪ್ರದದಾತೀತಿ, ಆತಪಾತ್ ತ್ರಾಯತೀತಿ, ಎಂದು ವಿಗ್ರಹವು. ದ್ವಿತೀಯವಿಗ್ರಹದಲ್ಲಿ ಮಿಕ್ಕಭಾಗವು ಮೊದಲಿನಂತೆ ಇದೆಯೆಂದು ಗ್ರಹಿಸಬೇಕು.

೧೬. ಅದ್ವಿತೀಯವಾದ ಶೋಧಿತತ್ವಂ ಪದಾರ್ಥಕ್ಕೆ ಪರಿಚ್ಛೇದವನ್ನುಂಟು ಮಾಡುವ ಹೃದಯದಲ್ಲಿ ಅಹಂ ಭಾವದಿಂದ ಸಾಕ್ಷಾತ್ಕರಿಸಲ್ಪಟ್ಟವಳು. ಬ್ರಹ್ಮ ವಸ್ತುವು ಸಾಕ್ಷಾತ್ಕಾರ ವಿಷಯವೆಂಬುದನ್ನು "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ" ಎಂಬ ಶ್ರುತಿಯು ಹೇಳುತ್ತಿದೆ. ಅಥವಾ ಅದ್ವಿತೀಯಬ್ರಹ್ಮನ ಸಮೀಪದಲ್ಲಿ ಪರ್ಯವಸಾನ ಹೊಂದುವ ಉಪನಿಷದ್ರೂಪಳು "ಷದ್ ಗತ್ಯವಸಾನಯೋಃ" ಎಂಬ ಧಾತುಪಾಠಾನುಸಾರವಾಗಿ ಉಪನಿಷತ್ತು ಶಬ್ದವು, ಬ್ರಹ್ಮ ಎಂಬ ಅರ್ಥದಲ್ಲಿ ಪರ್ಯವಸಾನ ಹೊಂದಿರುವುದು. ಅಥವಾ ಏಕಾಂತ ಪ್ರದೇಶದಲ್ಲಿ "ಗುಹಾನಿವಾತಾಶ್ರಯಣೇ ಪ್ರಯೋಜಯೇತ್" ಮುಂತಾದ ಶ್ರುತಿಯನ್ನು ಅನುಸರಿಸಿ ಧ್ಯಾನಾದಿ ಮಾರ್ಗದಿಂದ ಯೋಗಿಗಳಿಂದ ವಿಷಯೀಕರಿಸಲ್ಪಟ್ಟವಳು, ಅಥವಾ ಕಾಮೇಶ್ವರನಿಂದ ಸಂಪ್ರದಾಯಪ್ರವರ್ತನಕ್ಕೋಸ್ಕರ ಮೊದಲನೆಯ ಸಾಧನಕ್ರಮದಲ್ಲಿ ಸೇರಿದ ಬಹಿರ್ಯಾಗಕ್ರಮದಿಂದ ಸೃಷ್ಟಿಯ ಆದಿಯಲ್ಲಿ ಸ್ತ್ರೀ

ಯೇತ್'' ಇತಿ ಶ್ರುತೇಃ ಏಕಾಂತಸ್ಥಲೇ ಧ್ಯಾನಾದಿನಾ ಯೋಗಿಭಿರ್ವಿಷಯೀಕೃತೇತ್ಯರ್ಥಃ। ಅಥವಾ ಕಾಮೇಶ್ವರೇಣ ಏಕಾಂತೇ ಸ್ತ್ರೀಲಿಂಗೇ ಪೂಜಿತಾ । ಸಂಪ್ರದಾಯಪ್ರವೃತ್ತ್ಯರ್ಥಮಾದೌ ಈಶ್ವರೇಣ ಬಹಿರ್ಯಾಗಕ್ರಮೇಣ ಆದಿಮಸಾಧನೇನ ಸರ್ಗಾದ್ಯಕಾಲೇ ಪೂಜನಾದಿನಾ ಸಂತೋಷಿತತ್ವಾತ್ ಭೂತಾರ್ಥವ್ಯಪದೇಶಃ । ಏಕಾಂತೇ ಸರ್ವಪ್ರವಿಲಾಪನಸಮಯೇ ಪೂಜಿತಾ ಧ್ಯಾನಾದಿನಾ ಸಂಪಾದಿತಾ ಸಾಕ್ಷಾತ್ಕೃತೇತ್ಯರ್ಥಃ "ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್ " ಇತಿ ಶ್ರುತೇರಿತಿ ವಾ ॥

## ೧೭. ಓಂ ಏಧಮಾನಪ್ರಭಾಯೈ ನಮಃ ।

ಏಧಮಾನಪ್ರಭಾ । ಏಧಮಾನಾ ವಿವರ್ಧಮಾನಾ ಸರ್ವಾತಿಶಾಯಿನೀ ಪ್ರಭಾ ಕಾಂತಿಃ ಯಸ್ಯಾಃ ಸಾ । "ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತೀ" ತಿಶ್ರುತೇಃ ।

---

ಲಿಂಗದಲ್ಲಿ ಪೂಜಿಸಿ ಸಂತೋಷಗೊಳಿಸಲ್ಪಟ್ಟವಳು. ಅಥವಾ ಸರ್ವಪ್ರವಿಲಾಪನಸಮಯದಲ್ಲಿ ಸಾಕ್ಷಾತ್ಕರಿಸಲ್ಪಟ್ಟವಳು, ಸರ್ವಪ್ರವಿಲಾಪನ ಸಮಯದಲ್ಲಿ ಸಾಕ್ಷಾತ್ಕಾರವಾಗುವುದೆಂಬುದು "ಕಶ್ಚಿದ್ಧೀರಃ ಪ್ರತ್ಯಗಾತ್ಮನಮೈಚ್ಛದಾವೃತ್ತಚಕ್ಷುರಮೃತತ್ವ ಮಿಚ್ಛನ್" ಎಂಬ ಶ್ರುತಿಪ್ರಮಾಣದಿಂದ ಲಭಿಸುವುದು. ಏಕಸ್ಯ + ಅಂತೇ + ಪೂಜಿತಾ, ಎಂದು ವಿಗ್ರಹವು.

೧೭. "ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾಸರ್ವಮಿದಂ ವಿಭಾತಿ" ಎಂಬ ಶ್ರುತ್ಯನುಸಾರವಾಗಿ ಸರ್ವಾತಿಶಯವಾಗಿ ವೃದ್ಧಿಹೊಂದುತ್ತಿರುವ ಕಾಂತಿಯುಳ್ಳವಳು. ಏಧಮಾನಾ ಪ್ರಭಾ ಯಸ್ಯಾಃ ಎಂದು ವಿಗ್ರಹವು.

## ೧೮. ಓಂ ಏಜದನೇಕಜಗದೀಶ್ವರ್ಯೈ ನಮಃ।

**ಏಜದನೇಕಜಗದೀಶ್ವರೀ। ಏಜಂತಿ ಕಂಪಮಾನಾನಿ ಚೇಷ್ಟಮಾನಾನಿ ಪ್ರಾಣವಂತಿ ಜೀವಂತಿ ಅನೇಕಾನಿ ನಾನೋಪಾಧಿಕಾನಿ ಜಗಂತಿ ಜಂಗಮಾನಿ ವಿಚರತ್ ಪ್ರಾಣಿನ ಇತ್ಯರ್ಥಃ। ಈಷ್ಟೇ ಪ್ರೇರಯತೀತಿ ಈಶ್ವರೀ। ಸ್ಥಾವರಾಣಾಂ ಸುಖದುಃಖಪ್ರಾಪ್ತಿ ಪರಿಹಾರೋಪಾಯಾನಭಿಜ್ಞತ್ವೇಽಪಿ ಸ್ವಜೀವನಹೇತು ಭೂತೋದಕಪಾನಾದಿಪ್ರವೃತ್ತಿದರ್ಶನಾಚ್ಚೇಷ್ಟಾವತ್ತ್ವಂತತ್ರಾಪ್ಯಸ್ತೀತಿ ಜಗಚ್ಛಬ್ದೋ ನಿರ್ವಿಶೇಷಪ್ರಪಂಚಮಾತ್ರಪರೋ ವಕ್ತವ್ಯಃ। ಅನ್ಯಥಾ "ಸರ್ವೇಷು ಭೂತೇಷು" ಇತಿಶ್ರುತೌ ಚರಪ್ರಾಣಿಮಾತ್ರಪರತ್ವೇ ಸಂಕೋಚಾಪತ್ತೇಃ। ಅಸತಿ ವಿರೋಧೇ ಸಾಮಾನ್ಯವಾಚಕಸ್ಯ ಶಬ್ದಸ್ಯ ವಿಶೇಷಲಕ್ಷಣಾಂಗೀಕಾರಸ್ಯ ಅನ್ಯಾಯ್ಯತ್ವಾತ್। ಅನ್ಯಥಾ ಬ್ರಹ್ಮಣಃ**

---

೧೮. ಪ್ರಾಣವ್ಯಾಪಾರಾದಿ ಚೇಷ್ಟೆಯಿಂದ ಚಲಿಸುತ್ತಿರುವ, ಅನೇಕೋಪಾಧಿಗಳಿಂದ ಭಿನ್ನಭಿನ್ನವ್ಯಕ್ತಿಗಳಾದ ಚರ-ಅಚರ ಪ್ರಾಣಿಗಳನ್ನು ಪ್ರೇರೇಪಿಸುವವಳು. ಇಲ್ಲಿ ಸ್ಥಾವರಪ್ರಾಣಿಗಳು ಸುಖದುಃಖಗಳ ಪ್ರಾಪ್ತಿಪರಿಹಾರಗಳ ಉಪಾಯಗಳನ್ನು ಅರಿಯದಿದ್ದರೂ ತಮ್ಮ ಜೀವನ ಸಾಧನವಾದ ಉದಕಪಾನಾದಿಗಳಲ್ಲಿ ಪ್ರವರ್ತಿಸುವುದರಿಂದ ಚೇಷ್ಟಾಶ್ರಯತ್ವವು ಸ್ಥಾವರಪ್ರಾಣಿಗಳಲ್ಲಿಯೂ ಇರುವುದರಿಂದ ಜಗತ್ ಶಬ್ದಕ್ಕೆ ಪ್ರಪಂಚಸಾಮಾನ್ಯವು ಅರ್ಥವೆಂದು ವ್ಯಾಖ್ಯಾನಮಾಡುವುದು ಉಚಿತವು. ಹಾಗಿಲ್ಲದಿದ್ದರೆ "ಸರ್ವೇಷು ಭೂತೇಷು" ಎಂಬ ವಚನದಲ್ಲಿರುವ ಭೂತಶಬ್ದಕ್ಕೆ ಇದನ್ನು ಅನುಸರಿಸಿ ಚರಪ್ರಾಣಿಸಾಮಾನ್ಯವೆಂಬ ಅರ್ಥವನ್ನು ಪರಿಗ್ರಹಿಸಿದರೆ ಶಬ್ದಾರ್ಥವನ್ನು ಸಂಕೋಚಮಾಡಿದ ದೋಷವು ಪ್ರಸಕ್ತವಾಗುವುದು. ಹೀಗೆಯೇ ಸಾಮಾನ್ಯವಾಚಕವಾದ ಶಬ್ದಕ್ಕೆ ವಿರೋಧವೇನೂ ಇಲ್ಲದಿದ್ದರೆ ವಿಶೇಷಾರ್ಥದಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪುವುದು ಅನ್ಯಾಯವು. ವಿಶೇಷಾರ್ಥವನ್ನು ಪರಿಗ್ರಹಿಸಿದರೆ ಬ್ರಹ್ಮವಸ್ತುವಿನಲ್ಲಿ ಪ್ರಪಂಚಸಾಮಾನ್ಯವನ್ನು ಕುರಿತು ಸೃಷ್ಟಿಸ್ಥಿತಿಲಯ ಕರ್ತೃತ್ವವೆಂಬ ಕಾರಣತ್ವವು ಸಿದ್ಧಿಸಲಾರದು. ಆದ್ದರಿಂದ ಪ್ರಾಣಿಸಾಮಾನ್ಯವೆಂಬ ಅರ್ಥವನ್ನು ಸೂಚಿಸುವ

**ಪ್ರಪಂಚಮಾತ್ರೋತ್ಪತ್ತ್ಯಾದಿಹೇತುತ್ವಂ ಸಂಕುಚಿತಂ ಭವೇತ್ । ಅತ ಏವಾಕರೇ ಏಜತ್ಪದಮುಪಾತ್ತಮ್। ಯಥಾ ಕಥಂಚಿತ್ ಕ್ರಿಯಾಶ್ರಯತ್ವೇನ ಪ್ರಾಣವತ್ತ್ವಮಾತ್ರಸ್ಯ ಸಮಷ್ಟಿಹಿರಣ್ಯಗರ್ಭಾಶ್ರಯತ್ವೇನ ಸರ್ವೇಷಾಂ ಪ್ರೇರ್ಯತ್ವಂ ಸಂಭವತೀತಿ ಭಾವಃ ॥**

---

ಚಲನಾರ್ಥವನ್ನು ಬೋಧಿಸುವ ಏಜತ್ ಎಂಬ ಪದವು ಪ್ರಯೋಗಿಸಲ್ಪಟ್ಟಿದೆ. ಚಲನಾದಿಕ್ರಿಯೆಗೆ ಆಶ್ರಯವಾದ ಪ್ರಾಣಿಸಾಮಾನ್ಯವು ಸಮಷ್ಟಿ ಹಿರಣ್ಯಗರ್ಭನನ್ನು ಆಶ್ರಯಿಸಿರುವುದರಿಂದ ಈಶ್ವರನಿಂದ ಪ್ರೇರೇಪಿಸಲ್ಪಡುವಿಕೆಯು ಸಂಭವಿಸುವುದು. ಏಜಂತಿ ಚ ತಾನಿ ಅನೇಕಾನಿ ಚ ತಾದೃಶಾನಿ ಚ ತಾನಿ ಜಗಂತಿ ಚ, ತಾನಿ ಈಷ್ಟೇ ಇತಿ ಎಂದು ವಿಗ್ರಹವಾಕ್ಯವು.

೬

ಏಕವೀರಾದಿಸಂಸೇವ್ಯಾ ಚೈಕಪ್ರಾಭವಶಾಲಿನೀ ।
ಈಕಾರರೂಪಾ ಚೇಶಿತ್ರೀ ಚೇಪ್ಸಿತಾರ್ಥಪ್ರದಾಯಿನೀ ॥

೧೯. ಓಂ ಏಕವೀರಾದಿಸಂಸೇವ್ಯಾಯೈ ನಮಃ ।

ಏಕವೀರಾದಿಸಂಸೇವ್ಯಾ । ಏಕಃ ಅನಿತರಸಾಧಾರಣಃ ವೀರಃ ಪುರಶ್ಚರ್ಯಾದಿನಾ ಕೃತಮಂತ್ರದೇವತಾಸಾಕ್ಷಾತ್ಕಾರಲಬ್ಧ ಪುರುಷಾರ್ಥಃ ಪುಮಾನ್ ವಿಜಯಪ್ರಾಪ್ತ್ಯಾಭ್ಯುದಯಶಾಲೀ । ರಾಜರಾಜನಿಷ್ಠಧೈರ್ಯಗಾಂಭೀರ್ಯಾದಿಗುಣವತ್ತ್ವೇನ ತತ್ತ ದ್ದೇವತೋಪಾಸಕಾಃ ಪುರುಷಾಃ ವೀರಾಃ ಇತ್ಯುಚ್ಯಂತೇ । ಯಾಸಾಂ ಶಕ್ತೀನಾಮಾದಯೋ ಯೇಷಾಂ ಪ್ರಾಣಿಕೋಟೀ ನಾಂ ತಾ ಏಕವೀರಾದಯಃ ತಾಸಾಂ ಕದಂಬೈಃ ಸಂಸೇವ್ಯಾ ಸಂಸೇವಿತುಂ ಯೋಗ್ಯಾ । ಯದಾ ಈಶ್ವರೀ ಭಕ್ತಾನನು ಗೃಹ್ಣಾತಿ ಸಗುಣವಿಗ್ರಹವತೀ ಸ್ಯಾತ್ ತದಾ ಅನೇಕಪರಿವಾರ ದೇವತಾಪರಿಸೇವಿತಾ ಮಂತ್ರದೇವತಾತ್ವೇನೋಪಾಸನೀಯೇ

---

೧೯. ಇತರ ಸಾಮಾನ್ಯರಲ್ಲದವರೂ ಪುರಶ್ಚರ್ಯಾದಿಗಳಿಂದ ಮಂತ್ರದೇವ ತಾಸಾಕ್ಷಾತ್ಕಾರವನ್ನು ಹೊಂದಿ ಪುರುಷಾರ್ಥಪ್ರಾಪ್ತಿಯಿಂದ ವಿಜಯಶಾಲಿ ಯಾಗಿಯೂ ಇರುವ ಆಯಾಯ ದೇವತೋಪಾಸಕರು ರಾಜಾಧಿರಾಜರಲ್ಲಿರುವ ಧೈರ್ಯಗಾಂಭೀರ್ಯಾದಿ ಗುಣಗಳಿಂದ ಕೂಡಿರುವುದರಿಂದ ಏಕವೀರರೆಂದು ಕರೆಯಲ್ಪಡುವರು. ಅವರೇ ಮೊದಲಾದ ಅನೇಕಶಕ್ತಿಪರಿವಾರದೇವತೆಗಳ ಕದಂಬದಿಂದ ಸೇವಿಸಲು ಯೋಗ್ಯಳು. ದೇವಿಯು ಭಕ್ತರನ್ನು ಅನುಗ್ರಹಿಸಲು ಸಗುಣವಾದ ಮೂರ್ತಿಯನ್ನು ಧರಿಸಿ ಪ್ರತ್ಯಕ್ಷಳಾಗುವ ಸಮಯದಲ್ಲಿ ಅನೇಕ ಪರಿವಾರದೇವತೆಗಳಿಂದ ಮಂತ್ರದೇವತಾರೂಪಳಾಗಿ ಉಪಾಸ್ಯಳಾಗಿರುವಳು ಎಂದು ತಾತ್ಪರ್ಯವು. ಅಥವಾ ಉಪಾಸಕರ ಇಷ್ಟಫಲಗಳನ್ನು ಕೊಡುತ್ತಲೂ ದೇವಿಯಿಂದ ಸ್ವಾಭೀಷ್ಟವರಗಳನ್ನು ಅಪೇಕ್ಷಿಸುತ್ತಲೂ ತಮ್ಮ ತಮ್ಮ ಪೀಠ ಗಳಲ್ಲಿ ನಿರೀಕ್ಷಿಸಿಕೊಂಡಿರುವ ರೇಣುಕಾ, ಶ್ಯಾಮಲಾ ಮುಂತಾದ ಪರಿವಾರ

ತ್ಯರ್ಥಃ। ಅಥವಾಪಿ ಕವೀರಾ ರೇಣುಕಾ ತದಾದಯಃ ಶಕ್ತಯಃ ಶ್ಯಾಮಲಾಪ್ರಮುಖಾಸ್ತಾಭಿಸ್ತತ್ಕಾಲಪ್ರಪಂಚೇ ಸ್ವಸ್ವಪೀಠೇ ಸ್ಥಿತಾಃ ಸತ್ಯಃ ಉಪಾಸಕಾನಾಂ ಅಭೀಷ್ಟವರಪ್ರದಾತ್ರ್ಯೋ ದೃಶ್ಯಂತೇ। ತಾ ಅಸ್ಯಾಃ ಪರಿಸೇವಕತ್ವೇನ ಸ್ವಯಮಭೀಷ್ಟ ವರಕಾಮಾಃ ಇತ್ಯಸ್ಯಾಃ ಪ್ರಕೃತಾಯಾಃ ಮಹಿಮಾತಿಶ ಯೋಕ್ತಿಃ।

## ೨೦. ಓಂ ಏಕಪ್ರಾಭವಶಾಲಿನ್ಯೈ ನಮಃ

ಏಕಪ್ರಾಭವಶಾಲಿನೀ। ಪ್ರಭೋಃ ಭಾವಃ ಪ್ರಾಭವಂ ರಕ್ಷ ಕತ್ವಂ ಏಕಂ ಅನಿತರಸಾಧಾರಣಂ ಚ ತತ್ ಪ್ರಾಭವಂ ಚ ತಚ್ಛಾಲತ ಇತಿ ತಥಾ। ಅಥವಾ ಪ್ರಾಭವಸ್ಯ ಸಾಪೇಕ್ಷಕಧರ್ಮ ತ್ವಾದೇಕಪದಸ್ಯ ಚ ಅನನ್ಯಗಾಮಿತ್ವಾರ್ಥಸ್ಯ ಸಾಮಾನಾಧಿ ಕರಣ್ಯೇನ ಸ್ವಾರಸ್ಯೇನ ಪರ್ಯಾಲೋಚ್ಯಮಾನೇನ ಅಯಮರ್ಥಃ

---

ದೇವತೆಗಳಿಂದ ಸೇವಿಸಲು ಅರ್ಹಳಾದವಳು. ಇದರಿಂದ ದೇವಿಯ ಮಹಿಮಾತಿ ಶಯವನ್ನು ವರ್ಣಿಸಿದಂತಾಗುವುದು. ಏಕಶ್ಚಾಸೌ ವೀರಶ್ಚ, ಸ ಆದಿರ್ಯಾಸಾಂ ತಾಃ, ತಾಭಿಃ ಸಂಸೇವಿತುಃ ಯೋಗ್ಯಾ, ಅಥವಾ ಏಕವೀರಾ ಆದಿರ್ಯಾಸಾಂ ತಾಭಿಃ ಸಂಸೇವ್ಯಾ ಎಂದು ವಿಗ್ರಹವು.

೨೦. ಅನಿತರಸಾಧಾರಣವಾದ ರಕ್ಷಕತ್ವ ವೆಂಬ ಪ್ರಭುತ್ವಗುಣದಿಂದ ಕೂಡಿರುವವಳು. ಅಥವಾ ಅನ್ಯವ್ಯಕ್ತಿಯಲ್ಲಿ ಸಂಭವವಿಲ್ಲದ ನಿಯಾಮಕತ್ವ ವೆಂಬ ಧರ್ಮದಿಂದ ಆಕ್ಷಿಪ್ತವಾದ ಮತ್ತು ಸೂಕ್ಷ್ಮರೂಪವಾದ ನಿಯಮ್ಯ ಪ್ರಪಂಚದಿಂದ ಸಹಿತಳಾದವಳು. ಇಲ್ಲಿ ನಿಯಾಮಕತ್ವಕ್ಕೆ ಏಕಶಬ್ದವು ವಿಶೇಷಣ ವಾಗಿರುವುದು. ಅದು ಏಕಾರ್ಥಬೋಧಕವಾಗಿರಬೇಕೆಂಬುದು ಉತ್ಸರ್ಗ ಸಿದ್ಧವು. ಅದರ ಸ್ವಾರಸ್ಯದಿಂದ ಇತರ ವ್ಯಕ್ತಿಯಲ್ಲಿಲ್ಲದ ನಿಯಾಮಕತ್ವವು ತೋರು ವುದು. ನಿಯಾಮಕತ್ವವು ಸೃಷ್ಟಿಪೂರ್ವದಲ್ಲಿ ಬ್ರಹ್ಮವಸ್ತುವಿನಲ್ಲಿರಬೇಕಾದರೆ ವಟಬೀಜದಲ್ಲಿ ಮುಂದಾಗುವ ಮಹಾವೃಕ್ಷವು ಸೂಕ್ಷ್ಮರೂಪದಿಂದ ಇದ್ದಂತೆ ಕೂಟಸ್ಥಚೈತನ್ಯದಲ್ಲಿ ಸಂಸ್ಕಾರರೂಪವಾಗಿ ನಿಖಿಲನಿಯಮ್ಯಲೋಕಗಳೂ ಇವೆ

**ಸೂಚ್ಯತೇ । ಪ್ರಾಭವಂ ಚ ನಿಯಮ್ಯ ಲೋಕೋದ್ಭವಂ ವಿನಾ ಅನುಪಪದ್ಯಮಾನಂ ತದಂತರ್ಗತತತ್ಕಾರ್ಯಮರ್ಥಾಪತ್ತ್ಯಾ ಸಿಧ್ಯತಿ। ತಥಾ ಚ ವಟಬೀಜವಸ್ತ್ವಂತರ್ಗತಪಶ್ಚಾದ್ಭಾವಿಕಾರ್ಯವತ್ಕೂಟಸ್ಥಚೈತನ್ಯಮಿತಿ ಭಾವಃ । ಅಥವಾ ಪ್ರಾಭವಂ ನಾಮೇಶ್ವರತ್ವಂ ತದಾಕ್ಷಿಪ್ತನಿಯಮ್ಯಜಗಚ್ಚೋಪಲಕ್ಷಣವಿಧಯಾ ಯಸ್ಯೈಕಸ್ಯಾಖಂಡಚೈತನ್ಯಸ್ಯ ತದೇಕಪ್ರಾಭವಮ್ । "ಪಾದೋಽಸ್ಯ ಸರ್ವಾ ಭೂತಾನಿ; ಏಕಾಂಶೇನಸ್ಥಿತೋ ಜಗತ್" ಇತಿ ಶ್ರುತಿಸ್ಮೃತಿಭ್ಯಾಂ ಭೂತಪೂರ್ವಗತ್ಯಾ ಪ್ರಾಭವೋಪಲಕ್ಷಿತಮೇಕಂ ಸಚ್ಚಿಚ್ಚೈತನ್ಯರೂಪಂ ಕಾಲತೇ ಆವಿಷ್ಕರೋತಿ ತಥಾ । ಅಥವಾ ಏಕಂ ಚ ತತ್ ಪ್ರಾಭವಂ ಚ ಏಕಪ್ರಾಭವಂ ಮುಖ್ಯಸಾರ್ವಭೌಮತ್ವಮಿತಿ ಯಾವತ್ । ಪ್ರಭುತ್ವಪರಂಪರಾಯಾಃ ಸವಿಶೇಷಾಯಾಃ ಕುತ್ರ ಚಿತ್ ಪರ್ಯವಸಾನಾವಶ್ಯಂಭಾವೇ "ಏಷ ಸರ್ವೇಶ್ವರ ಏಷ**

---

ಯೆಂದು ಸೂಚಿಸಲ್ಪಟ್ಟಿವೆ. ಅಥವಾ ಈಶ್ವರತ್ವವೂ ಅದರಿಂದ ಆಕ್ಷಿಪ್ತವಾಗಿ ಸೂಚಿಸಲ್ಪಟ್ಟಿರುವ ಪ್ರಪಂಚವೂ ಉಪಲಕ್ಷಣವಾಗಿ ಉಳ್ಳ ಅಖಂಡಚೈತನ್ಯವು ಏಕಪ್ರಾಭವಶಬ್ದದ ಅರ್ಥವು. ಅಂತಹ ಉಪಲಕ್ಷಣರೂಪಗಳಿಂದ ಸಹಿತವಾದ ಚೈತನ್ಯವನ್ನು ಆವಿಷ್ಕರಿಸುವವಳು. ಅಖಂಡಚೈತನ್ಯದಲ್ಲಿ ಉಪಲಕ್ಷಣವೆಂಬ ಏಕಾಂಶದಿಂದ ಸಮಸ್ತಪ್ರಪಂಚವು ಇದೆಯೆಂದು "ಪಾದೋಽಸ್ಯ ಸರ್ವಾ ಭೂತಾನಿ" "ಏಕಾಂಶೇನ ಸ್ಥಿತೋ ಜಗತ್" ಮುಂತಾದ ಶ್ರುತಿಸ್ಮೃತಿ ವಚನಗಳಿಂದ ಸಿದ್ಧವಾಗಿರುವುದು. ಅಥವಾ ಪ್ರಭುತ್ವದ ತಾರತಮ್ಯಕ್ಕೆ ಉತ್ಕೃಷ್ಟವಿಧಿರೂಪಳಾದ್ದರಿಂದ ಮುಖ್ಯ ಸಾರ್ವಭೌಮತ್ವದಿಂದ ಶೋಭಿಸುವವಳು. ಪ್ರಭುತ್ವಗಳು ಅನೇಕೋತ್ಕರ್ಷನಿಕರ್ಷಗಳನ್ನು ಹೊಂದಿವೆ. ಅದಕ್ಕೆ ಒಂದು ಕಡೆ ವಿಶ್ರಾಂತಿಯನ್ನು ಒಪ್ಪಲೇ ಬೇಕು. "ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲಃ" ಎಂಬ ಶ್ರುತಿಯಿಂದ ಅಂತರ್ಯಾಮಿಯಾದ ಪರಮಾತ್ಮನಲ್ಲಿ ವಾಗಾದಿ ಸಕಲೇಂದ್ರಿಯಪ್ರೇರಣಾರೂಪವಾದ ಮತ್ತು ಸಮಸ್ತ ಯತ್ನಗಳನ್ನು ಉಂಟುಮಾಡುವ ಸರ್ವೋತ್ಕೃಷ್ಟವಾದ ಪ್ರಭುತ್ವಕ್ಕೆ ದೇವಿಯು

**ಭೂತಾಧಿಪತಿರೇಷ ಭೂತಪಾಲ" ಇತಿ ಶ್ರುತ್ಯಾ ಅಂತರ್ಯಾಮಿತಯಾ ಸಾಕ್ಷಾತ್ಕೃತ್ಸ್ನತ್ವಾದಕತ್ವಯುಕ್ತ್ಯಾ ಚ ಇತರವಾಗಾದ್ಯವಯವಪ್ರೇರಣಾತಿಶಯಾನಾಂ ಪರ್ಯಾಪ್ತಿರತ್ರೈವಾಸ್ತೀತ್ಯಭಿಪ್ರಾಯಃ । ತಥಾ ಚ ನಿರಂಕುಶಸ್ವತಂತ್ರಜಗತ್ಕಾರಣತ್ವರೂಪ ತಟಸ್ಥಲಕ್ಷಣಲಕ್ಷಿತವೇದಾಂತಸಮನ್ವಯವಿಷಯೀಭೂತಾ ಅಖಂಡಸಚ್ಚಿದಾನಂದಸ್ವರೂಪಾ ಪರದೇವತಾ ಅವಶ್ಯಂ ಸ್ವಸ್ವರೂಪೇಣೈವ ಧ್ಯಾತವ್ಯೇತಿ ನಿಷ್ಕೃಷ್ಟಾರ್ಥಃ ।**

**ಇತಿ ತ್ರಿಶತ್ಯಾಂ ವಿದ್ಯಾಯಾಂ ದ್ವಿತೀಯಾಕ್ಷರನಾಮವ್ಯಾಖ್ಯಾಯಾಂ ಏಕಾರವರ್ಣಪ್ರಕಾಶಃ ದ್ವಿತೀಯಃ ।**

## ೧. ಓಂ ಈಕಾರರೂಪಾಯೈ ನಮಃ

**ಈಕಾರರೂಪಾ । ಈಕಾರಃ ರೂಪಂ ತೃತೀಯಾವಯವಃ ಯದ್ವಾಚಕಮಂತ್ರಸ್ಯ ಯಸ್ಯಾಃ ಸಾ ತಥಾ ।**

---

ಪರ್ಯವಸಾನಭೂಮಿಯಾಗಿರುವಳು. ನಿರಂಕುಶಸ್ವಾತಂತ್ರ್ಯ ಜಗದಾವರಣತ್ವ ಲಕ್ಷಣಗಳಿಂದ ಕೂಡಿ ಸರ್ವವೇದಾಂತಸಮನ್ವಯಕ್ಕೆ ವಿಷಯಳಾಗಿಯೂ ಅಖಂಡ ಸಚ್ಚಿದಾನಂದ ಸ್ವರೂಪಳಾಗಿಯೂ ದೇವಿಯು ಇರುವಳೆಂದು ತಾತ್ಪರ್ಯವು. ಪ್ರಭೋರ್ಭಾವಃ ಪ್ರಾಭವಂ, ಏಕಂ ಚ ತತ್ ಪ್ರಾಭವಂ ಚ ತಚ್ಛಾಲತೇಽಸ್ಯಾಮ್ ಎಂದು ವಿಗ್ರಹವು.

ಲಲಿತಾ ತ್ರಿಶತೀ ಭಾಷ್ಯವ್ಯಾಖ್ಯಾನದಲ್ಲಿ ದ್ವಿತೀಯಪ್ರಕಾಶವು ಸಮಾಪ್ತವು

೧. ಸ್ವಪ್ರತಿಪಾದಕಮಂತ್ರದಲ್ಲಿ ಮೂರನೆಯ ವರ್ಣವಾಗಿ ಈ ಕಾರವುಳ್ಳವಳು ಈ ಕಾರಃ ರೂಪಂ ಯಸ್ಯಾಃ ಎಂದು ವಿಗ್ರಹವು.

## ೨. ಓಂ ಈಶಿತ್ರ್ಯೈ ನಮಃ

ಈಶಿತ್ರೀ । ಇಚ್ಛತಿ ಈಷ್ಟೇ ಇತಿ ಈಶಿತ್ರೀ ಸರ್ವಪ್ರೇರಿಕಾ ಇತ್ಯರ್ಥಃ ।

## ೩. ಓಂ ಈಪ್ಸಿತಾರ್ಥಪ್ರದಾಯಿನ್ಯೈ ನಮಃ ।

ಈಪ್ಸಿತಾರ್ಥಪ್ರದಾಯಿನೀ । ಅರ್ಥ್ಯಂತೇ ಪ್ರಾರ್ಥ್ಯಂತೇ ಇತ್ಯರ್ಥಾಃ ಅಭ್ಯುದಯನಿಶ್ರೇಯಸಸ್ವರೂಪಾಃ । ಆಪ್ತುಂ ಗಂತುಂ ಪ್ರಾಪ್ತುಂ ಇಚ್ಛಾವಿಷಯೀಭೂತಾ ಈಪ್ಸಿತಾಃ । ತೇ ಚ ತೇ ಅರ್ಥಾಶ್ಚೇತಿ ಕರ್ಮಧಾರಯಃ ಈಪ್ಸಿತಾರ್ಥಾನ್ ಪ್ರದದಾತೀತಿ ತಥಾ ಕೇವಲಕರ್ಮಣಾಮದೃಷ್ಟದ್ವಾರಾ ಕಾಲಾಂತರಭಾವಿಫಲದಾತೃತ್ವಮಚೇತನತ್ವಾನ್ನೋಪಪದ್ಯತೇ। ತಾದೃಶಾನಾಂ ಕಸ್ಮಿನ್ನಪ್ಯರ್ಥೇ ಸಾಮರ್ಥ್ಯಾದರ್ಶನಾತ್ । ಚೇತನಾಧಿಷ್ಠಿತಾನಾಂ ತು ಕರ್ಮಣಾಂ ಭೃತ್ಯಕೃತಪರಾಕ್ರಮಾದಿತುಷ್ಟರಾಜವತ್ತದಾರಾಧಿತಪರಮೇಶ್ವರಃ ಕರ್ಮಾಧ್ಯಕ್ಷಃ, ಇತಿ ಶ್ರುತ್ಯಾ ಸರ್ವಜ್ಞಸ್ಯ ತತ್ತದಧಿಕಾರಿಕೃತಪುಣ್ಯಾ

---

೨. ಸರ್ವಪ್ರಾಣಿನಿಯಾಮಕಳು ಅಥವಾ ನಿಯಮನವನ್ನು ಇಚ್ಛಿಸುವವಳು. ಈಷ್ಟೇ ಇತಿ ಈಶಿತ್ರೀ ಎಂದು ವಿಗ್ರಹವು.

೩. ಹೊಂದಬೇಕೆಂದು ಆಶಿಸಲ್ಪಡುವ ಅಭ್ಯುದಯ ನಿಶ್ರೇಯಸಗಳೆಂಬ ಪುರುಷಾರ್ಥಗಳನ್ನು ಕೊಡುವವಳು. ಈ ನಾಮದಿಂದ ಅನೀಶ್ವರವಾದಿಮೀಮಾಂಸಕರ ಮತವು ಖಂಡಿಸಲ್ಪಡುವುದು, ಅವರು ಕೇವಲಕರ್ಮದಿಂದಲೇ ಕಾಲಾಂತರದಲ್ಲಿ ಫಲವು ಹುಟ್ಟುವುದೆಂದು ವಾದಿಸುವರು. ಅದೃಷ್ಟದಮೂಲಕ ಕೇವಲ ಕರ್ಮಗಳಿಗೆ ಅಚೇತನವಾದ್ದರಿಂದ ಫಲದಾನಶಕ್ತಿಯು ಸಂಭವಿಸುವುದಿಲ್ಲ. ಅಚೇತನವಾದ ಕರ್ಮಕ್ಕೆ ಚೇತನಸಹಾಯವಿಲ್ಲವೆ ಫಲವನ್ನು ಸಿದ್ಧಪಡಿಸುವ ಶಕ್ತಿಯನ್ನು ಎಲ್ಲಿಯೂ ನೋಡಲಿಲ್ಲ. ಚೇತನಸಹಾಯವುಳ್ಳ ಕರ್ಮಗಳಿಂದ ಫಲವು ಸಂಭವಿಸಬಹುದು. ಭೃತ್ಯರು ತೋರಿಸಿದ ಪರಾಕ್ರಮಾದಿ ಕರ್ಮಗಳಿಂದ ಸಂತುಷ್ಟನಾಗಿ ರಾಜನು ಕರ್ಮಕ್ಕೆ ತಕ್ಕ ಫಲವನ್ನುಕೊಡುವನು.

ಪುಣ್ಯಾನುರೂಪತಯಾ ಫಲಪ್ರದಾನೇ ಸಮರ್ಥಸ್ಯ ಸತ್ತ್ವ ಕಲ್ಪನೇ ತದನ್ಯಸ್ಯ ಚೇತನಸ್ಯ ಜೀವಾದೇಸ್ತತ್ರ ಸಾಮರ್ಥ್ಯ ವಿರಹಾತ್ ಸ ಏವ ತತ್ತದನುಗುಣವಿಷಯೇಚ್ಛೋತ್ಪಾದನೇನ ತತ್ಸಾಧನಾನುಷ್ಠಾಪಯಿತಾ ಸನ್ ತತ್ಫಲಕಾಮನಾಂ ಪೂರಯ ತೀತ್ಯನೀಶ್ವರಮೀಮಾಂಸಕಮತನಿರಾಸೋ ದ್ರಷ್ಟವ್ಯಃ। ಅಥವಾ ಈಪ್ಸಿತಾ ಜಿಜ್ಞಾಸಿತಾ ತಥಾ ಚ ಸ್ವಸ್ವರೂಪಪ್ರತಿಪಾದಕ ವೇದಾಂತಶ್ರವಣಮನನನಿದಿಧ್ಯಾಸನನವಿಷಯೀಕೃತಾ ಸತೀ ಅರ್ಥಂ ಪ್ರಾರ್ಥ್ಯಮಾನಂ ಸರ್ವಾಭ್ಯರ್ಹಿತಮೋಕ್ಷರೂಪಂ ಪುರುಷಾರ್ಥಂ ಪ್ರದದಾತೀತಿ ತಥಾ ॥

---

ಅದರಂತೆ ಕರ್ಮಸಾಕ್ಷಿಯಾದ ಈಶ್ವರನು ಆಯಾಯ ಅಧಿಕಾರಿಗಳು ಮಾಡಿದ ಪುಣ್ಯ–ಪಾಪಕರ್ಮಗಳಿಗೆ ಅನುರೂಪವಾದ ಫಲವನ್ನು ಕೊಡುತ್ತಾನೆ. ಈರೀತಿ ಯಿಂದ ಕರ್ಮಗಳು ಫಲಸಾಧನವಾಗುವುವು. ಕರ್ಮಫಲದಾನಶಕ್ತಿಯು ಬೇರೊಬ್ಬ ಜೀವನಲ್ಲಿ ಇಲ್ಲವಾದ್ದರಿಂದ ಈಶ್ವರನು ಆಯಾಯ ವಿಷಯಪ್ರಾಪ್ತಿ ಯಲ್ಲಿ ಇಚ್ಛೆಯನ್ನು ಹುಟ್ಟಿಸಿ ಸಾಧನಕರ್ಮಗಳನ್ನು ಅನುಷ್ಠಾನಮಾಡಿಸಿ ಆಯಾಯ ಫಲಗಳನ್ನು ಕೊಟ್ಟು ಆ ಕಾಮನೆಯನ್ನು ಪೂರ್ತಿಗೊಳಿಸುವನು. ಅಥವಾ ಜಿಜ್ಞಾಸಿತಳಾಗಿ ಆ ಜಿಜ್ಞಾಸಾ ಮೂಲಕವಾಗಿ ಬ್ರಹ್ಮಸ್ವರೂಪವನ್ನು ಬೋಧಿಸುವ ವೇದಾಂತಶ್ರವಣ-ಮನನ-ನಿಧ್ಯಾಸನಗಳಿಂದ ವಿಷಯೀಕರಿಸಲ್ಪಟ್ಟು ಪರಮಪುರಷಾರ್ಥವಾದ ಮೋಕ್ಷವನ್ನು ಕೊಡುವವಳು. ಅರ್ಥ್ಯಂತ ಇತ್ಯರ್ಥಾಃ, ಅಪ್ತು ಮಿಷ್ಟಾ ಈಪ್ಸಿತಾಃ, ತೇ ಅರ್ಥಾಶ್ಚ, ತಾನ್ ಪ್ರದದಾತೀತಿ. ಅಥವಾ ಅರ್ಥಂ ಪ್ರದದಾತೀತಿ ಅರ್ಥಪ್ರದಾಯಿನೀ, ಈಪ್ಸಿತಾ ಚ ಸಾ ಅರ್ಥ ಪ್ರದಾ ಯನಿ ಚ ಎಂದು ವಿಗ್ರಹವು.

## ೧೦

ಈದೃಗಿತ್ಯವಿನಿರ್ದೇಶ್ಯಾ ಚೇಶ್ವರತ್ವವಿಧಾಯಿನೀ ।
ಈಶಾನಾದಿಬ್ರಹ್ಮಮಯೀ ಚೇಶಿತ್ವಾದ್ಯಷ್ಟಸಿದ್ಧಿದಾ ॥

### ೪. ಓಂ ಈದೃಗಿತ್ಯವಿನಿರ್ದೇಶ್ಯಾಯೈ ನಮಃ

ಈದೃಗಿತ್ಯವಿನಿರ್ದೇಶ್ಯಾ। ಈದೃಕ್ ಏತಲ್ಲಕ್ಷಣಲಕ್ಷಿತಏತಾದೃಶ ಪರಿಮಾಣ ಏವಂಸ್ವರೂಪಃ ಏತಾದೃಶಧರ್ಮವಾನ್ ಪ್ರತ್ಯಕ್ಷ ಸಿದ್ಧಾರ್ಥೋ ವಿನಿರ್ದೇಷ್ಟುಂ ಶಕ್ಯತೇ । "ಯಚ್ಚಕ್ಷುಷಾ ನ ಪಶ್ಯತಿ" ಇತ್ಯಾದಿಶ್ರುತ್ಯಾ ಸರ್ವೇಂದ್ರಿಯಗೋಚರತ್ವನಿರಾಕರಣಾತ್ ವಿನಿರ್ದೇಶ್ಯಾ ನ ಭವತಿ। ಔಪನಿಷದಾನಾಂ ಮತೇ ತು ಉಪನಿಷದಾಂ ವೇದೈಕದೇಶತ್ವೇನ ಇತರಪ್ರಮಾಣಾನಪೇಕ್ಷತಯಾ ಅಜ್ಞಾತಾರ್ಥಜ್ಞಾಪಕತ್ವೇನ ಸ್ವಾಪ್ರಾಮಾಣ್ಯಮುರರೀಕೃತಮ್ । ಇದಮೇವ ಏತಾದೃಗೇವೇತಿ ಪ್ರತ್ಯಕ್ಷಸಿದ್ಧಾರ್ಥ

---

೪. ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗುವ ಅರ್ಥವನ್ನು, ಈ ತರಹವಿರುವುದು, ಇಷ್ಟು ಪರಿಮಾಣವು, ಈರೂಪವು ಮತ್ತು ಇಂತಹ ಧರ್ಮಗಳಿಂದ ಕೂಡಿರುವುದೆಂದು ನಿರ್ದೇಶ ಮಾಡಲು ಸಾಧ್ಯವಾಗುವುದು "ಯಚ್ಚಕ್ಷುಷಾ ನ ಪಶ್ಯತಿ" ಮುಂತಾದ ಶ್ರುತಿಯಿಂದ ಸಕಲೇಂದ್ರಿಯಗಳಿಗೂ ಗೋಚರ ವಾಗದಿರುವ ಪರದೇವತೆಯು ನಿರ್ದೇಶಿಸಲು ಅಶಕ್ಯಳು. ಆದ್ದರಿಂದ "ಈದೃಕ್"ಮುಂತಾದ ಶಬ್ದಗಳಿಂದ ನಿರ್ದೇಶಿಸಲು ಅನರ್ಹಳು. ಔಪನಿಷದರ ಸಿದ್ಧಾಂತದಲ್ಲಿ ವೇದಗಳಿಗೆ ಸೇರಿದ ಉಪನಿಷತ್ತುಗಳು ಇತರ ಪ್ರಮಾಣಗಳನ್ನು ಅಪೇಕ್ಷಿಸದಿರುವುದರಿಂದ ಸ್ವತಃ ಪ್ರಮಾಣವಾದುವುಗಳು. ಪ್ರತ್ಯಕ್ಷಸಿದ್ಧವಾದ ಅರ್ಥವನ್ನು ಉಪನಿಷತ್ತುಗಳು ಬೋಧಿಸಿದರೆ ತಿಳಿದಿರುವ ಅರ್ಥವನ್ನು ಬೋಧಿಸುವುದರಿಂದ ಅನುವಾದಕವಾಗಿ ಇತರ ಪ್ರಮಾಣಸಾಪೇಕ್ಷತ್ವವೆಂಬ ಅಪ್ರಾಮಾಣ್ಯವು ಬರುವುದು. ಆದುದರಿಂದ ಅಪೂರ್ವವಾದ, ಸರ್ವೇಂದ್ರಿಯಾಗಮ್ಯವಾದ ಪರದೇವತೆಯನ್ನು ಉಪನಿಷತ್ತುಗಳು ಬೋಧಿಸುವುದರ ಮೂಲಕ ಪ್ರಮಾಣ

ಜ್ಞಾಪನೇ ತಾಸಾಮನುವಾದಕತ್ವೇನ ಸಾಪೇಕ್ಷತ್ವರೂಪ ಮಪ್ರಾಮಾಣ್ಯಂ ಪ್ರಸಜ್ಯೇತೇತ್ಯಭಿಪ್ರಾಯಃ।

## ೫. ಓಂ ಈಶ್ವರತ್ವವಿಧಾಯಿನ್ಯೈ ನಮಃ।

ಈಶ್ವರತ್ವವಿಧಾಯಿನೀ। ಈಶ್ವರಸ್ಯ ಭಾವಃ ತಸ್ಯೈಕ್ಯಂ ವಿದಧಾತಿ। ಆವರಣವಿಕ್ಷೇಪಶಕ್ತಿಮದಜ್ಞಾನನಿವರ್ತಕಾಖಂಡಾಕಾರಚೈತನ್ಯಸ್ವರೂಪಾ ಸತೀ ಭೇದಬುದ್ಧಿಮಾತ್ರಸಂಪಾದಿತ್ವೈಶ್ವರ್ಯೈಕ್ಯಾಯೋಗಭ್ರಮಂ ನಿವರ್ತಯತೀತ್ಯರ್ಥಃ। ಸ್ವೇನ ರೂಪೇಣಾಭಿನಿಷ್ಪದ್ಯತೇ ಇತಿ ಶ್ರುತೇಃ। ಅಥವಾ ಈಶ್ವರತ್ವಂ ನಾಮ ನಾನಾದೇಶವಿದ್ಯಾಧನೋತ್ಕರ್ಷಾದಿಮತ್ತ್ವಂ ತತ್ತತ್ಪ್ರಾಣಿನಿಕಾಯಪುಣ್ಯಪ್ರಾರಬ್ಧಾನುಸಾರೇಣ ಕರ್ಮಫಲಂ ಪ್ರಯಚ್ಛತೀತಿ ವಾ।

---

ವಾಗುವುವು. ಈದೃಕ್ - ಇತಿ ವಿನಿರ್ದೇಷ್ಟುಂ ಶಕ್ಯಾ ನ ಭವತಿ ಎಂದು ವಿಗ್ರಹವು.

೫. ಅಖಂಡಾಕಾರಚೈತನ್ಯರೂಪಳಾದ ದೇವಿಯು ದ್ವೈತಭ್ರಮದಿಂದುಂಟಾದ ಅನೀಶ್ವರತ್ವ ಬುದ್ಧಿಯನ್ನೂ ಆವರಣ-ವಿಕ್ಷೇಪ ಶಕ್ತಿದ್ವಯದಿಂದ ಕೂಡಿದ ಅಜ್ಞಾನವನ್ನೂ ನಿವಾರಣಮಾಡಿ ಈಶ್ವರನ ಧರ್ಮವಾದ ಐಕ್ಯವನ್ನು ಕೊಡುವಳು. ಆದ್ದರಿಂದ ಈಶ್ವರತ್ವವನ್ನು ಕೊಡುವವಳು. ದ್ವೈತಭ್ರಾಂತಿಯನ್ನು ಕಳೆದುಕೊಂಡು ನಿಜರೂಪದಿಂದಿರುವುದು ಮುಕ್ತಿಯು. ಎಂಬ ಅಂಶವು "ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂಬ ಶ್ರುತಿಯಲ್ಲಿ ವ್ಯಕ್ತವಾಗಿದೆ. ಅಥವಾ ಅನೇಕ ದೇಶ-ವಿದ್ಯಾ—ಧನಾದಿಗಳಲ್ಲಿ ಉತ್ಕರ್ಷರೂಪವಾದ ಐಶ್ವರ್ಯವನ್ನು ಆಯಾಯ ವಿಶಿಷ್ಟಶರೀರವನ್ನು ಪರಿಗ್ರಹಿಸಿದ ಪ್ರಾಣಿಗಳಿಗೆ ಪ್ರಾರಬ್ಧಪುಣ್ಯಪರಿಪಾಕಫಲವನ್ನಾಗಿ ಕೊಡುವವಳು. ಈಶ್ವರತ್ವಂ ವಿದಧಾತಿ ಎಂದು ವಿಗ್ರಹವು.

## ೬. ಓಂ ಈಶಾನಾದಿಬ್ರಹ್ಮಮಯ್ಯೈ ನಮಃ।

ಈಶಾನಾದಿಬ್ರಹ್ಮಮಯೀ । ಈಶಾನತತ್ಪುರುಷಾಘೋರ ವಾಮದೇವಸದ್ಯೋಜಾತಾಖ್ಯಾನಿ ಪಂಚ ಬ್ರಹ್ಮಾಣಿ ತಾನಿ ಮಯಂ ಸ್ವರೂಪಮಸ್ಯಾ ಅಸ್ತೀತಿ ಸಾ ತಥಾ। ಅಥವಾ ಈಶಾನಃ ಆದಿರ್ಯೇಷಾಂ ತೇ ತಥಾ ಅಧಿಕಾರಿಪುರುಷಾಃ ವಿಷ್ಣುಬ್ರಹ್ಮೇಂದ್ರಾದಯಃ, ತೇಷಾಮಪಿ ತತ್ತನ್ನಾಮರೂಪ ವಿಶಿಷ್ಟಾನಾಂ ಅಹಂಬುದ್ಧಿಮತಾಂ ಅಂತರ್ಯಾಮಿಸ್ವರೂಪೇಣ ಬುದ್ಧಿಪ್ರೇರಕಸಚ್ಚಿದಾನಂದಸ್ವರೂಪಪರಬ್ರಹ್ಮಾನಂದಪ್ರಕಾಶಾತ್ಮನಾ ಸ್ಫುರತೀತಿ ತಥಾ।

## ೭. ಓಂ ಈಶಿತ್ವಾದ್ಯಷ್ಟಸಿದ್ಧಿದಾಯೈ ನಮಃ

ಈಶಿತ್ವಾದ್ಯಷ್ಟಸಿದ್ಧಿದಾ। ಈಶಿತ್ವಮಾದಿರ್ಯಾಸಾಂ ತಾಸ್ತಥಾ। ಅಣಿಮಾ ಮಹಿಮಾ ಲಘಿಮಾ ಗರಿಮಾ ಪ್ರಾಪ್ತಿರೀಶತಾ। ಪ್ರಾ

---

೬. ಈಶಾನ-ತತ್ಪುರುಷ–ಅಘೋರ-ವಾಮದೇವ–ಸದ್ಯೋಜಾತ, ಎಂಬ ಪಂಚಬ್ರಹ್ಮಮೂರ್ತಿಗಳು, ಸ್ವರೂಪವಾಗಿ ಉಳ್ಳವಳು. ಅಥವಾ ನಾಮರೂಪ ಗಳಿಂದಲೂ ಅಹಂಭಾವದಿಂದಲೂ ಕೂಡಿರುವ ಈಶಾನ ಮುಂತಾದ ವಿಷ್ಣು ಬ್ರಹ್ಮ-ಇಂದ್ರಾದಿ ಅಧಿಕಾರಿಕ ಪುರುಷರಲ್ಲಿ ಅಂತರ್ಯಾಮಿಯಾಗಿ ಬುದ್ಧಿಯನ್ನು ಪ್ರೇರೇಪಿಸುವ ಸಚ್ಚಿದಾನಂದ ಬ್ರಹ್ಮಸ್ವರೂಪವಾದ ಬ್ರಹ್ಮಾನಂದ ರೂಪಳಾಗಿ ಪ್ರಕಾಶಿಸುವವಳು. ಈಶಾನಃ + ಆದಿರ್ಯೇಷಾಂ ತಾನಿ ಬ್ರಹ್ಮಾಣಿ ಮಯಂ ಯಸ್ಯಾಃ, ಅಥವಾಈಶಾನ ಆದಿರ್ಯೇಷಾಂ ತೇ ತೇಷಾಂ ಬ್ರಹ್ಮಮಯೀ ಎಂದು ವಿಗ್ರಹವು.

೭. ಈಶಿತ್ವವೆಂಬ ಸಿದ್ಧಿಯೇ ಆದಿಯಾಗಿರುವ ಅಷ್ಟೈಶ್ವರ್ಯಸಿದ್ಧಿಗಳನ್ನು ಕೊಡುವವಳು. ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಈಶಿತಾ, ಪ್ರಾಕಾಮ್ಯಂ ವಶಿತ್ವಂ–ಎಂಬುದಾಗಿ ಅಷ್ಟಸಿದ್ಧಿಗಳು "ಅಣಿಮಾ, ಮಹಿಮಾ ಲಘಿಮಾ ಗರಿಮಾ ಪ್ರಾಪ್ತಿರಿಶಿತಾ ಪ್ರಾಕಾಮ್ಯಂ ಚ ವಶಿತ್ವಂ ಚ ಯತ್ರ

**ಕಾಮ್ಯಂ ಚ ವಶಿತ್ವಂ ಚ ಯತ್ರ ಕಾಮಾಃ ಪರಾಗತಾ· ಇತಿ ವಚನಾತ್ । ತಾಃ ಸಿದ್ಧೀರಷ್ಟೌ ದದಾತೀತಿ ತಥಾ । ಅಣಿಮಾ ಕ್ಷಣಮಾತ್ರೇಣ ಅತಿಸೂಕ್ಷ್ಮಭಾವಃ । ಮಹಿಮಾ ಮಹತೋ ಭಾವಃ । ಲಘಿಮಾ ಲಾಘವಂ । ಗರಿಮಾ ಗುರೋರ್ಭಾವಃ । ಜಡತರಪರ್ವತಾದಿವತ್ ಭಾರವಶೇನಾಪ್ರಕಂಪಿತತ್ವಮಿತ್ಯರ್ಥಃ । ಕ್ಷಣಮಾತ್ರೇಣ ವಿರಾಡಾಕೃತಿಮತ್ತ್ವಂ ಪ್ರಾಪ್ತಿಃ । ಹಸ್ತೇನ ಚಂದ್ರಮಂಡಲಾದಿಸ್ಪರ್ಶಃ ಈಶಿತಾ, ಇಂದ್ರಾದೀನಾಮಪಿ ಪ್ರೇರಕತಾ । ಪ್ರಾಕಾಮ್ಯಂ ಅಪ್ರತಿಹತಕಾಮನಾವತ್ತ್ವಂ, ವಾಂಛಿತಾರ್ಥಫಲಪ್ರಾಪ್ತಿರಿತ್ಯರ್ಥಃ । ವಶಿತ್ವಂ ಸರ್ವಲೋಕವಶೀಕರಣಸಾಮರ್ಥ್ಯಂ । ಯತ್ರ ಕಾಮಾಃ ಪರಾಗತಾಃ । ಕಾಮ್ಯಂತ ಇತಿ ಕಾಮಾ ವಿಷಯಾಃ ಯತ್ರ ಯಸ್ಮಿನ್ ಐಶ್ವರ್ಯೇ ಸತಿ ಪರಾಗತಾಃ ಬಹಿರ್ಭೂತಾ ಭವಂತಿ । ವಿಷಯಾಣಾಮನುಭವಾಭಾವೇಽಪಿ ತಜ್ಜನ್ಯಸುಖವತ್ತ್ವಂ ಆಪ್ತಕಾಮತ್ವಮಿತ್ಯರ್ಥಃ । ಏತಾಃ ಅಷ್ಟಸಿದ್ಧಯಃ ।**

---

ಕಾಮಾಃ ಪರಾಗತಾಃ'' ಎಂಬ ವಚನದಲ್ಲಿ ಕಂಡಿವೆ. ಒಂದು ನಿಮಿಷದಲ್ಲಿ ಅತಿ ಸೂಕ್ಷ್ಮರೂಪವನ್ನು ಹೊಂದುವುದು ಅಣಿಮಾ ಎಂಬ ಸಿದ್ಧಿಯು, ಹಾಗೆಯೇ ಕ್ಷಣಮಾತ್ರದಲ್ಲಿ ದೊಡ್ಡದಾಗುವಿಕೆಯು ಮಹಿಮಾ ಎಂಬ ಸಿದ್ಧಿಯು, ಹಗುರವಾಗಿರುವುದು ಲಘಿಮಾ ಎಂಬ ಸಿದ್ಧಿಯು. ಅತಿಭಾರವಾದ ಪರ್ವತದಂತೆ ಚಲಿಸದಂತಾಗುವ ಭಾರಹೊಂದುವುದು ಗರಿಮಾ ಎಂಬ ಸಿದ್ಧಿಯು. ಕ್ಷಣಮಾತ್ರಕ್ಕೆ ವಿರಾಡಾಕಾರವನ್ನು ಹೊಂದುವಿಕೆಯು ಪ್ರಾಪ್ತಿ ಎಂಬ ಸಿದ್ಧಿಯು. ಹಸ್ತದಿಂದ ಚಂದ್ರಮಂಡಲ ಮುಂತಾದುದನ್ನು ಮುಟ್ಟುವುದು, ಮತ್ತು ಇಂದ್ರಾದಿಗಳನ್ನು ಪ್ರೇರೇಪಿಸುವುದು ಈಶಿತಾ ಎಂಬ ಸಿದ್ಧಿಯು, ನಿರಂಕುಶವಾದ ಸರ್ವಕಾಮಪ್ರಾಪ್ತಿಯು ಪ್ರಾಕಾಮ್ಯವೆಂಬ ಸಿದ್ಧಿಯು, ಸರ್ವಲೋಕವಶೀಕರಣಸಾಮರ್ಥ್ಯವು ವಶಿತ್ವವೆಂಬ ಸಿದ್ಧಿಯು. ಆಪ್ತಕಾಮರಿಗೆ ವಿಷಯಾನುಭವವಿಲ್ಲದಿದ್ದರೂ ಅದರಿಂದುಂಟಾಗುವ ಸುಖವು ಲಭಿಸುವುದರಿಂದ ಈ ಅಷ್ಟೈಶ್ವರ್ಯಸಿದ್ಧಿಯಿಂದ ಕಾಮಗಳು ಲಯಹೊಂದುವುವು, ಇಂತಹ ಅಷ್ಟಸಿದ್ಧಿಗಳನ್ನು ಕೊಡುವವಳು, ಅಷ್ಟೌ ಚ ತಾಃ ಸಿದ್ಧಯಶ್ಚ ತಾ ದದಾತಿ ಎಂದು ವಿಗ್ರಹವು.

## ೧೧

ಈಕ್ಷಿತ್ರೀಕ್ಷಣಸೃಷ್ಟಾಣ್ಡಕೋಟಿರೀಶ್ವರವಲ್ಲಭಾ ।
ಈಡಿತಾ ಚೇಶ್ವರಾರ್ಧಾಂಗಶರೀರೇಶಾಧಿದೇವತಾ ॥

### ೮. ಓಂ ಈಕ್ಷಿತ್ರ್ಯೈ ನಮಃ ।

ಈಕ್ಷಿತ್ರೀ । ಉದಾಸೀನದ್ರಷ್ಟ್ರೀ ಸಾಕ್ಷಿಣೀ ಅಸಂಗೋದಾಸೀನಜ್ಞಾನಸ್ವರೂಪೇತ್ಯರ್ಥಃ । ಸಾಕ್ಷೀ ಚೇತಾ ಇತಿ ಶ್ರುತೇಃ । ಆವಿಃ ಸಂನಿಹಿತಂ ಗುಹಾಯಾಂ ಇತಿ ಶ್ರುತೇಃ ।

### ೯. ಓಂ ಈಕ್ಷಣಸೃಷ್ಟಾಂಡಕೋಟಯೇ ನಮಃ ।

ಈಕ್ಷಣಸೃಷ್ಟಾಂಡಕೋಟಿಃ । ಅಂಡಾನಾಂ ಬ್ರಹ್ಮಾಂಡಾನಾಂ ಕೋಟಯಃ । ಅಸಂಖ್ಯಾಕಾಃ, ಭೂತಭಾವಿಕಾಲಭೇದೇನ ಬಹುವಚನಂ ಕೋಟಿಶಬ್ದಸ್ಯ, ಅನಾದಿತ್ವಾತ್ ಸಂಸಾರಮಂಡಲಸ್ಯ, ಈಕ್ಷಣೇನ ಭಾವಿಕಾರ್ಯಾಲೋಚನೇನ ಸೃಷ್ಟಾಃ ಅಂಡ

---

೮. "ಸಾಕ್ಷೀ ಚೇತಾ" "ಆವಿಃ ಸಂನಿಹಿತಂ ಗುಹಾಯಾಂ" ಇತ್ಯಾದಿ ಶ್ರುತಿವಚನದಿಂದ ಅಸಂಗೋದಾಸೀನಜ್ಞಾನಸ್ವರೂಪದಿಂದ ಉದಾಸೀನಳಾಗಿ ಸಾಕ್ಷಿರೂಪಳಾಗಿರುವಳು ಸಾಕ್ಷಾದೀಕ್ಷತೇ ಎಂದು ವಿಗ್ರಹವು.

೯. "ತದೈಕ್ಷತ ಬಹು ಸ್ಯಾಂ ಪ್ರಜಾಯೇಯ, ಸ ಈಕ್ಷಾಂಚಕ್ರೇ, ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ನಾನ್ಯತ್ಕಿಂಚನ ಮಿಷತ್ ಸ ಈಕ್ಷತ ಲೋಕಾನ್ನು ಸೃಜಾ ಇತಿ ಸ ಇಮಾನ್ ಲೋಕಾನಸೃಜತ" ಮುಂತಾದ ಉಪನಿಷದ್ವಾಕ್ಯಗಳು ಜಗತ್ಸೃಷ್ಟಿಯ ಆದಿಯಲ್ಲಿ ಭಾವಿಕಾರ್ಯಾಲೋಚನ ರೂಪವಾದ ಈಕ್ಷಣವೃತ್ತಿಯನ್ನು ಜಗತ್ಕಾರಣ ವಸ್ತುವಿನಲ್ಲಿ ಪ್ರತಿಪಾದಿಸುತ್ತವೆ, ಅಂತಹ ಈಕ್ಷಣದಿಂದ ಅನಾದಿಯಾದ ಸಂಸಾರ ಮಂಡಲದಲ್ಲಿ ಭೂತ-ಭಾವಿ ವರ್ತಮಾನರೂಪಗಳಾದ ಗಣನಾತೀತವಾದ ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿ ಮಾಡಿರುವವಳು. ಪ್ರಕೃತಿಶ್ಚ ಪತಿಜ್ಞಾ-ದೃಷ್ಟಾಂತಾನುಪರೋಧಾತ್ ಎಂಬ

ಕೋಟಿಯೋ ಯಯಾ ಸಾ ತಥಾ "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ಸ ಈಕ್ಷಾಂಚಕ್ರೇ" "ಆತ್ಮಾ ವಾ ಇದ ಮೇಕಮಗ್ರ ಆಸೀತ್ ನಾನ್ಯತ್ಕಿಂಚನ ಮಿಷತ್ ಸ ಈಕ್ಷತ ಲೋಕಾನ್ನು ಸೃಜಾ ಇತಿ ಸ ಇಮಾನ್ ಲೋಕಾನಸೃಜತ" ಇತ್ಯಾದಿಶ್ರುತೇಃ । ಬಾಹ್ಯಕಾರಣಮನಪೇಕ್ಷ್ಯ ಊರ್ಣ ನಾಭ್ಯಾದಿದೃಷ್ಟಾಂತಪ್ರದರ್ಶನೇನಚೇತನಸ್ಯಾ ಭಿನ್ನನಿಮಿತ್ತೋ ಪಾದಾನಪ್ರದರ್ಶನಂಯುಕ್ತೇಃ,"ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂ ತಾನುಪರೋಧಾತ್" ಇತ್ಯಾದೇಶ್ಚೇತಿ ಭಾವಃ ॥

## ೧೦. ಓಂ ಈಶ್ವರವಲ್ಲಭಾಯೈ ನಮಃ ।

ಈಶ್ವರವಲ್ಲಭಾ । ಈಶ್ವರಃ ಕಾಮೇಶ್ವರಃ ವಲ್ಲಭಃ ಪತಿಃ ಯಸ್ಯಾಃ ಸಾ ತಥಾ । ಈಶ್ವರಾಣಾಂ ಬ್ರಹ್ಮವಿಷ್ಣುರುದ್ರಾ ದೀನಾಂ ತತ್ತನ್ನಿಷ್ಠಮಹಿಮೋತ್ಕರ್ಷರೂಪೇಣ ಪ್ರೀತ್ಯತಿಶಯ ವಿಷಯತ್ವೇನ ಅಭ್ಯರ್ಹಿತೇತ್ಯರ್ಥೋ ವಾ ।

---

ಬ್ರಹ್ಮಸೂತ್ರೋಕ್ತ ನ್ಯಾಯಗಳಿಂದಲೂ, ಯಥೋರ್ಣನಾಭಿಃ ಮುಂತಾದ ಶ್ರುತಿಗಳಿಂದಲೂ ಚೇತನವಸ್ತುವು ಜೇಡರಹುಳುವಿನ ಬಲೆಗೆ ಆ ಹುಳುವು ನಿಮಿತ್ತ ಮತ್ತು ಉಪಾದಾನಕಾರಣವಾದಂತೆ ಪ್ರಪಂಚಕ್ಕೆ ಅಭಿನ್ನನಿಮಿತ್ತೋ ಪಾದಾನವೆಂದು ಸಿದ್ಧಿಸುವುದು. ಅದ್ದರಿಂದ ಬ್ರಹ್ಮಾಂಡಗಳನ್ನು ಸೃಷ್ಟಿಸಿರುವ ವಳು. ಈಕ್ಷಣೇನ ಸೃಷ್ಟಾಃ ಅಂಡಾನಾಂ ಕೋಟಯಃ ಯಯಾ ಸಾ ಎಂದು ವಿಗ್ರಹವು.

೧೦. ಕಾಮೇಶ್ವರನೇ ಪತಿಯಾಗಿ ಉಳ್ಳವಳು, ಅಥವಾ ಬ್ರಹ್ಮ-ವಿಷ್ಣು ರುದ್ರಮುಂತಾದ ಈಶ್ವರರೆಂದು ಕರೆಯಲ್ಪಡುವ ವ್ಯಕ್ತಿಗಳಿಗೆ ಅವರಲ್ಲಿರುವ ಮಹಿಮೋತ್ಕರ್ಷವನ್ನು ಕೊಟ್ಟು ಅವರ ಪ್ರೀತ್ಯಾದರಗಳಿಗೆ ಪಾತ್ರಳಾದುದರಿಂದ ಅತಿಪೂಜ್ಯಳಾದವಳು. ಈಶ್ವರಃ ವಲ್ಲಭಃ ಯಸ್ಯಾಃ ಸಾ ಅಥವಾ ಈಶ್ವರಾಣಾಂ ವಲ್ಲಭಾ ಎಂದು ವಿಗ್ರಹವು.

## ೧೧. ಓಂ ಈಡಿತಾಯೈ ನಮಃ ।

ಈಡಿತಾ । ಈಡ ಸ್ತುತಾವಿತಿ ಧಾತುಪಾಠಾತ್ ಸ್ತುತಿಭಿಃ ವಿಷಯೀಕೃತಾ, ವೇದಾಂತೈರಿತಿ ಶೇಷಃ । ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ಇತ್ಯಾದಿಶ್ರುತೇಃ ।

## ೧೨. ಓಂ ಈಶ್ವರಾರ್ಧಾಂಗಶರೀರಾಯೈ ನಮಃ ।

ಈಶ್ವರಾರ್ಧಾಂಗಶರೀರಾ । ಈಶ್ವರಸ್ಯ ಸಚ್ಚಿದಾನಂದಾತ್ಮಕಸ್ಯ ಶಿವಸ್ಯ ಅರ್ಧಂ ಚ ತತ್ ಅಂಗಂ ಚ ಅರ್ಧಾಂಗಂ ಆನಂದ ಸ್ವರೂಪತಾ ಶರೀರಂ ಶರೀರವತ್ ಸ್ವರೂಪಲಕ್ಷಣಂ ಯಸ್ಯಾಃ ಸಾ ತಥಾ । ಸಚ್ಚಿನ್ಮಯಃ ಶಿವಃ ಸಾಕ್ಷಾತ್ತಸ್ಯಾನಂದಮಯೀ ಶಿವಾ ಇತಿ ಸ್ಮೃತೇಃ । ಅಥವಾ ಈಶ್ವರಸ್ಯಾರ್ಧಾಂಗಂ ವಾಮಭಾಗಃ ಶರೀರಂ ಮೂರ್ತಿರ್ಯಸ್ಯಾಃ ಸಾ । ಅಥವಾ ಈಶ್ವರಸ್ಯ ಹಕಾರಸ್ಯ ಅರ್ಧಾಂಗಂ ಶಕ್ತಿಬೀಜಂ ಶರೀರಂ ಮಂತ್ರಾತ್ಮಿಕಾ ಮೂರ್ತಿಃ ಯಸ್ಯಾಃ ಸಾ ತಥಾ ।

---

೧೧. ವೇದಾಂತಗಳಿಂದ ಸ್ತುತಿಸಲ್ಪಟ್ಟವಳು. ಈಡ ಧಾತುವು ಸ್ತುತಿ ಎಂಬ ಅರ್ಥದಲ್ಲಿ ಧಾತುಪಾಠದಲ್ಲಿ ಪಠಿಸಲ್ಪಟ್ಟಿದೆ. "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ" ಮುಂತಾದ ವೇದಾಂತವಾಕ್ಯಗಳು ಪರದೇವತೆಯನ್ನು ಸ್ತುತಿ ಮಾಡುತ್ತಿವೆ.

೧೨. ಸಚ್ಚಿದಾನಂದಾತ್ಮಕನಾದ ಶಿವನಿಗೆ ಆನಂದ ಸ್ವರೂಪವು ಶರೀರದಂತೆ ಸ್ವರೂಪಲಕ್ಷಣವಾಗಿರುವುದು. ಆದ್ದರಿಂದ ಈಶ್ವರನಿಗೆ ಅರ್ಧಾಂಗವಾದ ಆನಂದವೆಂಬ ಸ್ವರೂಪಲಕ್ಷಣವುಳ್ಳವಳು. ಇದು "ಸಚ್ಚಿನ್ಮಯಃ ಶಿವಃ ಸಾಕ್ಷಾತ್ ತಸ್ಯಾನಂದಮಯೀ ಶಿವಾ" ಎಂಬ ಪ್ರಮಾಣದಲ್ಲಿ ಸ್ಫುಟವಾದುದು. ಅಥವಾ ಈಶ್ವರವಾಮಭಾಗವೆಂಬ ಅರ್ಧಾಂಗವು ಶರೀರವಾಗಿ ಉಳ್ಳವಳು. ಅಥವಾ ಹಕಾರ, ಅದಕ್ಕೆ ಅರ್ಧಾಂಗವಾಗಿ ಸೇರಿದ ಶಕ್ತಿಬೀಜ ಎಂಬ ಈ ವರ್ಣಮಯವಾದ ಮಂತ್ರವೆಂಬ ಮೂರ್ತಿಯುಳ್ಳವಳು. ಈಶ್ವರಸ್ಯ ಅರ್ಧಾಂಗಂ ಶರೀರಂ ಯಸ್ಯಾಃ ಎಂದು ವಿಗ್ರಹವು.

## ೧೩. ಓಂ ಈಶಾಧಿದೇವತಾಯೈ ನಮಃ ।

ಈಶಾಧಿದೇವತಾ । ಈಶಸ್ಯೇತ್ಯುಪಲಕ್ಷಣಂ ಜೀವಸ್ಯಾಪಿ, ಈಶಸ್ಯ ತತ್ಪದವಾಚ್ಯಾರ್ಥಸ್ಯ ಮಾಯೋಪಾಧಿಕಸ್ಯ ವಿಶಿಷ್ಟಸ್ಯ ಅಧಿ ಉಪರಿ ವಿಶೇಷಣದ್ವಯಸ್ಯ ಪರಿತ್ಯಾಗೇ ದೇವತಾ ದ್ಯೋತಮಾನಾ ಕೂಟಸ್ಥಚಿನ್ಮಾತ್ರಶೋಧಿತತತ್ತ್ವಂಪದಾರ್ಥರೂಪೇತ್ಯರ್ಥಃ । ಅಥವಾ ಈಶಃ ಕಾಮೇಶ್ವರಃ ಅಧಿದೇವತಾ ಪೂಜ್ಯಾ ಯಸ್ಯಾಃ ಸಾ ತಥಾ । ಪರಮಪತಿವ್ರತೇತ್ಯರ್ಥಃ ।

---

೧೩. ತತ್ಪದಕ್ಕೆ ವಾಚ್ಯಾರ್ಥವಾದ ಮಾಯೋಪಾಧಿಯಿಂದ ಕೂಡಿದ ಈಶ್ವರನ ಮತ್ತು ತ್ವಂ ಪದವಾಚ್ಯಾರ್ಥವಾದ ಅಂತಃಕರಣೋಪಾಧಿಯಿಂದ ಕೂಡಿದ ಜೀವನ ಮೇಲುಭಾಗದಲ್ಲಿ ವಿಶೇಷಣಾಂಶಗಳನ್ನು ತ್ಯಜಿಸಲಾಗಿ ಕೂಟಸ್ಥ ಚೈತನ್ಯಮಾತ್ರರೂಪದಿಂದ ಪ್ರಕಾಶಿಸುವವಳು. ಶೋಧಿತ ತತ್ ತ್ವಂಪದಾರ್ಥ ಸ್ವರೂಪಳು ಎಂದು ತಾತ್ಪರ್ಯವು. ಅಥವಾ ಕಾಮೇಶ್ವರನು ಪೂಜ್ಯ ದೇವತೆಯಾಗಿ ಉಳ್ಳವಳು, ಮಹಾಪತಿವ್ರತೆಯೆಂದು ತಾತ್ಪರ್ಯವು. ಈಶಸ್ಯ + ಅಧಿ + ದೀವ್ಯತೀತಿ, ಅಥವಾ ಈಶಃ + ಅಧಿ ದೇವತಾ ಯಸ್ಯಾಃ ಎಂದು ವಿಗ್ರಹವು.

## ೧೨

**ಈಶ್ವರಪ್ರೇರಣಕರೀ ಚೇಶತಾಂಡವಸಾಕ್ಷಿಣೀ ।**
**ಈಶ್ವರೋತ್ಸಂಗನಿಲಯಾ ಚೇತಿಬಾಧಾವಿನಾಶಿನೀ ॥**

### ೧೪. ಓಂ ಈಶ್ವರಪ್ರೇರಣಕರ್ಯೈ ನಮಃ ।

ಈಶ್ವರಪ್ರೇರಣಕರೀ । ಈಶ್ವರಸ್ಯ ಬಿಂಬಚೈತನ್ಯಸ್ಯ ಸ್ವರೂಪಾ ಸತೀ ಜಗತ್ಸರ್ಜನಾದಿಕಾರ್ಯಪ್ರೇರಯಿತ್ರೀ ಪ್ರೇರಣಕರೀ ಆಜ್ಞಾಪಿಕೇತ್ಯರ್ಥಃ । ಇಚ್ಛಾಜ್ಞಾನಕ್ರಿಯಾಶಕ್ತ್ಯಾವರಣವಿಕ್ಷೇಪಶಕ್ತಿಪ್ರತಿಫಲಿತಚಿತ್ಸ್ವರೂಪಾ ಭಾವಿಕಾರ್ಯಾನುಕೂಲ ಪ್ರಾರಬ್ಧಾಧ್ಯಕ್ಷಪರಮೇಶ್ವರೇಕ್ಷಣನಾಮಧೇಯಪ್ರಕಾಶಾತ್ಮಿಕಾ ಭವತೀತಿ ಭಾವಃ । ಈಶ್ವರಪ್ರೇರಣಂ ತದಾಜ್ಞಾನುಲ್ಲಂಘನೇನ ಕರೋತೀತಿ ವಾ । ತದೀಯಭಾರ್ಯಾತ್ವೇನ ನಿತರಾಂ ತದ್ವಶ್ಯೇತಿ ಯಾವತ್ ।

### ೧೫. ಓಂ ಈಶತಾಂಡವಸಾಕ್ಷಿಣ್ಯೈ ನಮಃ ।

ಈಶತಾಂಡವಸಾಕ್ಷಿಣೀ। ಈಶಸ್ಯ ತತ್ಪದವಾಚ್ಯಾರ್ಥಸ್ಯ ತಾಂಡವಂ ನರ್ತನವದಪ್ರಯತ್ನ ಸಂಪಾದ್ಯಂ ಲೀಲಾಮಾತ್ರ

---

೧೪. ಬಿಂಬಚೈತನ್ಯ ಸ್ವರೂಪನಾದ ಈಶ್ವರನನ್ನು ಜಗತ್ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಪ್ರೇರೇಪಿಸುವವಳು. ಹೇಗೆಂದರೆ ಇಚ್ಛಾ–ಜ್ಞಾನ–ಕ್ರಿಯಾ ಶಕ್ತಿಸ್ವರೂಪಳೂ ಆವರಣ–ವಿಕ್ಷೇಪ ಶಕ್ತಿಯಲ್ಲಿ ಪ್ರತಿಬಿಂಬಿಸಿದ ಚೈತನ್ಯರೂಪಳೂ ಆಗಿ ಭಾವಿವ್ಯಕ್ತಿಯ ಪ್ರಾರಬ್ಧವನ್ನು ಅರಿತ ಪರಮೇಶ್ವರನಿಗೆ ಈಕ್ಷಣವೆಂಬ ಪ್ರಕಾಶಸ್ವರೂಪಳಾಗುವಳು ಎಂದು ತಾತ್ಪರ್ಯವು. ಅಥವಾ ಈಶ್ವರನ ಭಾರ್ಯೆಯಾದ್ದರಿಂದ ಈಶ ರಾಜ್ಞೆಯನ್ನು ಉಲ್ಲಂಘಿಸದಂತೆ ನೆರವೇರಿಸುವವಳು, ಈಶ್ವರನಿಗೆ ವಶ್ಯಳಾದವಳು ಎಂದು ತಾತ್ಪರ್ಯವು. ಈಶ್ವರಸ್ಯ ಪ್ರೇರಣಂ ಕರೋತಿ ಎಂದು ವಿಗ್ರಹವು.

೧೫. ತತ್ಪದಕ್ಕೆ ವಾಚ್ಯಾರ್ಥಸ್ವರೂಪನಾದ ಈಶ್ವರನ ನರ್ತನದಂತೆ ಅನಾಯಾಸದಿಂದ ಆಚರಿಸುವ ಜಗತ್ಸೃಷ್ಟ್ಯಾದಿ ವ್ಯಾಪಾರವೆಂಬ ಲೀಲಾಮಾತ್ರ

ಮಿತ್ಯರ್ಥಃ। ಜಗತ್ಸರ್ಜನಾದಿರೂಪಾ ಕ್ರಿಯಾ ಚಲನರೂಪ ಕರ್ಮತ್ವಸಾಮಾನ್ಯಾತ್ ತಸ್ಯ ಸಾಕ್ಷಿಣೀ ಅಸಂಸರ್ಗ ಪ್ರಕಾಶ ರೂಪಿಣೀತ್ಯರ್ಥಃ। ಅಸಂಗೋ ನ ಹಿ ಸಜ್ಜತ ಇತಿ ಶ್ರುತೇಃ। ಅಥವಾ ಈಶತಾಂಡವಸ್ಯ ಪರಮೇಶ್ವರ ನೃತ್ಯನಾಟ್ಯಾಭಿವ್ಯಂಜಿತ ಚತುಃಷಷ್ಟಿಕಲೋಪದೇಶಸ್ಯ ಸಾಕ್ಷಿಣೀ। ತದುಕ್ತಂ- "ನರ್ತನಾದ್ಧಿ ಪರೇಶಸ್ಯ ಚತುಃಷಷ್ಟಿಕಲಾ ಜನಿಃ" ಇತಿ ಪ್ರದೋಷಸ್ತೋತ್ರೇ । ಈಶತಾಂಡವನರ್ತನವರ್ಣನ ಮತಿಸ್ಫುಟಮಿತಿ ನೇಹ ಲಿಖ್ಯತೇ।

## ೧೬. ಓಂ ಈಶ್ವರೋತ್ಸಂಗನಿಲಯಾಯೈ ನಮಃ ।

ಈಶ್ವರೋತ್ಸಂಗನಿಲಯಾ। ಈಶ್ವರಸ್ಯ ಸ್ವಭರ್ತುಃ ಉತ್ಸಂಗಃ ಊರೂ ತೌ ನಿಲಯಃ ಯಸ್ಯಾಃ ಸಾ ತಥಾ।

---

ವನ್ನು ಸಾಕ್ಷಿರೂಪದಿಂದ ಅನುಭವಿಸುತ್ತಿರುವವಳು. ನರ್ತನವು ಚಲನಗಳಿಂದ ಕೂಡಿದ್ದರಿಂದ ಚಲನಧರ್ಮದಿಂದ ಸೃಷ್ಟ್ಯಾದಿ ವ್ಯಾಪಾರವನ್ನು ಲಕ್ಷಣಾವೃತ್ತಿ ಯಿಂದ ಬೋಧಿಸುತ್ತಿದೆ. "ಅಸಂಗೋ ನ ಹಿ ಸಜ್ಜತೇ" ಎಂಬ ಶ್ರುತಿ ಯಿಂದ ಪರಬ್ರಹ್ಮವಸ್ತುವಿನಲ್ಲಿ ಅಸಂಸರ್ಗ ಪ್ರಕಾಶರೂಪವಾದ ಸಾಕ್ಷಿತ್ವವನ್ನು ಬೋಧಿಸುತ್ತಿದೆ. ಅಥವಾ ಈಶ್ವರನು ಆಚರಿಸುವ ನೃತ್ಯನಾಟ್ಯಾದಿ ಅಭಿವ್ಯಕ್ತಿ ಯಿಂದ ಚತುಃಷಷ್ಟಿಕಲೋಪದೇಶವನ್ನು ಸಾಕ್ಷಾತ್ಕರಿಸುತ್ತಿರುವವಳು. "ನರ್ತನಾದ್ಧಿ ಪರೇಶಸ್ಯ ಚತುಃಷಷ್ಟಿಕಲಾಜನಿಃ" ಎಂಬ ಪ್ರದೋಷಸ್ತೋತ್ರ ವಚನದಿಂದ ನರ್ತನದಿಂದ ಚತುಃಷಷ್ಟಿಕಲೆಗಳು ಅಭಿವ್ಯಕ್ತವಾಗಿ ಉಪದಿಷ್ಟ ವಾಗುವುವೆಂದು ಸ್ಪಷ್ಟವಾಗಿರುವುದು. ಈಶಸ್ಯ + ತಾಂಡವಂ, ತಸ್ಯ ಸಾಕ್ಷಿಣೀ ಎಂದು ವಿಗ್ರಹವು.

೧೬. ಪತಿಯಾದ ಈಶ್ವರನ ಉತ್ಸಂಗದಲ್ಲಿ ಕುಳಿತುಕೊಂಡವಳು. ಈಶ್ವರಸ್ಯ + ಉತ್ಸಂಗಃ ಸ ನಿಲಯಂ ಯಸ್ಯಾಃ ಸಾ– ಎಂದು ವಿಗ್ರಹವು..

## ೧೭. ಓಂ ಈತಿಬಾಧಾವಿನಾಶಿನ್ಯೈ ನಮಃ ।

**ಈತಿಬಾಧಾವಿನಾಶಿನೀ । ಈತಿಬಾಧಾ । ದೈವಾದ್ಯುಪದ್ರವಃ । ಕ್ಷುದ್ರಜಂತುಪೀಡಾ ವಾ । ತಾಂ ವಿನಾಶಯತೀತಿ ತಥಾ ।**

---

೧೭. ದೈವಾದ್ಯುಪದ್ರವ, ಕ್ಷುದ್ರ ಜಂತುಗಳಿಂದ ಸಂಭವಿಸುವ ಪೀಡಾ-ಮುಂತಾದ ಈತಿಬಾಧೆಗಳನ್ನು ನಾಶಪಡಿಸುವವಳು. ಈತೀನಾಂ + ಬಾಧಾ ತಾಂ ವಿನಾಶಯತೀತಿ ಎಂದು ವಿಗ್ರಹವು.

೧೩

ಈಹಾವಿರಹಿತಾ ಚೇಶಶಕ್ತಿರೀಷತ್‌ಸ್ಮಿತಾನನಾ ।
ಲಕಾರರೂಪಾ ಲಲಿತಾ ಲಕ್ಷ್ಮೀವಾಣೀನಿಷೇವಿತಾ ॥

೧೮. ಓಂ ಈಹಾವಿರಹಿತಾಯೈ ನಮಃ ।

ಈಹಾವಿರಹಿತಾ । ಅಪ್ರಾಪ್ತಪ್ರಾಪ್ತಿಂ ಪ್ರತಿ ಇಚ್ಛಾ ಈಹಾ । ತಯಾ ವಿರಹಿತಾ, ಆಪ್ತಕಾಮತ್ವಾತ್ತದ್ವಿರಹಿತೇತ್ಯರ್ಥಃ ।

೧೯ ಓಂ ಈಶಶಕ್ತ್ಯೈ ನಮಃ ।

ಈಶಶಕ್ತಿಃ । ಈಶಸ್ಯ ಶಕ್ತಿಃ ಸರ್ವಜ್ಞತ್ವಾದಿಸ್ವರೂಪಸಾಮರ್ಥ್ಯಂ ಯಸ್ಯಾಃ ಸಾ ತಥಾ । "ದೇವಾತ್ಮಶಕ್ತಿಂ" ಇತಿ ಶ್ರುತೇಃ ।

೨೦. ಓಂ ಈಷತ್ಸ್ಮಿತಾನನಾಯೈ ನಮಃ ।

ಈಷತ್ಸ್ಮಿತಾನನಾ । ಈಷತ್ಸ್ಮಿತಂ ಮಂದಹಾಸಃ ಯಸ್ಯ ತತ್ ತಥಾ । ತಾದೃಗಾನನಂ ಯಸ್ಯಾಃ ಸಾ ತಥಾ । ಪರ್ಯಾಪ್ತ

---

೧೮. ಆಪ್ತಕಾಮಳಾದುದರಿಂದ ಹೊಂದದಿರುವ ಒಂದು ವಸ್ತುವನ್ನು ಹೊಂದಬೇಕೆಂಬ ಕುತೂಹಲ ವಿಶೇಷದಿಂದ ರಹಿತಳಾದವಳು. ಈಹಯಾ+ ವಿರಹಿತಾ ಎಂದು ವಿಗ್ರಹವು.

೧೯. ಈಶ್ವರನ ಸರ್ವಜ್ಞತ್ವ ಮುಂತಾದ ಸರ್ವವಿಧ ಶಕ್ತಿಸ್ವರೂಪಳು. "ದೇವಾತ್ಮಶಕ್ತಿಂ" ಎಂಬ ಶ್ರುತಿಯು ಈಶ್ವರನ ಸರ್ವತೋಮುಖವಾದ ಶಕ್ತಿಯನ್ನು ಪ್ರತಿಪಾದಿಸುತ್ತಿದೆ. ಈಶಸ್ಯ ಶಕ್ತಿಃ ಎಂದು ವಿಗ್ರಹವು.

೨೦. ಮಂದಹಾಸದಿಂದ ಕೂಡಿದ ಮುಖದಿಂದ ಶೋಭಿತಳಾದವಳು. ಆಪ್ತಕಾಮಳಾದ್ದರಿಂದ ಸರ್ವಕಾಲದಲ್ಲಿಯೂ ಪ್ರಸನ್ನವಾದ ಮುಖದಿಂದ ರಾಜಿ

ಕಾಮುತ್ವೇನ ಸರ್ವದಾ ಪ್ರಸನ್ನಮುಖೀತ್ಯರ್ಥಃ। ದುಃಖಾ ಸ್ಪರ್ಶಿಪರಮಾನಂದರೂಪತಯಾ ವಾ ತಥಾ।

ಇತಿ ತ್ರಿಶತ್ಯಾಂ ವಿದ್ಯಾಯಾಂ ತೃತೀಯಾಕ್ಷರನಾಮವ್ಯಾಖ್ಯಾಯಾಂ ಈಕಾರವರ್ಣ ಪ್ರಕಾಶಃ ತೃತೀಯಃ।

೧. ಓಂ ಲಕಾರರೂಪಾಯೈ ನಮಃ।

ಲಕಾರರೂಪಾ। ರೂಪ್ಯತ ಇತಿ ರೂಪಂ ಮಂತ್ರಸ್ಯ ಚತುರ್ಥ ವರ್ಣತ್ವೇನ ಜ್ಞಾಪಕಂ ಯಸ್ಯಾಃ ಸಾ ತಥಾ।

೨. ಓಂ ಲಲಿತಾಯೈ ನಮಃ।

ಲಲಿತಾ। ಲಲಿತಂ ತ್ರಿಷು ಸುಂದರಂ ಇತಿ ವಚನಾತ್ ಅತ್ಯಂತ ಸೌಂದರ್ಯವತೀತ್ಯರ್ಥಃ। ಅನುಪಮಸೌಂದರ್ಯಾ ವಾ।

---

ಸುತ್ತಿರುವವಳು. ಅಥವಾ ದುಃಖ ಸಂಪರ್ಕವಿಲ್ಲದ ಪರಮಾನಂದ ಸ್ವರೂಪಳಾಗಿ ಪ್ರಸನ್ನಮುಖದಿಂದಿರುವವಳು. ಈಷತ್– ಸ್ಮಿತಂ, ಯಸ್ಯ ತತ್, ತಾದೃಕ್ + ಆನನಂ ಯಸ್ಯಾಃ ಎಂದು ವಿಗ್ರಹವು.

ಲಲಿತಾ ತ್ರಿಶತೀ ಭಾಷ್ಯವ್ಯಾಖ್ಯಾನದಲ್ಲಿ ತೃತೀಯ ಪ್ರಕಾಶವು ಸಮಾಪ್ತವು.

೧. ಮಂತ್ರವಲ್ಲಿ ನಾಲ್ಕನೆಯ ಅವಯವವಾದ ಲಕಾರವೆಂಬ ಬೋಧಕ ವಿಶೇಷಣವುಳ್ಳವಳು. ಲಕಾರಃ ರೂಪಂ ಯಸ್ಯಾಃ ಎಂದು ವಿಗ್ರಹವು.

೨. "ಲಲಿತಂ ತ್ರಿಷು ಸುಂದರಂ" ಎಂಬ ಕೋಶದಲ್ಲಿ ಲಲಿತ ಶಬ್ದಕ್ಕೆ ಸುಂದರವೆಂಬ ಅರ್ಥವನ್ನು ಸೂಚಿಸಿದೆ. ಅತಿಶಯವಾದ ಸೌಂದರ್ಯ ಅಥವಾ ನಿರುಪಮವಾದ ಸೌಂದರ್ಯವುಳ್ಳವಳು.

## ೩. ಓಂ ಲಕ್ಷ್ಮೀವಾಣೀನಿಷೇವಿತಾಯೈ ನಮಃ

ಲಕ್ಷ್ಮೀವಾಣೀನಿಷೇವಿತಾ । ಲಕ್ಷ್ಮೀ ರಮಾ ಸರ್ವೈಶ್ವರ್ಯ ಶಕ್ತಿಃ, ವಾಣೀ ಸರಸ್ವತೀ ಸರ್ವಜ್ಞಾನಶಕ್ತಿಃ, ತಾಭ್ಯಾಂ ನಿತರಾಂ ಅಕೃತ್ರಿಮಪ್ರೇಮ್ಣಾ ಅನನ್ಯಭೂತಾ ಸತೀ ಸೇವಿತಾ । ಸೇವಾ ನಾಮ ಉನ್ಮೀಲಿತಾಜ್ಞಾಪ್ರತೀಕ್ಷಾ । ತದ್ವತ್ತ್ವಾದಿತ್ಯರ್ಥಃ ।

---

೩. ಸರ್ವೈಶ್ವರ್ಯಾಭಿಮಾನಿ ಶಕ್ತಿಸ್ವರೂಪಳಾದ ಲಕ್ಷ್ಮೀದೇವಿಯಿಂದಲೂ ಸರ್ವಜ್ಞಾನಶಕ್ತಿಸ್ವರೂಪಳಾದ ವಾಣೀದೇವಿಯಿಂದಲೂ ಅಕೃತ್ರಿಮಪ್ರೇಮ ಪೂರ್ವಕವಾಗಿ ಅನನ್ಯಭಾವನೆಯಿಂದ ಸೇವಿಸಲ್ಪಟ್ಟವಳು. ನೇತ್ರದ ಸಂಜ್ಞೆಯಿಂದ ಕೊಡುವ ಆಜ್ಞೆಯನ್ನು ನಿರೀಕ್ಷಿಸುತ್ತಿರುವುದು ಸೇವೆಯು. ಲಕ್ಷ್ಮೀ-ವಾಣಿಯರಲ್ಲಿ ಅಂತಹ ಸೇವಾಧರ್ಮವು ಇರುವುದು. ಲಕ್ಷ್ಮೀಶ್ಚ + ವಾಣೀ ಚ ತಾಭ್ಯಾಂ ನಿಷೇವಿತಾ ಎಂದು ವಿಗ್ರಹವು.

೧೪

## ಲಾಕಿನೀ ಲಲನಾರೂಪಾ ಲಸದ್ದಾಡಿಮಪಾಟಲಾ ।
## ಲಲಂತಿಕಾಲಸತ್ಫಾಲಾ ಲಲಾಟನಯನಾರ್ಚಿತಾ ॥

### ೪. ಓಂ ಲಾಕಿನ್ಯೈ ನಮಃ ।

ಲಾಕಿನೀ । ಕಂ ಸುಖಂ, ಕಂ ಬ್ರಹ್ಮ ಇತಿ ಶ್ರುತೇಃ, ತನ್ನ ಭವತೀತ್ಯಕಂ ಬ್ರಹ್ಮಭಿನ್ನತಯಾ ಪ್ರತೀಯಮಾನಂ ದುಃಖಾತ್ಮಕಂ ಜಗತ್ ಅಕಂ ಲೀಯತ ಇತಿ ಲಂ ಉಪಲಕ್ಷಣ ಮುತ್ಪತ್ತ್ಯಾದೇಃ । ಲಮಕಂ ಅಸ್ಯಾ ಅಸ್ತೀತಿ ಲಾಕಿನೀ ಅನೃತ ಜಡದುಃಖ ರೂಪ ಜಗತ್ಕಾರಣ ತದ್ವ್ಯಾವೃತ್ತಸ್ವರೂಪ ಬ್ರಹ್ಮಭೂತಾ ಇತ್ಯರ್ಥಃ ।

### ೫. ಓಂ ಲಲನಾರೂಪಾಯೈ ನಮಃ ।

ಲಲನಾರೂಪಾ । ರೂಪ್ಯತೇ ಜ್ಞಾಪ್ಯತೇ ಅನೇನೇತಿ ರೂಪಂ ಜ್ಞಾಪಕಂ ತದ್ವ್ಯಾಪ್ಯಲಿಂಗಂ ಚಿಹ್ನಮಿತಿ ವಾ । ಲಲನಾನಾಂ ಸ್ತ್ರೀಣಾಂ ರೂಪಂ ವೇಷಃ ಆಭರಣಾದ್ಯಲಂಕಾರೋ ವಾ ಆಕೃ

---

೪. ಉತ್ಪತ್ತಿ–ನಾಶಗಳಿಂದ ಕೂಡಿರುವ, ಬ್ರಹ್ಮಭಿನ್ನವಾಗಿ ಭಾಸವಾಗುವ ದುಃಖರೂಪವಾದ ಮತ್ತು ಅನೃತ–ಜಡ ಸ್ವರೂಪವಾದ ಜಗತ್ತು ಉಳ್ಳವಳು. ಜಗತ್ತಿಗೆ ಕಾರಣಳಾಗಿರುವುದರಿಂದ ಜಗದ್ವ್ಯಾವೃತ್ತ ಬ್ರಹ್ಮಸ್ವರೂಪಳು ಎಂದು ತಾತ್ಪರ್ಯವು. "ಲ" ಶಬ್ದವು ಉತ್ಪತ್ತಿ–ಲಯಗಳಿಂದ ಕೂಡಿದ ಎಂಬ ವಿಶೇಷಣವನ್ನೂ "ಅಕ" ಶಬ್ದವು ದುಃಖರೂಪವಾದ ಜಗತ್ತನ್ನೂ, ಮತ್ತು ಪ್ರತ್ಯಯವು ವೈಶಿಷ್ಟ್ಯೇ ಸಂಬಂಧವನ್ನೂ ಬೋಧಿಸುತ್ತಿವೆ. ಲಂ ಚ + ತತ್ ಅಕಂ ಚ ಲಕಂ, ತದಸ್ಯಾ ಅಸ್ತೀತಿ ಎಂದು ವಿಗ್ರಹವು.

೫. ರೂಪವೆಂದರೆ ವಸ್ತು ಬೋಧಕವಾದ ವ್ಯಾಪ್ಯವಿಶೇಷಣ, ಅಥವಾ ಚಿಹ್ನವು, ಲಲನೆಯರ ವೇಷ, ಆಭರಣಾದ್ಯಲಂಕಾರ, ಆಕಾರ ಮುಂತಾದುವುಗಳುಳ್ಳವಳು. ಅಥವಾ ಲಲನೆಯರು ವಿಭೂತಿರೂಪರಾಗಿ ಉಳ್ಳವಳು. "ಲಿಂಗಾಂ

ತಿರ್ವಾ ಯಸ್ಯಾಃ ಸಾ ತಥಾ । ಲಲನಾಃ ಸ್ತ್ರಿಯಃ ರೂಪಾಣಿ ಭೂತಯಃ ಯಸ್ಯಾಃ ಸಾ ತಥಾ " ಲಿಂಗಾಂಕಿತಮಿದಂ ಪಶ್ಯ ಜಗದೇತದ್ಭಗಾಂಕಿತಮ್ " ಇತಿ ಪುರಾಣವಚನಾತ್.

೬. ಓಂ ಲಸದ್ದಾಡಿಮಪಾಟಲಾಯೈ ನಮಃ ।

ಲಸದ್ದಾಡಿಮಪಾಟಲಾ। ದಾಡಿಮಶಬ್ದೇನ ವಿಕಸಿತಂ ತತ್ಪುಷ್ಪಂ ಲಕ್ಷ್ಯತೇ, ಲಸತ್ ಸದ್ಯೋ ವಿಕಸನಪ್ರಕಾಶಂ ಚ ತತ್ ದಾಡಿಮಂ ಚ, ಇದಮುಪಲಕ್ಷಣಂ ಬಂಧೂಕಾದೀನಾಂ ತದ್ವತ್ಪಾಟಲಾ ಶ್ವೇತಮಿಶ್ರರಕ್ತವರ್ಣಪ್ರಧಾನಮೂರ್ತಿಮತೀ ತ್ಯರ್ಥಃ । " ಶ್ವೇತರಕ್ತಂ ತು ಪಾಟಲಂ " ಇತಿ ವಚನಾತ್ ।

೭. ಓಂ ಲಲಂತಿಕಾಲಸತ್ಫಾಲಾಯೈ ನಮಃ ।

ಲಲಂತಿಕಾಲಸತ್ಫಾಲಾ। ಲಲಂತಿಕಯಾ ಪರಿತಃ ಮುಕ್ತಾಫಲ ಖಚಿತನವರತ್ನಮಧ್ಯಯಾ ಲಲಾಟಮಧ್ಯದೇಶಭೂಷಯಾ

---

ಕಿತಮಿದಂ ಪಶ್ಯ ಜಗದೇತದ್ಭಗಾಂಕಿತಮ್ " ಎಂಬ ಪುರಾಣ ವಚನದಿಂದ ದೇವಿಗೆ ವಿಶೇಷಣ ಅಥವಾ ಚಿಹ್ನಗಳಿವೆ ಎಂಬುದು ತಿಳಿಯುವುದು. ಲಲನಾನಾಂ + ರೂಪಂ ಯಸ್ಯಾಃ ಸಾ, ಅಥವಾ ಲಲನಾಃ + ರೂಪಾಣಿ ಯಸ್ಯಾಃ ಎಂದು ವಿಗ್ರಹವು.

೬. ಹೊಸದಾಗಿ ಅರಳಿರುವ ದಾಳಿಂಬ, ದಾಸವಾಳ ಮುಂತಾದ ಪುಷ್ಪಗಳಂತೆ ಬಿಳಿಯ ವರ್ಣದಿಂದ ಮಿಶ್ರಿತವಾದ ಕೆಂಪುವರ್ಣವೆಂಬ ಪಾಟಲವರ್ಣಾತಿಶಯದಿಂದ ಕೂಡಿದ ಮೂರ್ತಿಯುಳ್ಳವಳು. ಪಾಟಲ ಶಬ್ದದ ಅರ್ಥವು ಶ್ವೇತರಕ್ತ ವೆಂಬುದಾಗಿ " ಶ್ವೇತರಕ್ತಂ ತು ಪಾಟಲಂ " ಎಂಬ ನಿಘಂಟುವಿನಲ್ಲಿ ಕಾಣುವುದು. ಲಸಚ್ಚ ತತ್ ದಾಡಿಮಂ ಚ, ತದ್ವತ್ ಪಾಟಲಾ ಎಂದು ವಿಗ್ರಹವು.

೭. ಸುತ್ತಲೂ ಮುತ್ತುಗಳನ್ನೂ ಮಧ್ಯದಲ್ಲಿ ನವರತ್ನಗಳನ್ನೂ ಇರಿಸಿರುವ ಹಣೆಯಲ್ಲಿ ಇಡಲು ಯೋಗ್ಯವಾದ ಲಲಂತಿಕಾ ಎಂಬ ಒಂದು ಪದಕವು ಆಭರಣ ವಿಶೇಷವು. ಅದರಿಂದಲೂ ಲಲಾಟಪಟ್ಟ ಮುಂತಾದ ಇತರಾಲಂಕಾರಗಳಿಂದಲೂ

ಇದಮುಪಲಕ್ಷಣಂ ಲಲಾಟಪಟ್ಟಾದೀನಾಮ್ । ಲಸತ್ ಫಾಲಂ ಯಸ್ಯಾಃ ಸಾ ತಥಾ ।

## ೮. ಓಂ ಲಲಾಟನಯನಾರ್ಚಿತಾಯೈ ನಮಃ ।

ಲಲಾಟನಯನಾರ್ಚಿತಾ। ಲಲಾಟೇ ನಯನಂ ಯೇಷಾಂ ತೇ । ಅತ್ರ ಲಲಾಟಶಬ್ದೇನ ಭ್ರೂಮಧ್ಯಂ ಲಕ್ಷ್ಯತೇ ನಯನಶಬ್ದೇನ ಜ್ಞಾನಮಪಿ । ತಥಾ ಚೋರ್ಧ್ವದೃಷ್ಟಿಭಿಃ ಖೇಚರೀ ಮುದ್ರಯಾ ವಿಲೀನಚಿತ್ತೈಃ ಅಸಿವರುಣಯೋರ್ಮಧ್ಯದೇಶಾಭಿಧಾನಾವಿಮುಕ್ತ ಕೃತಪರಮೇಶ್ವರಾರಾಧನಪರಪುರುಷಪ್ರಾಪ್ಯತ್ವಾಭಿಧಾಯಕಾತ್ರಿ ಪ್ರಶ್ನೋತ್ತರಜಾಬಾಲ ಶ್ರುತಿಗತ ಯಾಜ್ಞವಲ್ಕ್ಯೋತ್ತರ ವಾಕ್ಯ ನಿರ್ದಿಷ್ಟ ಭೂಮಿಕಾ ಜಯಸಿದ್ಧಿ ಮತ್ಪುರುಷೈಃ ಅರ್ಚಿತಾ ಸಾಕ್ಷಾತ್ಕೃತೇತ್ಯರ್ಥಃ । ಅಥವಾ ತೃತೀಯ ನೇತ್ರವತಾ ಶಿವೇನ ತತ್ಸ್ವರೂಪರುದ್ರೈರ್ವಾ ಪೂಜಿತೇತ್ಯರ್ಥಃ ।

---

ಪ್ರಕಾಶಿಸುವ ಹಣೆಯುಳ್ಳವಳು. ಲಲಂತಿಕಯಾ + ಲಸತ್ + ಫಾಲಂ ಯಸ್ಯಾಃ ಸಾ ಎಂದು ವಿಗ್ರಹವು.

೮. ಲಲಾಟ ನಯನ ಎಂಬ ಉತ್ತಮಭೂಮಿಕಾರೂಢರಾದ ಯೋಗಿಗಳಿಂದ ಸಾಕ್ಷಾತ್ಕರಿಸಲ್ಪಟ್ಟವಳು. ಲಲಾಟವೆಂದರೆ ಭ್ರೂಮಧ್ಯವು. ನಯನ ಶಬ್ದಕ್ಕೆ ಲಕ್ಷಣಾ ವೃತ್ತಿಯಿಂದ ಜ್ಞಾನವೆಂದು ಅರ್ಥವು. ಊರ್ಧ್ವದೃಷ್ಟಿಗಳೂ ಖೇಚರೀ ಮುದ್ರೆಯಿಂದ ಲಯಹೊಂದಿದ ಚಿತ್ತವುಳ್ಳವರೂ ಜಾಬಾಲಶ್ರುತಿಯಲ್ಲಿ ಅತ್ರಿಮುನಿಯ ಪ್ರಶ್ನೆ, ಯಾಜ್ಞವಲ್ಕ್ಯಮುನಿಯ ಉತ್ತರಗಳೆಂಬ ಸಂವಾದ ರೂಪವಾದ ಪ್ರಸಂಗದಲ್ಲಿ ತೋರಿಸಿರುವ, ಅವಿಮುಕ್ತವೆಂದು ಸಂಕೇತಿತವಾದ ಅಸಿವರುಣ ಮಧ್ಯಭಾಗವಾದ ಭ್ರೂಮಧ್ಯದಲ್ಲಿ ಪರಮೇಶ್ವರಾರಾಧನದಿಂದ ವಿಶಿಷ್ಟ ಭೂಮಿಕಾ ಜಯವುಳ್ಳವರೂ, ಆದ ಪುರುಷರು ಲಲಾಟನಯನರೆಂಬ ಮಹಾ ಯೋಗಿಗಳು. ಅಥವಾ ಲಲಾಟದಲ್ಲಿ ತೃತೀಯನೇತ್ರದಿಂದ ಕೂಡಿದ ಶಿವನಿಂದ ಅಥವಾ ಶಿವರೂಪರಾಗಿರುವ ರುದ್ರರಿಂದ ಪೂಜಿಸಲ್ಪಟ್ಟವಳು. ಲಲಾಟೇ ನಯನಂ ಯೇಷಾಂ ತೈಃ ಅರ್ಚಿತಾ, ಲಲಾಟೇ ನಯನಂ ಯಸ್ಯ ತೇನ ಅರ್ಚಿತಾ ಎಂದು ವಿಗ್ರಹವು.

೧೫

**ಲಕ್ಷಣೋಜ್ಜ್ವಲದಿವ್ಯಾಂಗೀ ಲಕ್ಷಕೋಟ್ಯಂಡನಾಯಿಕಾ।**
**ಲಕ್ಷ್ಯಾರ್ಥಾ ಲಕ್ಷಣಾಗಮ್ಯಾ ಲಬ್ಧಕಾಮಾ ಲತಾತನುಃ॥**

**೯. ಓಂ ಲಕ್ಷಣೋಜ್ಜ್ವಲದಿವ್ಯಾಂಗ್ಯೈ ನಮಃ।**

ಲಕ್ಷಣೋಜ್ಜ್ವಲದಿವ್ಯಾಂಗೀ। ದೀವ್ಯತೇ ಪ್ರಕಾಶತ ಇತಿ ದಿವ್ಯಂ ಲಕ್ಷಣೈಃ ಸ್ವರೂಪತಟಸ್ಥನಾಮಕೈಃ ಉಜ್ಜ್ವಲಂ ಶೋಭಿತಂ ಶುದ್ಧಂ ಅಂಗಂ ಸ್ವರೂಪಂ ವಿಗ್ರಹೋ ವಾ। ಘೃತಕಾಠಿನ್ಯ ನ್ಯಾಯೇನ "ತದಾತ್ಮಾನಂ ಸ್ವಯಮಕುರುತ"ಇತಿ ಶ್ರುತೇಃ ಸಚ್ಚಿದಾನಂದಘನೀಭೂತಜೀವಾತ್ಮಕೋ ವಿಗ್ರಹೋ ಯ ಸ್ಯಾಃ ಸಾ ತಥಾ। ಅಥವಾ ಸಾಮುದ್ರಿಕಶಾಸ್ತ್ರೋಕ್ತದಿವ್ಯಲಕ್ಷ ಣೈ ರುಜ್ಜ್ವಲಾನಿ ಸಂಪೂರ್ಣಾನಿ ದಿವ್ಯಾನಿ ಯಾನಿ ಅಂಗಾನ್ಯವ ಯವಾಃ ಶಿರಃಪಾಣ್ಯಾದಯಃ ಅಸ್ಯಾಃ ಸಂತೀತಿ ವಾ ತಥಾ।

---

೯. ಸ್ವರೂಪ ಮತ್ತು ತಟಸ್ಥ ಲಕ್ಷಣಗಳಿಂದ ಶುದ್ಧವಾಗಿ ಪ್ರಕಾಶಿಸುವ ಸ್ವರೂಪ ಅಥವಾ ಮೂರ್ತಿಯುಳ್ಳವಳು. "ತದಾತ್ಮಾನಂ ಸ್ವಯಮಕುರುತ" ಎಂಬ ಶ್ರುತಿಯು ಸಚ್ಚಿದಾನಂದ ಘನವಾದ ಜೀವರೂಪವಾದ ವಿಗ್ರಹ ಪ್ರಾಪ್ತಿಯನ್ನು ಘೃತಕಾಠಿನ್ಯನ್ಯಾಯದಿಂದ ಬ್ರಹ್ಮವಸ್ತುವಿಗೆ ಬೋಧಿಸುತ್ತಿದೆ. ಘೃತಸ್ವರೂಪಕ್ಕೆ ಚ್ಯುತಿಯಿಲ್ಲದೆ ಕಾಠಿನ್ಯ–ದ್ರವತ್ವಗಳೆಂಬ ಪರಿಣಾಮ ಭೇದಗಳು ಉಂಟಾಗುವಂತೆ ಜೀವಭಾವದಲ್ಲಿಯೂ ಸ್ವಸ್ವರೂಪ ಚ್ಯುತಿಯಿಲ್ಲವೆಂಬ ಅಂಶಕ್ಕೆ ಘೃತಕಾಠಿನ್ಯ ನ್ಯಾಯವು ಪೋಷಕವು. ಅಥವಾ ಸಾಮುದ್ರಿಕ ಶಾಸ್ತ್ರಗಳಲ್ಲಿ ಉಪದೇಶಿಸಿರುವ ಸಮಸ್ತ ದಿವ್ಯ ಲಕ್ಷಣಗಳಿಂದ ಕೂಡಿದ ಶಿರಃ–ಪಾಣ್ಯಾದಿ ಸಕಲಾವಯವಗಳುಳ್ಳವಳು. ಲಕ್ಷಣೈರುಜ್ಜ್ವಲಂ ದಿವ್ಯಂ ಅಂಗಂ ಯಸ್ಯಾಃ, ಲಕ್ಷಣೈರುಜ್ಜ್ವಲಾನಿ ದಿವ್ಯಾನ್ಯಂಗಾನಿ ಯಸ್ಯಾಃ ಎಂದು ವಿಗ್ರಹವು.

## ೧೦. ಓಂ ಲಕ್ಷಕೋಟ್ಯಂಡನಾಯಿಕಾಯೈ ನಮಃ ।

ಲಕ್ಷಕೋಟ್ಯಂಡನಾಯಿಕಾ। ಲಕ್ಷಾಣಿ ಚ ಕೋಟ್ಯಶ್ಚ ಅಸಂಖ್ಯಾತಾಪರಿಮಿತಾನೀತ್ಯರ್ಥಃ। ಸಂಸಾರಸ್ಯಾನಾದಿತ್ವೇನ ಭೂತಭವಿಷ್ಯದಾದಿಭೇದೇನ ಬಹುಸಂಖ್ಯಾವತ್ತ್ವಮಂಡಾನಾಮ್, ತಾನಿ ಚ ತಾನ್ಯಂಡಾನಿ ಚ ಹಿರಣ್ಯಗರ್ಭವಿರಾಡ್ರೂಪಾಣಿ ಸಮಷ್ಟಿವ್ಯಷ್ಟ್ಯಾತ್ಮನಾ ವಿಶ್ವತೈಜಸೋಪಾಧಿಭೂತಾನಿ, ತೇಷಾಂ ಅಧಿಷ್ಠಾನಬಿಂಬಚೈತನ್ಯಾತ್ಮನಾ ನಯತಿ ಸ್ವಸತ್ತಾಮಾಪಾದಯತೀತಿ ನಾಯಿಕಾ ।

## ೧೧. ಓಂ ಲಕ್ಷ್ಯಾರ್ಥಾಯೈ ನಮಃ ।

ಲಕ್ಷ್ಯಾರ್ಥಾ। ಲಕ್ಷಣಯಾ ಶೋಧನಯಾ ಜಹದಜಹಲ್ಲಕ್ಷಣಯಾ ವಾ ಪ್ರತಿಪಾದ್ಯತೇ ವೇದಾಂತಮಹಾವಾಕ್ಯಾನಾಂ

---

೧೦. ಅನಾದಿಯಾದ ಸಂಸಾರದಲ್ಲಿ ಭೂತ-ಭವಿಷ್ಯತ್-ವರ್ತಮಾನಗಳೆಂಬ ಗಣನೆಯಿಂದ ಲಕ್ಷ-ಕೋಟಿ ಎಂದು ಅಸಂಖ್ಯಾತವಾಗಿ ತೋರುವ ಸಮಷ್ಟಿ ವ್ಯಷ್ಟಿರೂಪದಿಂದ ವಿಶ್ವ-ತೈಜಸೋಪಾಧಿರೂಪವಾದ ಹಿರಣ್ಯಗರ್ಭ ವಿರಾಟ್, ಎಂಬ ಬ್ರಹ್ಮಾಂಡಗಳಿಗೆ ಅಧಿಷ್ಠಾನ ಚೈತನ್ಯರೂಪದಿಂದ ಸತ್ತೆಯನ್ನು ಉಂಟುಮಾಡುವವಳು. ಲಕ್ಷಾಣಿಚ + ಕೋಟ್ಯಶ್ಚ, ತಾಃ ಚ ತಾನ್ಯಂಡಾನಿ ಚ ತೇಷಾಂ + ನಾಯಿಕಾ ಎಂದು ವಿಗ್ರಹವು.

೧೧. ಶೋಧನಪೂರ್ವಕವಾಗಿ, ಅಥವಾ ಜಹದಜಹಲ್ಲಕ್ಷಣಾಪೂರ್ವಕವಾಗಿ ವೇದಾಂತವಾಕ್ಯಗಳಿಂದ ಪ್ರತಿಪಾದಿಸಲ್ಪಡುವ ಅರ್ಥಸ್ವರೂಪವುಳ್ಳವಳು. ಅಥವಾ ಯೋಗಶಾಸ್ತ್ರಸಂಕೇತಿತವಾಗಿಯೂ ಗುರುವನ್ನು ಉದ್ದೇಶಿಸಿ ಪ್ರಾರ್ಥಿಸಲ್ಪಡುವುದಾಗಿಯೂ ಇರುವ ಚಿತ್ಸ್ವರೂಪಾನಂದವೆಂಬ ಲಕ್ಷ್ಯಾರ್ಥಸ್ವರೂಪಳಾದವಳು. ಯೋಗಶಾಸ್ತ್ರದಲ್ಲಿ ಬಾಹ್ಯ-ಅಂತರ-ಊರ್ಧ್ವ-ಅಧೋಭಾಗ, ಎಂಬ

ಯೋಽರ್ಥಃ ತತ್ಸ್ವರೂಪಾ । ಅಥವಾ ಯೋಗಶಾಸ್ತ್ರಪ್ರಸಿದ್ಧ ಬಹಿರಂತರೂರ್ಧ್ವಾರ್ಧಃ ಪ್ರದೇಶವಿಶೇಷರೂಪ ಭೂಮಿಕಾಸು ಸ್ವಸ್ವಮನೋವಾಂಛಾವಿಷಯವಿಶೇಷಣತ್ವೇನ ನಿರ್ಗುಣತ್ವೇನ ವಾ ಮನೋವಿಲಯರೂಪ ಹಠ-ರಾಜಯೋಗಾದಿ ಸಾಧನಪರಿಪಾಕವಶೇನ ಸಾಕ್ಷಾತ್ಕೃತಂ ಚೈತನ್ಯಂ ಲಕ್ಷ್ಯ ಇತ್ಯುಚ್ಯತೇ । ಅರ್ಥ್ಯತೇ ಯಾಚ್ಯತೇ ಗುರುಂ ಪ್ರತಿ ಇತಿ ಅರ್ಥಃ, ಲಕ್ಷ್ಯೋ ಯೋಽರ್ಥಃ ಚಿತ್ಸ್ವರೂಪಪರಮಾನಂದರೂಪಃ, ಸೋಽಪಿ ಸ್ಯೈವೇತಿ ತಥಾ । "ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ" ಇತಿ ಶ್ರುತೇಃ ।

## ೧೨. ಓಂ ಲಕ್ಷಣಾಗಮ್ಯಾಯೈ ನಮಃ ।

ಲಕ್ಷಣಾಗಮ್ಯಾ । ಲಕ್ಷಣಾ ನಾಮ ಶಕ್ಯಾರ್ಥೇ ವಾಚಕಸ್ಯ ಪದಸ್ಯ ಅನ್ವಯಾದ್ಯನುಪಪತ್ತ್ಯಾ ತತ್ಸಂಬಂಧಿಪದಾರ್ಥಾಂತರ ಜ್ಞಾನಹೇತುಃ ಶಕ್ಯಸಂಬಂಧಾದಿಪದಜನ್ಯಪದಾರ್ಥಾಂತರ

---

ಭೂಮಿಕಾ ವಿಶೇಷಗಳಲ್ಲಿ ಯೋಗಿಗಳ ಮನೋವಾಂಛಾವಿಷಯವಾದ ವಿಶೇಷಣಗಳಿಂದ ಕೂಡಿ ಅಥವಾ ನಿರ್ಗುಣವಾಗಿ ಹಠಯೋಗ ರಾಜಯೋಗಾದಿ ಸಾಧನ ಪರಿಪಾಕದಿಂದ ಚಿತ್ತವಿಲಯ ಪೂರ್ವಕವಾಗಿ ಸಾಕ್ಷಾತ್ಕರಿಸಲ್ಪಟ್ಟ ಚೈತನ್ಯವು ಲಕ್ಷ್ಯಾರ್ಥವೆಂದು ಸಂಕೇತದಿಂದ ಕರೆಯಲ್ಪಟ್ಟಿದೆ. ಅದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಊರ್ಧ್ವಾಧೋಭಾಗ ಮುಂತಾದ ಸರ್ವಭೂಮಿಕೆಗಳಲ್ಲಿಯೂ ಪರಬ್ರಹ್ಮವಸ್ತುವು ಇದೆ ಯೆಂಬುದು "ಬ್ರಹ್ಮೈವೇದಮಮೃತಂ ಪುರಸ್ತಾತ್ ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ" ಎಂಬ ಶ್ರುತಿಪ್ರಮಾಣ ಸಿದ್ಧವಾದುದು. ಲಕ್ಷ್ಯಃ + ಅರ್ಥಃ ಯಸ್ಯಾಃ ಎಂದು ವಿಗ್ರಹವು.

೧೨. ಲಕ್ಷಣಾ ಎಂಬ ಶಬ್ದವೃತ್ತಿಯಿಂದ ಬೋಧಿಸಲು ಆಗದಿರುವವಳು. ಲಕ್ಷಣಾ ಎಂಬುದು ಶಬ್ದವು ಅರ್ಥವನ್ನು ಬೋಧಿಸಲು ಅನುಕೂಲವಾಗಿರುವ ಒಂದು ಶಬ್ದವೃತ್ತಿಯು. ವಾಚಕ ಶಬ್ದದ ಅರ್ಥಕ್ಕೆ ಅನುಪಪತ್ತಿಯಿಂದ

**ಜ್ಞಾನಹೇತುಃ ಶಬ್ದವೃತ್ತಿರಿತ್ಯುಚ್ಯತೇ । ತಸ್ಯಾ ವಾಚ್ಯವಾಚಕ ತತ್ಸಂಬಂಧಾದಿ-ಭೇದಜ್ಞಾನಪೂರ್ವಿಕಾಯಾಃ ಪರಿಚ್ಛಿನ್ನ-ಸಾವಯವ-ಪದಾರ್ಥಸಂಬಂಧ-ಜ್ಞಾನಹೇತೋಃ ಕೇವಲ ಚಿನ್ಮಾತ್ರೇ ನಿರುಪಾಧಿಕೇ ವಸ್ತುನಿ ಷಷ್ಠೀ-ಜಾತ್ಯಾದೀನಾಂ ಲಕ್ಷ್ಯತಾವಚ್ಛೇದಕಧರ್ಮಾಣಾಮಭಾವೇ ಪ್ರವೃತ್ತ್ಯಯೋಗಾತ್ ತಯಾ ಅಗಮ್ಯಾ, ಗಂತುಂ ಜ್ಞಾತುಂ ಯೋಗ್ಯಂ ಗಮ್ಯಂ ತಸ್ಯ ಭವತೀತ್ಯಗಮ್ಯಾ। ವೇದಾಂತಮತೇ ಜಹದಜಹಲ್ಲಕ್ಷಣಯಾ ವಿಶೇಷಣಮಾತ್ರಪರಿತ್ಯಾಗಸ್ಯ ಅನ್ಯೋನ್ಯ-ತಾದಾತ್ಮ್ಯಾನುಪಪತ್ತ್ಯಾ ಬೋಧಿತತ್ವಾತ್ತದರ್ಥಂ ಸಾ ಅವಶ್ಯಮಂಗೀಕರ್ತವ್ಯಾ । ವಿಶೇಷ್ಯಸ್ಯ ಜ್ಞಾನಸ್ವರೂಪತ್ವೇನ ನಿತ್ಯತಯಾ ಲಕ್ಷಣಾಜನ್ಯತ್ವಾತ್ ತದರ್ಥಂ ಸಾ ನ ಅಪೇಕ್ಷ್ಯತ ಇತಿ ಭಾವಃ। ತಥಾ ಚ ಪ್ರಕೃತಾಯಾ ದೇವತಾಯಾಃ ಶುದ್ಧಚೈತನ್ಯಮಾತ್ರ**

---

ಬಾಧವು ಬರುವಾಗ ಆ ವಾಚ್ಯಾರ್ಥವನ್ನು ಬಿಟ್ಟು ಅದಕ್ಕೆ ಸಂಬಂಧಿಸಿದ ಮತ್ತೊಂದು ಪದಾರ್ಥ ಸ್ಮೃತಿಯನ್ನು ಶಬ್ದವು ಉಂಟುಮಾಡುವುದು. ಗಂಗೆಯಲ್ಲಿ ಹಳ್ಳಿಯು ಇರುವುದು ಎಂದು ಹೇಳಿದರೆ ಪ್ರವಾಹದಲ್ಲಿ ಹಳ್ಳಿಯು ನಿಲ್ಲಲಾರದಾದ್ದರಿಂದ ಗಂಗೆ ಎಂಬ ಶಬ್ದದಿಂದ ಅದರ ತೀರವನ್ನು ಗ್ರಹಿಸುವುದಕ್ಕೆ ಈ ಲಕ್ಷಣಾವೃತ್ತಿಯು ಸಹಕಾರಿಯಾಗುವುದು. ಇದನ್ನು ಶಾಸ್ತ್ರಕಾರರು ಉದಾಹರಣೆಯನ್ನಾಗಿ ವಿವರಿಸುತ್ತಾರೆ. ಆದರೆ ಅಂತಹ ಲಕ್ಷಣಾವೃತ್ತಿಯು ವಾಚಕಶಬ್ದ, ವಾಚ್ಯಾರ್ಥ, ಅನುಪಪತ್ತಿ, ವಾಚ್ಯಾರ್ಥಸಂಬಂಧ, ಇವುಗಳ ಭೇದಜ್ಞಾನ ಪೂರ್ವಕವಾಗಿ ಪರಿಚ್ಛಿನ್ನ-ಸಾವಯವ-ವಸ್ತುವನ್ನು ಬೋಧಿಸುವ ಸ್ವಭಾವವನ್ನು ಹೊಂದಿರುವುದು. ಆದ್ದರಿಂದ ನಿರುಪಾಧಿಕವೂ ಜಾತಿ-ಗುಣ-ಮುಂತಾದ ಲಕ್ಷ್ಯತಾವಚ್ಛೇದಕ ಧರ್ಮಗಳಿಂದ ಶೂನ್ಯವೂ ಆದ ಬ್ರಹ್ಮವಸ್ತುವನ್ನು ಬೋಧಿಸಲಾರದು. ಆದ್ದರಿಂದ ಲಕ್ಷಣಾ ವೃತ್ತಿಯಿಂದ ಜ್ಞೇಯಳಾಗುವುದಿಲ್ಲ. ವೇದಾಂತಮತದಲ್ಲಿ ವಿಶಿಷ್ಟವಸ್ತುಗಳಿಗೆ ಐಕ್ಯವು ಬಾಧಿತವಾದ್ದರಿಂದ ವಿಶೇಷಣಾಂಶ ಪರಿತ್ಯಾಗಕ್ಕೆ ಜಹದಜಹಲ್ಲಕ್ಷಣಾ ವೃತ್ತಿಯನ್ನು ಅಂಗೀಕರಿಸಬೇಕಾಗುವುದು. ಆದರೆ ವಿಶೇಷ್ಯಾಂಶವು ಪ್ರಕೃತದಲ್ಲಿ ಜ್ಞಾನಸ್ವರೂಪವಾಗಿ ನಿತ್ಯವಾಗಿರುವುದರಿಂದ ವೃತ್ತಿಜ್ಞಾನ ಜನ್ಯವಲ್ಲದ್ದರಿಂದ

ಸ್ವರೂಪತಯಾ ಸ್ವಯಂ ಪ್ರಕಾಶತ್ವೇನ ಲಕ್ಷಣಾಗೋಚರತ್ವಾತ್ ಲಕ್ಷಣಾಗಮ್ಯೇತಿ ನಾಮ ಯುಕ್ತಮಿತಿ ಭಾವಃ।

೧೩. ಓಂ ಲಬ್ಧಕಾಮಾಯೈ ನಮಃ।

ಲಬ್ಧಕಾಮಾ। ಲಬ್ಧಾಃ ಕಾಮ್ಯಂತ ಇತಿ ಕಾಮಾಃ ಐಹಿಕಾಮುಷ್ಮಿಕಸುಖಸಾಧನಾನಿ, ಲಕ್ಷಣಯಾ ತತ್ತಜ್ಜನ್ಯಸುಖಾನಿ ವಾ ತಥಾಭೂತಾಃ ಕಾಮಾಃ ಯಯಾ ಸಾ ತಥಾ ಪರ್ಯಾಪ್ತಕಾಮೇತ್ಯರ್ಥಃ। "ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ", ಇತಿ ಶ್ರುತೇಃ॥

೧೪. ಓಂ ಲತಾತನವೇ ನಮಃ।

ಲತಾತನುಃ। ಲತಾ ಇವ ಲತಾಃ ಕಲ್ಪಾದಿವಲ್ಲ್ಯಃ ಸಕಲ ಪುರುಷಾರ್ಥಪ್ರದತ್ವೇನ ಜಗತಿ ಪ್ರಸಿದ್ಧಾಃ; ತಾ ಇವ ಸುಕುಮಾರತ್ವಾದ್ಯಾಶ್ರಯಾ ತನುಃ ಮೂರ್ತಿಃ ಯಸ್ಯಾಃ ಸಾ ತಥಾ।

---

ಲಕ್ಷಣಾವೃತ್ತಿಯನ್ನು ಅಪೇಕ್ಷಿಸಬೇಕಾಗಿಲ್ಲ. ಆದ್ದರಿಂದ ಪ್ರಕೃತಳಾದ ಪರದೇವತೆಯು ಶುದ್ಧ ಚೈತನ್ಯರೂಪಳಾಗಿ ಸ್ವಪ್ರಕಾಶರೂಪಳಾದುದರಿಂದ ಲಕ್ಷಣಾ ವೃತ್ತಿಗೆ ಅಗೋಚರಳು ಎಂಬುದು ಯುಕ್ತವಾಗುವುದು. ಲಕ್ಷಣಯಾ ಗಂತುಂ ಯೋಗ್ಯಾ ನ ಭವತಿ ಎಂದು ವಿಗ್ರಹವು.

೧೩. ಹೊಂದಿರುವ ಐಹಿಕಾಮುಷ್ಮಿಕ ಸುಖ ಸಾಧನ ಅಥವಾ ಸುಖಗಳುಳ್ಳವಳು. ಪರ್ಯಾಪ್ತ ಕಾಮಳಾದವಳೆಂದು ತಾತ್ಪರ್ಯವು. ಸರ್ವಕಾಮಗಳು ಪರ್ಯಾಪ್ತಕಾಮನಲ್ಲಿ ಲಯವಾಗುತ್ತವೆಂಬುದನ್ನು "ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ" ಎಂಬ ಶ್ರುತಿಯು ಬೋಧಿಸುತ್ತದೆ. ಲಬ್ಧಾಃ ಕಾಮಾಃ ಯಯಾ ಸಾ ಎಂದು ವಿಗ್ರಹವು.

೧೪. ಸಕಲಪುರುಷಾರ್ಥಗಳನ್ನು ಅನುಗ್ರಹಿಸುವ ಕಲ್ಪಲತಾದಿಗಳಂತೆ ಸುಕುಮಾರತ್ವಾದಿ ಗುಣ ಪೂರ್ಣವಾದ ಮೂರ್ತಿಯುಳ್ಳವಳು. ಲತಾ ಇವ + ತನುಃ ಯಸ್ಯಾಃ ಸಾ ಎಂದು ವಿಗ್ರಹವು.

೧೬

ಲಲಾಮರಾಜದಲಿಕಾ ಲಂಬಿಮುಕ್ತಾಲತಾಂಚಿತಾ ।
ಲಂಬೋದರಪ್ರಸೂರ್ಲಭ್ಯಾ ಲಜ್ಜಾಢ್ಯಾ ಲಯವರ್ಜಿತಾ ॥

೧೫. ಓಂ ಲಲಾಮರಾಜದಲಿಕಾಯೈ ನಮಃ ।

ಲಲಾಮರಾಜದಲಿಕಾ । ಲಲಾಮ್ನಾ ಕಸ್ತೂರೀ ತಿಲಕೇನ ಕಸ್ತೂರೀಪತ್ರೇಣ ವಾ ರಾಜತ್ ವಿಭ್ರಾಜತ್ ಪರಮಶೋಭಿ ಅಲಿಕಂ ಲಲಾಟಂ ಯಸ್ಯಾಃ ಸಾ ತಥಾ ।

೧೬. ಓಂ ಲಂಬಿಮುಕ್ತಾಲತಾಂಚಿತಾಯೈ ನಮಃ ।

ಲಂಬಿಮುಕ್ತಾಲತಾಂಚಿತಾ । ಲಂಬಿನ್ಯಃ ಲಂಬಮಾನಾಃ ಅಧಃ ಪ್ರಸೃತಾ ಮುಕ್ತಾಲತಾಃ ಹಾರಾ ಮುಕ್ತಾಫಲಾನಿ ವಾ ಯಸ್ಯಾಃ ಸಾ ತಥಾ। ನವರತ್ನಖಚಿತಸುವರ್ಣಮುಕ್ತಾಗುಚ್ಛೈಃ ಸರ್ವಾಂಗೇಷು ಪ್ರಲಂಬಮಾನೈಃ ಲಲಾಟಪರ್ಯಂತಂ ಲಂಬಮಾನ ಕಿರೀಟ ಪ್ರಥಮಭಾಗ ಲಲಾಟ ಪಟ್ಟನಾ ಸಾಗ್ರತಾಟಂಕಾಧಃ ಕರ್ಣದೇಶ ಕಂಠಪ್ರದೇಶ ಹಸ್ತ ಚತುಷ್ಟಯಾಂಗದಸ--

---

೧೫. ಕಸ್ತೂರೀ ತಿಲಕದಿಂದ ಅಥವಾ ಕಸ್ತೂರೀ ರಚಿತವಾದ ಪತ್ರರಚನೆಯಿಂದ ಶೋಭಿಸುವ ಲಲಾಟಭಾಗವುಳ್ಳವಳು. ಲಲಾಮ್ನಾ ರಾಜತ್ + ಅಲಿಕಂ ಯಸ್ಯಾಃ ಸಾ–ಎಂದು ವಿಗ್ರಹವು.

೧೬. ಕೆಳಭಾಗದಲ್ಲಿ ಲಂಬಿಸುತ್ತಿರುವ ಮುತ್ತಿನ ಹಾರಗಳು ಅಥವಾ ಮುತ್ತಿನ ಮಣಿಗಳುಳ್ಳವಳು. ಕಿರೀಟ, ಲಲಾಟಪಟ್ಟ, ನಾಸಾಮಣಿ, ತಾಟಂಕ, ಕಂಠಾಭರಣ, ಹಸ್ತಾಭರಣ, ಅಂಗದ, ಕೂರ್ಪಾಸ, ಪದಕ, ಕಾಂಚೀ, ಮುಂತಾದ ನವರತ್ನಗಳಿಂದ ಖಚಿತವಾದ ಸುವರ್ಣಮಯವಾದ ಆಭರಣಗಳ ಅಧೋಭಾಗ

ಮಾನಪ್ರದೇಶಕೂರ್ಪಾಸಪರಿತಃಪದಕಾಗ್ರದೇಶಕಟಿನಿಬದ್ಧ--
ಕಾಂಚ್ಯಾದಿಷು ಪರಿಲಂಬಮಾನೈರಿತ್ಯರ್ಥಃ ।

## ೧೭. ಓಂ ಲಂಬೋದರಪ್ರಸವೇ ನಮಃ ।

ಲಂಬೋದರಪ್ರಸೂಃ। ಲಂಬೋದರಸ್ಯ ಮಹಾಗಣೇಶಸ್ಯ ಪ್ರಸೂಃ ಜನಯಿತ್ರೀ ಮಾತೇತ್ಯರ್ಥಃ । ಲಂಬೋದರಂ ಪ್ರಸೂತ ಇತಿ ವಾ ।

## ೧೮. ಓಂ ಲಭ್ಯಾಯೈ ನಮಃ ।

ಲಭ್ಯಾ। ಸಂಸಾರದಶಾಯಾ ಮಾವಾರಕಾಜ್ಞಾನೇನ ಸ್ಫುಟಮ ಪ್ರಕಾಶಮಾನಾ ಸತೀ ಶ್ರವಣಾದಿಸಂಸ್ಕೃತಾಂತಃಕರಣವೃತ್ತ್ಯಾವ ಖಂಡಾಕಾರಜ್ಞಾನಭೂಮಿಕಾಯಾಂ ಪ್ರತಿಫಲಿತ ಸ್ವರೂಪೇಣ ವಿಸ್ಮೃತಕಂಠಗತಕನಕಭೂಷಣವತ್ ಪ್ರಾಪ್ತಪ್ರಾಪ್ತಿರೂಪ ತಯಾ ಲಬ್ಧುಂ ಯೋಗ್ಯೇತಿ ತಥಾ ।

---

ಗಳಲ್ಲಿ ಲಂಬಾಯಮಾನವಾದ ಮುಕ್ತಾಮಣಿಗಳಿಂದ ಶೋಭಿಸುವವಳು ಲಂಬಿನ್ಯಶ್ಚ ತಾ ಮುಕ್ತಾಲತಾಶ್ಚ ತಾಭಿಃ + ಅಂಚಿತಾ–ಎಂದು ವಿಗ್ರಹವು.

೧೭. ಲಂಬೋದರನಾಮವುಳ್ಳ ಗಣೇಶನ ತಾಯಿಯಾದವಳು. ಲಂಬೋದರಸ್ಯ ಪ್ರಸೂಃ ಎಂದಾಗಲಿ ಲಂಬೋದರಂ ಪ್ರಸೂತೇ ಎಂದಾಗಲಿ ವಿಗ್ರಹವು

೧೮. ಸಂಸಾರದಶೆಯಲ್ಲಿ ಅಜ್ಞಾನಾವರಣದಿಂದ ಪ್ರಕಾಶಶೂನ್ಯಳಾಗಿದ್ದು ಶ್ರವಣ–ಮನನಾದಿ ಸಂಸ್ಕೃತವಾದ ಅಂತಃಕರಣವುಳ್ಳ ಜ್ಞಾನಿಗಳ ಅಖಂಡಾಕಾರ ಜ್ಞಾನವೃತ್ತಿಯಲ್ಲಿ ಪ್ರತಿಬಿಂಬಿಸಿ ಪ್ರಕಾಶಿಸುವುದರಿಂದ ಮರೆತ ಕಂಠಾಭರಣವನ್ನು ಸ್ಮರಿಸಿಕೊಂಡ ಮಾತ್ರದಿಂದ ಇಲ್ಲದ್ದನ್ನು ಹೊಸದಾಗಿ ಹೊಂದುವ ರೀತಿಯಲ್ಲಿ ಹೊಂದಲು ಯೋಗ್ಯಳಾದವಳು. ಲಬ್ಧುಂ ಯೋಗ್ಯಾ ಎಂದು ವಿಗ್ರಹವು.

## ೧೯. ಓಂ ಲಜ್ಜಾಢ್ಯಾಯೈ ನಮಃ ।

ಲಜ್ಜಾಢ್ಯಾ। ಲಜ್ಜಯಾ, ಉಪಲಕ್ಷಣಮಂತಃಕರಣಧರ್ಮಾಣಾಂ ಸರ್ವೇಷಾಂ, ಆಢ್ಯಾ ತದ್ವತ್ತ್ವೇನ ಆಕಾರವತೀತ್ಯರ್ಥಃ। ತಿರೋಧಾನಾದಿನಾ ಅಂತರ್ಹಿತಾ ಸತೀ ವರಾದಿ ಪ್ರಯಚ್ಛತೀತಿ ಲಜ್ಜಾಢ್ಯಾ ಭವತೀತಿ ಚ ಉಪಚರ್ಯತೇ।

## ೨೦. ಓಂ ಲಯವರ್ಜಿತಾಯೈ ನಮಃ।

ಲಯವರ್ಜಿತಾ। "ಅವಿನಾಶೀ ವಾ ಅರೇಽಯಮಾತ್ಮಾ ಅನುಚ್ಛಿತ್ತಿಧರ್ಮಾ" ಇತಿ ಶ್ರುತೇಃ ಲಯೋ ವಿನಾಶಃ । ತೇನ ರಹಿತಾ ವರ್ಜಿತೇತ್ಯರ್ಥಃ। ಇದಮುಪಲಕ್ಷಣಂ ಷಡ್ಭಾವ ವಿಕಾರಾಣಾಂ । "ಸತ್ಯಂ ಜ್ಞಾನಮನಂತಂ ಬ್ರಹ್ಮ "ಇತ್ಯಾದಿ ಶ್ರುತೇಃ ।

**ಇತಿ ತ್ರಿಶತ್ಯಾಂ ವಿದ್ಯಾಯಾಂ ತುರೀಯಾಕ್ಷರನಾಮವ್ಯಾಖ್ಯಾಯಾಂ ಲಕಾರವರ್ಣಪ್ರಕಾಶಃ ಚತುರ್ಥಃ**

---

೧೯. ಅಂತಃಕರಣ ಧರ್ಮಗಳಾದ ಲಜ್ಜಾದಿಗಳಿಂದ ಕೂಡಿದ ಆಕಾರವುಳ್ಳವಳು. ತಿರೋಧಾನ ಶಕ್ತಿಯಿಂದ ಅದೃಶ್ಯಳಾಗಿದ್ದು ವರಾದಿಗಳನ್ನು ಅನುಗ್ರಹಿಸುವುದರಿಂದ ಲಜ್ಜಾದಿಗುಣಗಳು ಪರದೇವತಾಮೂರ್ತಿಯಲ್ಲಿ ಇರುವುವೆಂಬುದು ಉಪಚರಿಸಲ್ಪಟ್ಟಿದೆ. ಲಜ್ಜಯಾ + ಆಢ್ಯಾ ಎಂದು ವಿಗ್ರಹವು.

೨೦. ಲಯ ಮುಂತಾದ ಷಡ್ಭಾವ ವಿಕಾರಗಳಿಂದ ವರ್ಜಿತಳಾದವಳು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಮುಂತಾದ ಶ್ರುತಿಯಲ್ಲಿ ಸಕಲ ವಿಕಾರ ಶೂನ್ಯತ್ವವನ್ನೂ "ಅವಿನಾಶೀ ವಾ ಅರೇ ಅಯಮಾತ್ಮಾ ಅನುಚ್ಛಿತ್ತಿ ಧರ್ಮಾ" ಎಂಬ ಶ್ರುತಿಯಲ್ಲಿ ವಿನಾಶಾಭಾವವನ್ನೂ ಹೇಳಿರುವುದು. ಲಯೇನ + ವರ್ಜಿತಾ ಎಂದು ವಿಗ್ರಹವು.

**ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ಚತುರ್ಥಪ್ರಕಾಶವು ಸಮಾಪ್ತವು.**

## ೧೭

ಹ್ರೀಂಕಾರರೂಪಾ ಹ್ರೀಂಕಾರನಿಲಯಾ ಹ್ರೀಂಪದಪ್ರಿಯಾ।
ಹ್ರೀಂಕಾರಬೀಜಾ ಹ್ರೀಂಕಾರಮಂತ್ರಾ ಹ್ರೀಂಕಾರಲಕ್ಷಣಾ॥

### ೧. ಓಂ ಹ್ರೀಂಕಾರರೂಪಾಯೈ ನಮಃ।

ಹ್ರೀಂಕಾರರೂಪಾ। ಹ್ರೀಂಕಾರಃ ರೂಪ್ಯತೇ ನಿರೂಪ್ಯತೇ ನಿರ್ದೇಶ್ಯತ ಇತಿ ರೂಪಂ ಮಂತ್ರಪಂಚಮಾವಯವಃ ಯಸ್ಯಾಃ ಸಾ ತಥಾ।

### ೨. ಓಂ ಹ್ರೀಂಕಾರನಿಲಯಾಯೈ ನಮಃ।

ಹ್ರೀಂಕಾರನಿಲಯಾ। ಹ್ರೀಮಕ್ಷರಂ ನಿಲಯಃ ಗೃಹವದವಚ್ಛೇದಕಂ ಯಸ್ಯಾಃ ಸಾ ತಥಾ ಸ್ವೀಯವಾಚಕತ್ವಾರೋಪಿತವಾಚ್ಯತಾವಚ್ಛೇದಕಧರ್ಮಾವಚ್ಛಿನ್ನತಾದಿಸಂಪಾದನೇನ ಗೃಹವರ್ತಿ ಪುರುಷವತ್ ವ್ಯಾವೃತ್ತಸ್ವರೂಪೇಣ ಜ್ಞಾಪಕಂ ಭವತಿ। ಅನ್ಯಥಾ ನಾಮ್ನೋ ವಾಚ್ಯಾರ್ಥೇ ಪ್ರವೃತ್ತ್ಯಯೋಗಾದಿತಿ ಭಾವಃ।

---

೧. ಹ್ರೀಂಕಾರವೆಂಬ ಪಂಚಮಾಕ್ಷರದಿಂದ ಕೂಡಿದ ಮಂತ್ರಮಯವಾದ ಆಕಾರವುಳ್ಳವಳು. ರೂಪವೆಂದರೆ ನಿರ್ದೇಶಿಸಲ್ಪಡುವುದು. ಪಂಚಮಸ್ಥಾನದಲ್ಲಿ ಹ್ರೀಂಕಾರವು ನಿರ್ದೇಶಿಸಲ್ಪಡುವುದು. ಹ್ರೀಂಕಾರಃ + ರೂಪಂ ಯಸ್ಯಾಃ ಸಾ ಎಂದು ವಿಗ್ರಹವು.

೨. ಹ್ರೀಂಕಾರವು ಗೃಹದಂತೆ ಅವಚ್ಛೇದಕವಾಗಿರುವವಳು. ಗೃಹವು ಅಲ್ಲಿರುವ ಸ್ವಾಮಿ ಪುರುಷನನ್ನು ವ್ಯಾವೃತ್ತನನ್ನಾಗಿ ಬೋಧಿಸುವಂತೆ ಹ್ರೀಂ ಎಂಬ ಶಬ್ದವು ತನ್ನ ವಾಚಕತ್ವ ಶಕ್ತಿಯಿಂದ ವಾಚ್ಯತಾವಚ್ಛೇದಕಧರ್ಮಗಳನ್ನು ಆರೋಪಿಸಿ ಧರ್ಮವಿಶಿಷ್ಟ ವ್ಯಕ್ತಿಯನ್ನು ವ್ಯಾವೃತ್ತಾಕಾರದಿಂದ ಬೋಧಿಸುವುದು. ಹಾಗಿಲ್ಲದಿದ್ದರೆ ನಾಮಶಬ್ದಕ್ಕೆ ವಾಚ್ಯಾರ್ಥವನ್ನು ಬೋಧಿಸುವ ಪ್ರವೃತ್ತಿಯುಂಟಾಗಲಾರದು. ಹ್ರೀಂಕಾರಃ–ನಿಲಯಃ–ಯಸ್ಯಾಃ ಎಂದು ವಿಗ್ರಹವು.

## ೩. ಓಂ ಹ್ರೀಂಪದಪ್ರಿಯಾಯೈ ನಮಃ।

ಹ್ರೀಂಪದಪ್ರಿಯಾ। ಪದ್ಯತೇ ಗಮ್ಯತೇ ಜ್ಞಾಯತೇ ಅನೇನೇತಿ ಪದಂ; ಪದ್ಯತೇ ಗಮ್ಯತೇ ಪ್ರಾಪ್ಯತ ಇತಿ ವಾ ಪದಮ್।ಹ್ರೀಂಕಾರಸ್ಯ ಮಂತ್ರಾವಯವತಯಾ ತದ್ದೇವತಾಪ್ರಕಾಶಕತ್ವೇನ ತಸ್ಯಾಂ ಶಕ್ತತ್ವಾತ್ ಶಕ್ತಂ ಪದಂ ಇತಿ ತಲ್ಲಕ್ಷಣತ್ವಾತ್ ತಥಾ ಪ್ರಥಮಂ ವ್ಯಾಖ್ಯಾನಮ್। ಹಕಾರರೇಫೇಕಾರಾನುಸ್ವಾರಾಣಾಂ ವರ್ಣಾನಾಂ ಸಮಷ್ಟಿಸ್ವರೂಪೇಣ ಸಮುದಾಯಾತ್ಮಕತ್ವಾತ್ "ವರ್ಣಸಮುದಾಯಃ ಪದಂ" ಇತ್ಯಪಿ ಪದಲಕ್ಷಣತ್ವಂ ಅಸ್ಯ ಘಟತೇ । ಪುರಶ್ಚರ್ಯಾವತಾಂ ಸ್ವದೇವತಾಸಾಕ್ಷಾತ್ಕಾರ ದ್ವಾರಾ ಸಕಲಪುರುಷಾರ್ಥಪ್ರಾಪಕತ್ವಾತ್ ದ್ವಿತೀಯವ್ಯಾಖ್ಯಾನಂ ತಥಾ ಕೃತಮ್। ತಸ್ಮಿನ್ ಪ್ರಿಯಾ ಪ್ರೀತಿಮತೀತ್ಯರ್ಥಃ।

## ೪. ಓಂ ಹ್ರೀಂಕಾರ ಬೀಜಾಯೈ ನಮಃ।

ಹ್ರೀಂಕಾರಬೀಜಾ ಹ್ರೀಂಕಾರ ಏವ ಬೀಜಂ ಸ್ವವಾಚಕಮಂತ್ರ ಭಾಗಃ। "ಜ್ಞಾಪಕಂ ದೇವತಾನಾಂ ಯತ್ ಬೀಜಮಕ್ಷರ

---

೩. ಹ್ರೀಂ ಎಂಬುವ ತನ್ನನ್ನು ಪ್ರಕಾಶಪಡಿಸುವ ಪದದಲ್ಲಿ ಪ್ರೀತಿಯುಳ್ಳವಳು. ಹ್ರೀಂಕಾರವು ಮಂತ್ರದ ಅವಯವವಾದ್ದರಿಂದ ಪರದೇವತಾ ಪ್ರಕಾಶಕವಾಗಿದೆ. ಆದ್ದರಿಂದ ದೇವತೆಯಲ್ಲಿ ವಾಚಕತ್ವವೆಂಬ ಶಕ್ತಿಯನ್ನು ಅದು ಹೊಂದಿರುವುದು. ಶಕ್ತಿಯುಳ್ಳದ್ದರಿಂದ ಅದು "ಶಕ್ತಂ ಪದಂ" ಎಂಬ ಸಿದ್ಧಾಂತವನ್ನು ಅವಲಂಬಿಸಿ ಪದರೂಪವಾಗುವುದು. ಅಥವಾ ಹ್ರೀಂ ಎಂಬ ಸಕಲ ಪುರುಷಾರ್ಥ ಪ್ರಾಪಕ ಪದದಲ್ಲಿ ಪ್ರೀತಿಯುಳ್ಳವಳು. ಹ್ರೀಂ ಎಂಬಲ್ಲಿ ಹಕಾರ–ರೇಫ–ಈಕಾರ–ಅನುಸ್ವಾರಗಳು ಸಮಷ್ಟಿಯಾಗಿ ಸೇರಿರುವುದರಿಂದ "ವರ್ಣಸಮುದಾಯಃ ಪದಂ" ಎಂಬ ಸಿದ್ಧಾಂತವನ್ನು ಅವಲಂಬಿಸಿ ಅದು ಪದರೂಪವಾಗುವುದು. ಮಂತ್ರಪುರಶ್ಚರಣವನ್ನು ಆಚರಿಸಿದವರಿಗೆ ಪರದೇವತಾ ಪ್ರಕಾಶನದ ಮೂಲಕವಾಗಿ ಸಕಲಪುರುಷಾರ್ಥಗಳನ್ನು ಕೊಡುವುದು. ಅಂತಹ ಪದದಲ್ಲಿ ದೇವಿಯು ಪ್ರೀತಿಯುಳ್ಳವಳಾಗಿರುವಳು. ಹ್ರೀಂಪದವೇಪ್ರಿಯಾ ಎಂದು ವಿಗ್ರಹವು.

೪. ಹ್ರೀಂಕಾರವೆಂಬ ದೇವತಾವಾಚಕ ಮಂತ್ರಭಾಗವಾದ ಬೀಜವರ್ಣ

ಮುಚ್ಯತೇ'' ಇತಿ ವಚನಾತ್ ಹ್ರೀಂಕಾರಸ್ಯ ಮಾಯಾಪ್ರಕಾಶಕತ್ವೇನ, ವಟಧಾನಾದಿಃ ಸ್ವನಿಷ್ಠವೃಕ್ಷಾಭಿವ್ಯಂಜಕತ್ವೇನ ಕಾರಣತಯಾ ಯಥಾ ಬೀಜಮಿತ್ಯುಚ್ಯತೇ ಸತ್ಕಾರ್ಯವಾದಿನಾಮವ್ಯಕ್ತನಾಮರೂಪಕಾರಣಂ ಬೀಜಂ, ಅಭಿವ್ಯಕ್ತನಾಮರೂಪಾತ್ಮಕಂ ಪಶ್ಚಾದ್ಭಾವಿ ಕಾರ್ಯಮಿತ್ಯಂಗೀಕಾರಃ; ಸಕಲಕಾರಣಸಮವಧಾನೇ ವಿಶೇಷನಾಮರೂಪವತ್ತಯಾ ಕಾರಣಸ್ಯಾಭಿವ್ಯಕ್ತಿರುತ್ಪತ್ತಿಃ; ತಥಾ ಚೋಕ್ತಬೀಜಸ್ಯ ಮಾಯಾವಚ್ಛಿನ್ನಚೈತನ್ಯಾಭಿವ್ಯಂಜಕತ್ವೇನಾಪಿ ಬೀಜತ್ವಂ; ತಾದೃಶಂ ಹ್ರೀಂಕಾರಬೀಜಂ ಯಸ್ಯಾಃ ಸಾ ತಥಾ।

೫. ಓಂ ಹ್ರೀಂಕಾರಮಂತ್ರ್ಯೈ ನಮಃ।

ಹ್ರೀಂಕಾರಮಂತ್ರಾ । ಹ್ರೀಂಕಾರಸ್ಯ ಮನನಾತ್ ತ್ರಾಯತೇ

---

ವುಳ್ಳವಳು. ಜ್ಞಾಪಕಂ ದೇವತಾನಾಂ ಯತ್ ಬೀಜಮಕ್ಷರಮುಚ್ಯತೇ'' ಎಂಬ ವಚನದಿಂದ ದೇವತಾ ಬೋಧಕವಾದ ವರ್ಣಕ್ಕೆ ಬೀಜವೆಂಬ ಸಂಜ್ಞೆಯು ಲಭಿಸುವುದು. ಹ್ರೀಂ ಎಂಬುದು ಮಂತ್ರಭಾಗವಾದ್ದರಿಂದ ದೇವತಾ ಬೋಧಕವಾಗಿದೆ. ಮತ್ತು ಹ್ರೀಂಕಾರವು ಮಾಯೆಯನ್ನು ಬೋಧಿಸುವುದು. ಅದು ಅವ್ಯಕ್ತನಾಮರೂಪಸಮಷ್ಟಿರೂಪವಾದುದು. ಸತ್ಕಾರ್ಯವಾದಿಗಳ ಸಿದ್ಧಾಂತದಲ್ಲಿ ಅವ್ಯಕ್ತ ನಾಮರೂಪಾತ್ಮಕವಾದ ತತ್ತ್ವವು ಕಾರಣವು. ಸಕಲ ಕಾರಣಗಳು ಸೇರಿ ವಿಶೇಷರೂಪದಿಂದ ಅಭಿವ್ಯಕ್ತಿ ಹೊಂದಿದ ನಾಮರೂಪಾತ್ಮಕವಾದ ಕಾರಣದ ಅನಂತರದಲ್ಲಿ ಸಂಭವಿಸುವ ತತ್ತ್ವವು ಕಾರ್ಯವು. ವಟಬೀಜವು ಮುಂದೆ ಅಭಿವ್ಯಕ್ತಿಯಾಗುವ ಮಹಾವೃಕ್ಷಕ್ಕೆ ಕಾರಣವಾಗಿರುವುದರಿಂದ ಅದನ್ನು ಬೀಜವೆಂದು ಹೇಳಿದಂತೆ ಹ್ರೀಂ ಎಂಬ ವರ್ಣವು ಮಾಯೋಪಹಿತ ಚೈತನ್ಯಾಭಿವ್ಯಕ್ತಿಗೆ ಕಾರಣವಾದುದರಿಂದ ಅದನ್ನು ಬೀಜವೆಂದು ಕರೆಯಬಹುದು. ಹ್ರೀಂಕಾರಃ ಬೀಜಂ ಯಸ್ಯಾಃ ಸಾ ಎಂದು ವಿಗ್ರಹವು.

೫. ಹ್ರೀಂ ಕಾರವನ್ನು ಮನನಮಾಡಿದ್ದರಿಂದ ವಾಚ್ಯದೇವತೆ-ಮತ್ತು ವಾಚಕಶಬ್ದಗಳ ಐಕ್ಯೋಪಚಾರದಿಂದ ಹ್ರೀಂಕಾರ ರೂಪವಾಗಿ ರಕ್ಷಿಸುವವಳು.

ರಕ್ಷತಿ ವಾಚ್ಯವಾಚಕಯೋರಭೇದಾದಿತಿ ತಥಾ। ಹ್ರೀಂಕಾರ ಘಟಿತೋ ಮಂತ್ರೋ ವಾ ಯಸ್ಯಾಃ ಸಾ ಇತಿ ವಾ ತಥಾ।

೬. ಓಂ ಹ್ರೀಂಕಾರಲಕ್ಷಣಾಯೈ ನಮಃ।

ಹ್ರೀಂಕಾರಲಕ್ಷಣಾ। ಹಕಾರಃ ಶಿವಃ ಆಕಾಶಬೀಜತ್ವಾದಾಕಾಶ ವನ್ನಿರ್ಲೇಪಃ। ರೇಫಃ ವಹ್ನಿಬೀಜಂ ಕಾರ್ಯೋನ್ಮುಖತ್ವಾದಸನ್ನಿಹಿತ ಶಕ್ತಿಮದೀಶ್ವರವಾಚಕಮ್। ತಥಾ ಚ ಹಕಾರಯುಕ್ತರೇಫಃ ಶುದ್ಧಚೈತನ್ಯಮೇವಕಾರಣತಾವಚ್ಛಿನ್ನಂ ಇತಿ ವದತಿ ಈಕಾರಃ ಮನ್ಮಥಬೀಜಂ ತತ್ಕಾರಣಲಕ್ಷಕತಯಾ ಸ್ಥಿತಿಹೇತುವಿಷ್ಣು ರೂಪಚೈತನ್ಯಮಭಿದಧಾತಿ। ಅನುಸ್ವಾರಸ್ತು ಸ್ಮಿನ್ನೇವ ಪದಾರ್ಥೇ ಅಭಿನ್ನನಿಮಿತ್ತೋಪಾದಾನೇ ಲಯಂ ವಕ್ತಿ ತಥಾ। ಚ ಹ್ರೀಮಿ ತ್ಯುಕ್ತೇ ಜಗದುತ್ಪತ್ತಿಸ್ಥಿತಿಲಯಕಾರಣಂ ಚೈತನ್ಯಂ ಶಕ್ತ್ಯಾ

---

ಅಥವಾ ಹ್ರೀಂಕಾರದಿಂದ ಕೂಡಿದ ಮಂತ್ರವುಳ್ಳವಳು. ಹ್ರೀಂಕಾರಸ್ಯ ಮನನಾತ್ + ತ್ರಾಯತೇ ಅಥವಾ ಹ್ರೀಂಕಾರಘಟಿತಃ ಮಂತ್ರಃ ಯಸ್ಯಾಃ ಎಂದು ವಿಗ್ರಹವು.

೬. ಹ್ರೀಂ ಎಂಬ ಭಾಗದಲ್ಲಿ ಹಕಾರ-ರೇಫ-ಈಕಾರ-ಮತ್ತು ಅನುಸ್ವಾರಗಳು ಘಟಕಗಳಾಗಿವೆ. ಅವುಗಳಲ್ಲಿ ಆಕಾಶ ಬೀಜವಾದ ಹಕಾರವು ಆಕಾಶದಂತೆ ನಿರ್ಲಿಪ್ತನಾದ ಶಿವನನ್ನು ಬೋಧಿಸುವುದು. ವಹ್ನಿಬೀಜವಾದ ರೇಫವು ಕಾರ್ಯೋನ್ಮುಖ ಶಕ್ತಿ ವಿಶಿಷ್ಟ ಈಶ್ವರನನ್ನು ಬೋಧಿಸುತ್ತದೆ. ಹ ಮತ್ತು ರೇಫ ಎರಡೂ ಸೇರಿ ಕಾರಣತಾ ವಿಶಿಷ್ಟ ಶುದ್ಧಚೈತನ್ಯವನ್ನು ಬೋಧಿಸುವುದು. ಮನ್ಮಥ ಬೀಜವರ್ಣವಾದ ಈಕಾರವು ಮನ್ಮಥಕಾರಣ ವ್ಯಕ್ತಿಯನ್ನು ಲಕ್ಷಣಾ ವೃತ್ತಿಯಿಂದ ಬೋಧಿಸುವುದರಿಂದ ಸ್ಥಿತಿಹೇತುವಾದ ವಿಷ್ಣುವು ಈಕಾರಕ್ಕೆ ಅರ್ಥವು. ಅನುಸ್ವಾರವು ಅಭಿನ್ನ ನಿಮಿತ್ತೋಪಾದಾನ ರೂಪವಾದ ವ್ಯಕ್ತಿಯಲ್ಲಿ ಲಯವನ್ನು ಬೋಧಿಸುವುದು. ಈ ಅವಯವಾರ್ಥಗಳಿಂದ ಜಗದುತ್ಪತ್ತಿ-ಸ್ಥಿತಿ-ಲಯ ಕಾರಣೀಭೂತವಾದ ಚೈತನ್ಯವನ್ನು ಹ್ರೀಂಕಾರವು ಬೋಧಿಸು

**ವಾಚ್ಯಾರ್ಥಃ ಪ್ರತೀಯತೇ ತಸ್ಯೈವೋಪಾಧಿಪರಿತ್ಯಾಗ ಲಕ್ಷಣಂ ಯಸ್ಯಾಃ ಸಾ ತಥಾ। ಹ್ರೀಂಕಾರಃ ಲಕ್ಷಣಂ ತಟಸ್ಥ ಲಕ್ಷಣಂ ಯಸ್ಯಾಃ ಸೇತಿ ವಾ ತಥಾ।**

---

ತ್ತದೆ. ಹ್ರೀಂಕಾರದ ಉಪಾಧಿ ಪರಿತ್ಯಾಗವು ಲಕ್ಷಣವಾಗಿ ಉಳ್ಳವಳು. ಅಥವಾ ಹ್ರೀಂಕಾರವು ತಟಸ್ಥ ಲಕ್ಷಣವಾಗಿ ಉಳ್ಳವಳು. ಹ್ರೀಂಕಾರಃ ಲಕ್ಷಣಂ ಯಸ್ಯಾಃ—ಎಂದು ವಿಗ್ರಹವು.

೧೮

ಹ್ರೀಂಕಾರಜಪಸುಪ್ರೀತಾ ಹ್ರೀಂಮತೀ ಹ್ರೀಂವಿಭೂಷಣಾ।
ಹ್ರೀಂಶೀಲಾ ಹ್ರೀಂಪದಾರಾಧ್ಯಾ ಹ್ರೀಂಗರ್ಭಾ ಹ್ರೀಂಪದಾಭಿಧಾ ॥

೭. ಓಂ ಹ್ರೀಂಕಾರಬೀಜಸುಪ್ರೀತಾಯೈ ನಮಃ ।

ಹ್ರೀಂಕಾರಜಪಸುಪ್ರೀತಾ । ಹ್ರೀಂಕಾರಸ್ಯ ಜಪಃ ಹ್ರೀಂಕಾರ ಜಪಃ ತೇನ ಸುಪ್ರೀತಾ ।

೮. ಓಂ ಹ್ರೀಂಮತ್ಯೈ ನಮಃ ।

ಹ್ರೀಂಮತೀ। ವಾಚಕತ್ವೇನ ಲಕ್ಷಕತ್ವೇನ ವಾ ಲಕ್ಷ್ಯಪದಾರ್ಥ ರೂಪೇಣ ವಾ ವಾಚ್ಯವಾಚಕಯೋರಭೇದೇನ ವಾ ಅಸ್ಯಾ ಅಸ್ತೀತಿ ಹ್ರೀಂಮತೀ ।

೯. ಓಂ ಹ್ರೀಂವಿಭೂಷಣಾಯೈ ನಮಃ ।

ಹ್ರೀಂವಿಭೂಷಣಾ । ಕೇವಲ ಜಡಮಾಯಾವಾಚಕಃ ಹ್ರೀಂ ಕಾರಃ । ತಥಾ ಹಿ, ಹಕಾರಃ ಶ್ವೇತವಾಚಕಃ, ರೇಫಃ ರೋಹಿ

---

೭. ಹ್ರೀಂಕಾರದ ಜಪದಿಂದ ಸುಪ್ರೀತಳಾದವಳು. ಹ್ರೀಂಕಾರಸ್ಯ ಜಪಃ, ತೇನ + ಸುಪ್ರೀತಾ ಎಂದು ವಿಗ್ರಹವು.

೮. ಹ್ರೀಂಕಾರವು ದೇವಿಗೆ ವಾಚಕ ಅಥವಾ ಲಕ್ಷಕ ವಾಗಿರುವುದರಿಂದಲೂ ಮತ್ತು ವಾಚ್ಯ-ವಾಚಕಗಳ ಅಥವಾ ಲಕ್ಷ್ಯ-ಲಕ್ಷಕಗಳ ಅಭೇದೋಪಚಾರದಿಂದಲೂ ಹ್ರೀಂ ಎಂಬ ಶಬ್ದವುಳ್ಳವಳು. ಹ್ರೀಂ ಅಸ್ಯಾ ಅಸ್ತೀತಿ ಎಂದು ವಿಗ್ರಹವು.

೯. ಹ್ರೀಂ ಎಂಬುವ ಅಕ್ಷರದಿಂದ ವಾಚ್ಯವಾದ ಮಾಯೆಯು ಭೂಷಣ

**ತಾರ್ಥಕಃ, ಈಕಾರಃ ನೀಲಾರ್ಥಕಃ, ತಥಾ ಚ ವಿಶಿಷ್ಟಸ್ಯ ಶುಕ್ಲರಕ್ತನೀಲವತ್ಪದಾರ್ಥವಾಚಕತಯಾ ಸತ್ತ್ವರಜಸ್ತಮೋ ಗುಣವತ್ಪ್ರಕೃತಿವಾಚಕತ್ವೇನ ಪರಿಚ್ಛಿನ್ನಾನೃತಜಡದುಃಖ ಸ್ವರೂಪವಾಚ್ಯಾರ್ಥಕತಯಾ ಪ್ರಕಾಶರಾಹಿತ್ಯೇನ ಅನು ಪಾದೇಯತಾಯಾಂ ಸತ್ಯಾಂ ತದವಚ್ಛಿನ್ನಸ್ವಪ್ರಕಾಶಚೈತನ್ಯಾ ಕಾರತಯಾ ವಿಶಿಷ್ಟಾರ್ಥಸ್ಯ ಆಪಾದಮಸ್ತಕಭೂಷಿತತರು ಣೀವದಾನಂದಸ್ವರೂಪತಯಾ ತದ್ವಾಚಕಹ್ರೀಂಪದಸ್ಯ ಅಷ್ಟೈ ಶ್ವರ್ಯಸಿದ್ಧಿಪ್ರಧಾನಶಕ್ತ್ಯಾದಾಯಕತಯಾ ಶೋಭಾಯ ಮಾನಂ ಭೂಷಣವತ್, ಕುಂಡಲೀ ಪುರುಷಃಇತ್ಯತ್ರ ಕುಂಡಲ ಸ್ಯೋಪಲಕ್ಷಣತಯಾ ಇತರಸಜಾತೀಯಾದಿವ್ಯಾವರ್ತಕತ್ವಂ,**

---

ವಾಗಿ ಉಳ್ಳವಳು. ಹ್ರೀಂ ಶಬ್ದದಲ್ಲಿ ಹಕಾರ–ರೇಫ–ಈಕಾರಗಳು ಸೇರಿವೆ. ಹಕಾರವು ಶ್ವೇತಗುಣವನ್ನೂ ರೇಫವು ಕೆಂಪುವರ್ಣವನ್ನೂ ಈಕಾರವು ನೀಲ ವರ್ಣವನ್ನೂ ಬೋಧಿಸುತ್ತವೆ. ಆದರಿಂದ ವಿಶಿಷ್ಟ ಶಬ್ದವು ಮೂರುಗುಣ ಗಳಿಂದ ಕೂಡಿದ ಪದಾರ್ಥವನ್ನು ಬೋಧಿಸುವುದರಿಂದ ವರ್ಣತ್ರಯದಿಂದ ಕೂಡಿದ ಸತ್ತ್ವ–ರಜ–ತಮ ಎಂಬ ಗುಣಮಯವಾದ ಪ್ರಕೃತಿಯನ್ನು ಬೋಧಿಸುವುದು, ಅದು ಮಾಯಾರೂಪವು, ಅದು ಸ್ವರೂಪದಿಂದ ಅನೃತ–ಜಡ–ದುಃಖ ರೂಪವಾದ್ದರಿಂದ ಪ್ರಕಾಶವಿಲ್ಲದ ತಮೋರೂಪವಾಗಿ ಉಪಾದೇ ಯವಾಗಲಾರದು. ಅಂತಹ ಮಾಯೆಯಿಂದ ಉಪಹಿತವಾದ ಸ್ವಪ್ರಕಾಶ ಚೈತನ್ಯರೂಪವಾದ ಮೂರ್ತಿಯು ಪಾದಾದಿಕೇಶಾಂತವಾದ ಭೂಷಿತ ಅವಯವ ಗಳಿಂದ ಕೂಡಿದ ಆನಂದ ರೂಪವಾಗಿ ಪ್ರಕಾಶಿಸುವುದು. ಅದು ಅಷ್ಟೈಶ್ವ ರ್ಯಾದಿ ಫಲಗಳನ್ನು ನೀಡುವುದರಿಂದಲೂ ಆನಂದಾಂಶರೂಪದಿಂದಲೂ ಉಪಾ ದೇಯವಾಗುವುದು. ಅಂತಹ ಮೂರ್ತಿಯೆಂಬ ಅರ್ಥವನ್ನು ಹ್ರೀಂಪದವು ಪ್ರಕಾಶಪಡಿಸುವುದು. "ಕುಂಡಲಗಳನ್ನು ಧರಿಸಿದ ಮನುಷ್ಯನು" ಎಂದು ಹೇಳಿದರೆ ಇತರ ಪುರುಷರಿಂದ ಬೇರೆ ಮಾಡಿ ವ್ಯಕ್ತಿವಿಶೇಷವನ್ನು ಕುಂಡಲ ಪದವು ಸೂಚಿಸಿದಂತೆ ಹ್ರೀಂ ಎಂಬುದು ಇತರ ಬೀಜಾಕ್ಷರಗಳಿಂದ ವ್ಯಾವರ್ತನ ಮಾಡಲ್ಪಟ್ಟ ವಾಚ್ಯಾರ್ಥವನ್ನು ಪ್ರಕಾಶಪಡಿಸುವುದರಿಂದ ಕುಂಡಲದಂತೆ

ತಥಾಸ್ಯಾಪಿ ಬೀಜಸ್ಯೇತರವ್ಯಾವೃತ್ತವಾಚ್ಯಾರ್ಥಗೋಚರ ಪ್ರಭಾಜನಕತ್ವೇನ ಭೂಷಣವತ್ ಯಸ್ಯಾಃ ಸಾ ತಥಾ।

## ೧೦. ಓಂ ಹ್ರೀಂಶೀಲಾಯೈ ನಮಃ।

ಹ್ರೀಂಶೀಲಾ। ಹ್ರೀಮಿತ್ಯನೇನ ತದ್ವಾಚ್ಯಾರ್ಥಾಃ ಬ್ರಹ್ಮವಿಷ್ಣು ರುದ್ರಾ ಲಕ್ಷ್ಯಂತೇ। ತೇಷಾಂ ಶೀಲಂ ಸ್ವಭಾವಃ ಪಾರಮಾರ್ಥಿಕಂ ರೂಪಂ ಸಚ್ಚಿದಾನಂದಾತ್ಮಕತಾ ಯಸ್ಯಾಃ ಸಾ ತಥಾ। ತನ್ನಿಷ್ಠಧರ್ಮಾಃ ಸತ್ತ್ವರಜಸ್ತಮೋಗುಣಾದಯೋ ವಾ ಯಸ್ಯಾಃ ಸಾ ತಥಾ। "ಶೀಲಂ ಸ್ವಭಾವೇ ಧರ್ಮೇ ಚ" ಇತಿ ವಚನಾತ್।

---

ಹ್ರೀಂಕಾರವು ಅಂತಹ ಮಾಯಾವಿಶಿಷ್ಟ ಚೈತನ್ಯವೆಂಬ ತರುಣೀಮೂರ್ತಿಗೆ ಭೂಷಣವಾಗುವುದು. ಹ್ರೀಂ + ವಿಭೂಷಣಂ ಯಸ್ಯಾಃ ಎಂದು ವಿಗ್ರಹವು.

೧೦. ಹ್ರೀಂ ಪದಾರ್ಥಭೂತರಾದ ಬ್ರಹ್ಮ-ವಿಷ್ಣು-ರುದ್ರ ರೆಂಬ ತ್ರಿಮೂರ್ತಿಗಳ ಪಾರಮಾರ್ಥಿಕರೂಪವಾದ ಸಚ್ಚಿದಾನಂದಾತ್ಮಕತ್ವವುಳ್ಳವಳು. ಹ್ರೀಂ ಶಬ್ದವು ಗುಣೋಪಾಧಿಯಿಂದ ಇರುವ ತ್ರಿಮೂರ್ತಿಗಳನ್ನು ಬೋಧಿಸು ವುದು. ಅವರಲ್ಲಿರುವ ಸಚ್ಚಿದಾನಂದವೆಂಬ ಪಾರಮಾರ್ಥಿಕರೂಪವು ದೇವಿಯ ದಾಗಿರುವುದು. ಅಥವಾ ತ್ರಿಮೂರ್ತಿಗಳಲ್ಲಿರುವ ಸತ್ತ್ವ-ರಜ-ತಮ-ಎಂಬ ಗುಣ ಧರ್ಮಗಳು ದೇವಿಯ ಅಧೀನವಾದ ಮಾಯಾ ಸಂಬಂಧವಾದುವುಗಳಾ ಗಿವೆ. ಆದ್ದರಿಂದ ತ್ರಿಮೂರ್ತಿಗಳ ಸತ್ತ್ವಾದಿಧರ್ಮಗಳುಳ್ಳವಳು. "ಶೀಲಂ ಸ್ವಭಾವೇ ಧರ್ಮೇ ಚ" ಎಂಬ ಕೋಶದಿಂದ ಶೀಲಶಬ್ದಕ್ಕೆ ಸ್ವಭಾವ-ಧರ್ಮ ಗಳು ಅರ್ಥವಾಗಿವೆಯೆಂದು ತಿಳಿಯುವುದು. ಹ್ರೀಂ + ಶೀಲಂ ಯಸ್ಯಾಃ ಸಾ ಎಂದು ವಿಗ್ರಹವು.

## ೧೧. ಓಂ ಹ್ರೀಂಪದಾರಾಧ್ಯಾಯೈ ನಮಃ ।

ಹ್ರೀಂಪದಾರಾಧ್ಯಾ । ಹ್ರೀಂಪದೇನ ಏಕಾಕ್ಷರಬೀಜಮಂತ್ರೇಣ ಆರಾಧಯಿತುಂ ಯೋಗ್ಯಾ ತಥಾ । "ಹ್ರೀಂಕಾರೇಣೈವ ಸಂಸಿದ್ಧೋ ಭುಕ್ತಿಂ ಮುಕ್ತಿಂ ಚ ವಿಂದತಿ" ಇತಿ ಭುವನೇಶ್ವರೀಕಲ್ಪವಚಸಾದಿತಿ ಯಾವತ್ ।

## ೧೨. ಓಂ ಹ್ರೀಂಗರ್ಭಾಯೈ ನಮಃ ।

ಹ್ರೀಂಗರ್ಭಾ । ಹ್ರೀಂಶಬ್ದಾರ್ಥಾಃ ಸಗುಣಮೂರ್ತಯಸ್ತಿಸ್ರಃ ಗರ್ಭೇ ಸ್ವಸ್ವರೂಪೇ ಸಶಕ್ತಿಕಾಃ ಅವಿನಾಭಾವಸಂಬಂಧೇನ ಯಸ್ಯಾಃ ಸಾ ತಥಾ, "ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್" ಇತಿ ವಚನಾತ್ ।

---

೧೧. ಹ್ರೀಂ ಎಂಬ ಪದದಿಂದ ಆರಾಧಿಸಲು ಅರ್ಹಳಾದವಳು. "ಹ್ರೀಂ" ಎಂಬುದು ಏಕಾಕ್ಷರರೂಪವಾದ ಭುವನೇಶ್ವರೀ ಮಂತ್ರವು. "ಹ್ರೀಂಕಾರೇಣೈವ ಸಂಸಿದ್ಧೋ ಭುಕ್ತಿಂ ಮುಕ್ತಿಂ ಚ ವಿಂದತಿ" ಎಂಬ ವಚನದಿಂದ ಭೋಗಾಪವರ್ಗಗಳಿಗೋಸ್ಕರ ಆ ಮಂತ್ರದಿಂದ ಭುವನೇಶ್ವರೀ ದೇವಿಯನ್ನು ಆರಾಧಿಸುವರು. ಹ್ರೀಂಪದೇನ + ಆರಾಧ್ಯಾ ಎಂದು ವಿಗ್ರಹವು.

೧೨. ಹ್ರೀಂ ಶಬ್ದಾರ್ಥವಾದ ಸಗುಣ ತ್ರಿಮೂರ್ತಿಗಳು ಗರ್ಭದಲ್ಲಿ ಉಳ್ಳವಳು. ಶಕ್ತಿಸಹಿತರಾದ ತ್ರಿಮೂರ್ತಿಗಳು ಅವಿನಾಭಾವ ಸಂಬಂಧದಿಂದ ದೇವಿಯ ಗರ್ಭದಲ್ಲಿ ವಾಸಿಸುವರು. "ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ" ಎಂಬ ಗೀತಾ ವಚನದಲ್ಲಿ ತ್ರಿಮೂರ್ತಿ ಮುಂತಾದ ಸಕಲ ಕಾರ್ಯಗಳು ಗರ್ಭರೂಪವೆಂದು ತಿಳಿಯುವುದು. ಹ್ರೀಂ ಗರ್ಭೇ ಯಸ್ಯಾಃ ಎಂದು ವಿಗ್ರಹವು.

## ೧೩. ಓಂ ಹ್ರೀಂಪದಾಭಿಧಾಯೈ ನಮಃ ।

ಹ್ರೀಂಪದಾಭಿಧಾ । ಹ್ರೀಂಕಾರಃ ಅಭಿಧಾ ನಾಮ ಯಸ್ಯಾಃ ಸಾ ತಥಾ । ಸಮಷ್ಟಿರೂಪಾಯಾಃ ಸಮಷ್ಟಿಶಬ್ದವಾಚ್ಯತ್ವ ನಿಯಮಾದಿತ್ಯಭಿಸಂಧಿಃ ।

---

೧೩. ಹ್ರೀಂ ಎಂಬ ಸಮಷ್ಟಿಪದವು ನಾಮರೂಪವಾಗಿ ಉಳ್ಳವಳು. ಸಮಷ್ಟಿ ರೂಪಳಾದ ದೇವಿಯನ್ನು ಹಕಾರಾದಿ ಸಮಷ್ಟಿರೂಪವಾದ ಪದವು ಬೋಧಿಸುವುದು ಎಂದು ನಿಯಮಸಿದ್ಧವಾದುದು. ಹ್ರೀಂಪದಂ ಅಭಿಧಾ ಯಸ್ಯಾಃ ಎಂದು ವಿಗ್ರಹವು.

## ೧೯

**ಹ್ರೀಂಕಾರವಾಚ್ಯಾ ಹ್ರೀಂಕಾರಪೂಜ್ಯಾ ಹ್ರೀಂಕಾರಪೀಠಿಕಾ ।**
**ಹ್ರೀಂಕಾರವೇದ್ಯಾ ಹ್ರೀಂಕಾರಚಿಂತ್ಯಾ ಹ್ರೀಂ ಹ್ರೀಂಶರೀರಿಣೀ॥**

### ೧೪. ಓಂ ಹ್ರೀಂಕಾರವಾಚ್ಯಾಯೈ ನಮಃ ।

**ಹ್ರೀಂಕಾರವಾಚ್ಯಾ । ಮಾಯೋಪಾಧಿಕಬ್ರಹ್ಮಣಿ ಕಲ್ಪಿತ ಧರ್ಮೇಣ ಶಬ್ದಪ್ರವೃತ್ತ್ಯುಪಪತ್ತೇಃ ಹ್ರೀಂಪದಸ್ಯ ವಾಚ್ಯಾ ರೂಢ್ಯೇತ್ಯರ್ಥಃ ।**

### ೧೫. ಓಂ ಹ್ರೀಂಕಾರಪೂಜ್ಯಾಯೈ ನಮಃ ।

**ಹ್ರೀಂಕಾರಪೂಜ್ಯಾ। "ಮೂಲಮಂತ್ರೇಣ ಪೂಜಯೇತ್" ಇತಿ ಪೂಜಾಂಗತ್ವೇನ ಮೂಲಮನೋರ್ವಿನಿಯೋಗಃ ಶ್ರೂಯತೇ। ಮೂಲಮನುಶ್ಚ ದೇವತಾಯಾಃ ಸ್ವಕಂ ನಾಮೇತಿ ವಚನಾತ್,**

---

೧೪. ಹ್ರೀಂ ಕಾರದಿಂದ ಅಭಿಧಾ ಅಥವಾ ರೂಢಿ ಎಂಬ ಶಬ್ದ ವೃತ್ತಿಯಿಂದ ಬೋಧಿಸಲ್ಪಡುವವಳು. ಮಾಯೋಪಾಧಿಯಿಂದ ಕೂಡಿದ ಪರಬ್ರಹ್ಮ ವಸ್ತುವಿನಲ್ಲಿ ಕಲ್ಪಿತವಾದ ಧರ್ಮಗಳನ್ನು ಪುರಸ್ಕರಿಸಿ ಪ್ರವರ್ತಿಸುವುದು ಉಚಿತವು. ಹ್ರೀಂಕಾರೇಣ ವಾಚ್ಯಾ ಎಂದು ವಿಗ್ರಹವು.

೧೫. ಹ್ರೀಂಕಾರದಿಂದ ಪೂಜಿಸಲು ಯೋಗ್ಯಳಾದವಳು. "ಮೂಲ ಮಂತ್ರೇಣ ಪೂಜಯೇತ್" ಎಂಬ ವಚನದಿಂದ ಮೂಲಮಂತ್ರವು ಪೂಜೆಯಲ್ಲಿ ಅಂಗವಾಗಿ ವಿನಿಯೋಗವನ್ನು ಹೊಂದುವುದು. ಮೂಲಮಂತ್ರವು ಉಪಾಸ್ಯದೇವತೆಯ ಮುಖ್ಯವಾದ ನಾಮಧೇಯವೆಂಬ ಭಾವನೆಯು ಮಂತ್ರ ಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವುದು. ಅಂತರ್ಮುಖರಾದವರು ಮಂತ್ರಶಾಸ್ತ್ರ ಗತವಾದ ಆಯಾಯ ಮಂತ್ರನಾಮಾರ್ಥಗಳಲ್ಲಿ ವ್ಯುತ್ಪನ್ನರಾಗಿರುವರು. ಆದುದ ರಿಂದ "ಹ್ರೀಂ" ಎಂಬ ಮೂಲಮಂತ್ರವನ್ನು "ನಮಃ" ಎಂಬ ಪದವನ್ನು

ಅಂತರ್ಮರ್ಭಿಣಾನಾಮೇವ ಮಂತ್ರಶಾಸ್ತ್ರೇಷು ತನ್ನಾಮ್ನಾ ವ್ಯುತ್ಪನ್ನತ್ವಾತ್ । ಹ್ರೀಂಕಾರಂ ನಮೋಽಂತಮುಚ್ಚಾರ್ಯ ಯಥಾ ಗುರುಸಂಪ್ರದಾಯಂ ಶ್ರೀಚಕ್ರಾದೌ ಮೂಲದೇವತಾ ಪೂಜನೀಯೇತ್ಯಾಗಮರಹಸ್ಯಾತ್ ಹ್ರೀಂಬೀಜೇನೈವ ಪೂಜಯಿತುಂ ಯೋಗ್ಯಾ । ಅತಿಪ್ರಿಯಬೀಜನಾಮತ್ವಾದಿತ್ಯಭಿಪ್ರಾಯಃ ।

## ೧೬. ಓಂ ಹ್ರೀಂಕಾರಪೀಠಿಕಾಯೈ ನಮಃ ।

ಹ್ರೀಂಕಾರಪೀಠಿಕಾ । ಅತ್ರ ಪೀಠಶಬ್ದಃ ಆಧಾರಲಕ್ಷಕಃ । ವಾಚ್ಯಾರ್ಥೋ ಹಿ ವಾಚಕಶಬ್ದಸ್ಯ ಸತ್ತಾಪ್ರದತ್ವೇನ ಆಧಾರೋ ಭವತಿ । ಮಂತ್ರದೇವತಯೋರಭೇದೇಽಪಿ ಅರ್ಥನಿಷ್ಠಮಹಿಮ್ನಃ ತದ್ವಾಚಕಪದೇಽದೃಶ್ಯಮಾನತ್ವಾತ್ ಕಲ್ಪಿತಭೇದಂ ಸಂಪಾದ್ಯೇದಮುಚ್ಯತೇ । ಹ್ರೀಂಕಾರಸ್ಯ ಪೀಠಿಕಾ ವೃತ್ತಿಸ್ಥಾನಂ ಶಕ್ತ್ಯಾ ಗೋಚರತಯಾ ವಿಷಯೀಭೂತೇತ್ಯರ್ಥಃ ।

---

ಜೊತೆಗೆಸೇರಿಸಿ "ಹ್ರೀಂನಮಃ" ಎಂದು ಉಚ್ಚರಿಸಿ ಗುರು ಸಂಪ್ರದಾಯಾನುಸಾರವಾಗಿ ಶ್ರೀ ಚಕ್ರದಲ್ಲಿ ಮೂಲದೇವತೆಯನ್ನು ಪೂಜಿಸಬೇಕೆಂದು ಆಗಮ ರಹಸ್ಯವಿರುವುದರಿಂದ ಅತ್ಯಂತ ಪ್ರಿಯವಾದ ಹ್ರೀಂ ಬೀಜಾಕ್ಷರದಿಂದ ಪೂಜಿಸಲು ಯೋಗ್ಯಳಾದವಳೆಂಬುದು ಮಂತ್ರಶಾಸ್ತ್ರಸಿದ್ಧಾಂತವನ್ನು ಅನುಸರಿಸಿದೆ. ಹ್ರೀಂಕಾರೇಣ ಪೂಜ್ಯಾ ಎಂದು ವಿಗ್ರಹವು.

೧೬. ಹ್ರೀಂಕಾರಕ್ಕೆ ಆಧಾರಳಾದವಳು. ಇಲ್ಲಿ ಪೀಠ ಶಬ್ದಕ್ಕೆ ಆಧಾರ ಎಂದು ಅರ್ಥವು. ವಾಚ್ಯವಾದ ಅರ್ಥವು ವಾಚಕಶಬ್ದಕ್ಕೆ ಸತ್ತೆಯನ್ನು ಕೊಟ್ಟು ಆಧಾರವಾಗುವುದು. ಮಂತ್ರ–ದೇವತೆಗಳಿಗೆ ಅಭೇದವಿದ್ದರೂ ಅರ್ಥದಲ್ಲಿರುವ ಮಹಿಮೆಯು ಪದದಲ್ಲಿ ಕಾಣದಿರುವುದರಿಂದ ಭೇದವನ್ನು ಕಲ್ಪಿಸಿ ಈ ಆಧಾರಾಧೇಯಭಾವವನ್ನು ಅಂಗೀಕರಿಸಿ ಈ ಉಕ್ತಿಯು ಪ್ರಸಕ್ತವಾಗಿರುವುದು. ಹ್ರೀಂಕಾರದಿಂದ ಶಕ್ತಿಯಿಂದ ವಿಷಯಳಾಗುವಳು ಎಂದು ತಾತ್ಪರ್ಯವು. ಹ್ರೀಂಕಾರಸ್ಯ + ಪೀಠಿಕಾ ಎಂದು ವಿಗ್ರಹವು.

## ೧೭. ಓಂ ಹ್ರೀಂಕಾರವೇದ್ಯಾಯೈ ನಮಃ ।

ಹ್ರೀಂಕಾರವೇದ್ಯಾ । ಸ್ವರೂಪತಃ ನಿರ್ಗುಣಬ್ರಹ್ಮತಯಾ ಅಜ್ಞಾನವಿಷಯತ್ವಾ ಶ್ರಯತ್ವಾಭ್ಯಾಮಪ್ರಾಪ್ತಪುರುಷಾರ್ಥ ರೂಪತಯಾ ಸಂಸಾರದಶಾಯಾಂ ಪ್ರತೀಯಮಾನತ್ವಾತ್ ಗುರೂಪಸದನ ಶ್ರವಣಾದಿರೂಪ ವಿಧ್ಯಪ್ರಾಮಾಣ್ಯ ನಿರಾಸಾಯ ಲಕ್ಷಣಯಾ ಶುದ್ಧಸ್ವರೂಪಪರಮಾನಂದತಯಾ ಪ್ರೇಪ್ಸಿತ ತ್ವಾತ್, ಶ್ರವಣಾದಿಜನ್ಯವೃತ್ತಿವ್ಯಾಪ್ಯತ್ವರೂಪವೇದನಾವಿಷ ಯತ್ವಮ್। "ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿವ್ಯಾಪ್ತಿರಿತೀ ರ್ಯತೇ,ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ" ಇತ್ಯಾದಿವಚನಾತ್ ಭಗವತಾಪ್ಯಂಗೀಕೃತಮಿತಿ ಹ್ರೀಂಕಾರೇಣ ಗುರುಮುಖೋದ್ಭೂತೇನ ವೇದ್ಯಾ ವೇದಿತುಂ ಯೋಗ್ಯಾ। ತತ್ಸ್ವರೂಪ ಪರಿಜ್ಞಾನದ್ವಾರಾ ತತ್ಪ್ರಾಪ್ತಿರೂಪಪುರುಷಾರ್ಥ ಹೇತುತ್ವಾದಿತಿ ತಾತ್ಪರ್ಯಮ್ ।

---

೧೭. ಗುರುಮುಖದಿಂದ ಉಚ್ಚರಿಸಲ್ಪಟ್ಟ ಹ್ರೀಂಕಾರದಿಂದ ತಿಳಿಯಲು ಅರ್ಹಳು. ನಿರ್ಗುಣ ಬ್ರಹ್ಮವು ಅಜ್ಞಾನಕ್ಕೆ ವಿಷಯವೂ ಆಶ್ರಯವೂ ಆಗಿ ಸ್ವರೂಪ ಪ್ರಕಾಶ ಶೂನ್ಯವಾಗಿರುವುದರಿಂದ ಸಂಸಾರಾವಸ್ಥೆಯಲ್ಲಿ ಪುರುಷಾರ್ಥ ಪ್ರಾಪ್ತಿಯಿಲ್ಲದಿರುವಂತೆ ತೋರುತ್ತಿದೆ. ಗುರೂಪಸದನಶ್ರವಣಮನನ ಮುಂತಾದುವುಗಳನ್ನು ವಿಧಿಸುವ ಶಾಸ್ತ್ರಪ್ರಾಮಾಣ್ಯದಿಂದ ಲಕ್ಷಣಾವೃತ್ತಿಯಿಂದ ವೇದಾಂತ ವಾಕ್ಯಗಳಿಂದ ಪರಿಪೂರ್ಣ ಬ್ರಹ್ಮಾನಂದಾಕಾರದಿಂದ ಪ್ರಾಪ್ಯವಾಗಿರುವುದರಿಂದ ಶ್ರವಣಾದಿಗಳಿಂದ ಹುಟ್ಟುವ ವೃತ್ತಿಯೆಂಬ ಜ್ಞಾನಕ್ಕೆ ವಿಷಯವಾಗುವುದು. "ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿವ್ಯಾಪ್ತಿರಿತೀರ್ಯತೇ" "ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಮ್" ಎಂಬ ವಚನಗಳಿಂದ ಬ್ರಹ್ಮವಸ್ತುವು ವೃತ್ತಿವಿಷಯವಾಗುವುದೆಂದು ಸಿದ್ಧವಾಗಿದೆ. ಆದ್ದರಿಂದ ವೃತ್ತಿ ವಿಷಯವಾಗಿ ಸ್ವರೂಪಪರಿಜ್ಞಾನದಿಂದ ತತ್ಪ್ರಾಪ್ತಿಯೆಂಬ ಪುರುಷಾರ್ಥವು ಲಭಿಸುವುದೆಂದು ತಾತ್ಪರ್ಯವು. ಹ್ರೀಂಕಾರೇಣ + ವೇದ್ಯಾ ಎಂದು ವಿಗ್ರಹವು.

## ೧೮. ಓಂ ಹ್ರೀಂಕಾರಚಿಂತ್ಯಾಯೈ ನಮಃ।

ಹ್ರೀಂಕಾರಚಿಂತ್ಯಾ । ಅಸ್ಯ ಬೀಜಸ್ಯ ಪಂಚಪ್ರಣವಾಂತರ್ಗತ ತ್ವೇನ ಓಂಕಾರಭೇದೇ ಬ್ರಹ್ಮಪ್ರತೀಕತ್ವಾವಿಶೇಷಾತ್। ಪ್ರಣವೇ ಯಥಾ ಪರಾಪರಬ್ರಹ್ಮೋಪಾಸನಹೇತುವದಸ್ಮಿನ್ ವಾ ಪ್ರತೀಕೇ ತದ್ಭವತೀತಿ ವಿಕಲ್ಪಃ। ಯದಾ ಭಕ್ತಿಃ ಸಾರ್ಥಕ್ಯೇನ ಮಂತ್ರವಿಶೇಷೇಷು ಭವತೀತಿ ಯೋಗವೇದಮಾರ್ಗರಹಸ್ಯಂ ನ ವಾದಜಲ್ಪಾದ್ಯವಕಾಶಃ। ಹ್ರೀಂಕಾರೇ ಉಭಯವಿಧಬ್ರಹ್ಮ ಸ್ವರೂಪತಯಾ ಚಿಂತಿತುಂ ಯೋಗ್ಯಾ। ಧ್ಯಾನಸ್ಯ ಸಾಕ್ಷಾತ್ಕಾರಂ ಪ್ರತ್ಯಾರಾದುಪಕಾರಕತ್ವೇನ ಧ್ಯಾತವ್ಯೇತ್ಯರ್ಥಃ ।

## ೧೯. ಓಂ ಹ್ರೀಂ ನಮಃ ।

ಹ್ರೀಂ । ಹೃಞ್ ಹರಣ ಇತಿ ಧಾತುಪಾಠಾತ್ ಸಮಸ್ತವಿದ್ಯೈ

---

೧೮. ಹ್ರೀಂಕಾರದಲ್ಲಿ ಧ್ಯಾನ ಮಾಡಲು ಅರ್ಹಳಾದವಳು. ಹ್ರೀಂ ಎಂಬ ಬೀಜವು ಪಂಚಪ್ರಣವಗಳ ಮಧ್ಯದಲ್ಲಿ ಅಂತರ್ಗತವಾಗಿದೆ. ಆದುದರಿಂದ ಓಂಕಾರದಂತೆ ಇದು ಬ್ರಹ್ಮಪ್ರತೀಕವೆಂಬುದು ಸಮಾನವಾಗಿದೆ. ಪ್ರಣವವು ಪರಾಪರ ಬ್ರಹ್ಮೋಪಾಸನಕ್ಕೆ ಕಾರಣವಾಗಿರುವಂತೆ ಹ್ರೀಂಕಾರವು ಪರ–ಅಪರ ಬ್ರಹ್ಮೋಪಾಸನಕ್ಕೆ ಕಾರಣವಾಗಬಹುದು. ಆದ್ದರಿಂದ ಓಂಕಾರ–ಹ್ರೀಂಕಾರ ಗಳಿಗೆ ವಿಕಲ್ಪವು. ಭಕ್ತಿಯ ವೈವಿಧ್ಯ ಮತ್ತು ಪಾರಮ್ಯಗಳಿಂದ ಸಮಾನವಾದ ಸಾಧ್ಯಾಂಶ ಗರ್ಭಿತ ಮಂತ್ರಗಳಲ್ಲಿ ಕೂಡ ವ್ಯವಸ್ಥೆಯು ಇರುವುದು ಎಂಬ ಯೋಗಶಾಸ್ತ್ರಮಾರ್ಗದ ರಹಸ್ಯವನ್ನು ತಿಳಿದು ವಾದ–ಜಲ್ಪಗಳಿಗೆ ಅವಕಾಶ ವಿಲ್ಲವೆಂದು ಹೇಳುವುದು ಉಚಿತವು. ಆದ್ದರಿಂದ ಹ್ರೀಂಕಾರದಲ್ಲಿ ಪರ–ಅಪರ ಬ್ರಹ್ಮಾಕಾರದಿಂದ ಧ್ಯಾನಿಸಲು ಯೋಗ್ಯಳಾದ ದೇವಿಯನ್ನು ಧ್ಯಾನಿಸಿ ಆರಾದುಪಕಾಂಗವಾದ ಧ್ಯಾನದಿಂದ ಸಾಕ್ಷಾತ್ಕಾರವನ್ನು ಹೊಂದಬೇಕು. ಹ್ರೀಂ ಕಾರೇ ಚಿಂತಿತುಂ ಯೋಗ್ಯಾ ಎಂದು ವಿಗ್ರಹವು.

೧೯. ಸಮಸ್ತಾರೋಪಿತ ಧರ್ಮಗಳನ್ನು ಅಪಹರಿಸುವವಳೂ ಅವಶೇಷ ರೂಪವಾದ ಪರಮಾನಂದಸ್ವರೂಪಳೂ ಆದವಳು. ಹೃಞ ಹರಣೇ ಎಂದು

ಶ್ವರ್ಯಪ್ರದಾನಾದಿಶಕ್ತ್ಯಾರೋಪಾಧಿಷ್ಠಾನತ್ವೇ ಸತ್ಯಪವಾದಾವಶೇಷಿತಪರಮಾನಂದರೂಪಮುಕ್ತಿರಿತ್ಯರ್ಥಃ ।

೨೦. ಓಂ ಹ್ರೀಂಶರೀರಿಣ್ಯೈ ನಮಃ ।

ಹ್ರೀಂಶರೀರಿಣೀ । ಮೂಲಮಂತ್ರಾತ್ಮಿಕೇತಿ ಯಾವತ್ । ಹ್ರೀಮೇವ ಶರೀರಂ ಮೂರ್ತಿರಸ್ಯಾ ಅಸ್ತೀತಿ ಹ್ರೀಂ ಶರೀರಿಣೀ।

ಇತಿ ತ್ರಿಶತ್ಯಾಂ ವಿದ್ಯಾಯಾಂ ಪಂಚಮಾಕ್ಷರನಾಮವ್ಯಾಖ್ಯಾಯಾಂ ಹ್ರೀಂಕಾರವರ್ಣಪ್ರಕಾಶಃ ಪಂಚಮಃ ।

---

ಧಾತುಪಾಠವಿರುವುದು. ದೇವಿಯು ವಿದ್ಯಾ–ಐಶ್ವರ್ಯಾದಿ ಫಲಗಳನ್ನು ನೀಡುವ ಆರೋಪಿತ ಶಕ್ತಿ ಸಹಿತಳಾಗಿರುವಳು. ಮತ್ತು ಅವುಗಳನ್ನು ನಿಷೇಧಿಸಿ ಕೇವಲ ಪರಮಾನಂದ ರೂಪಳೂ ಆಗಿರುವಳು. "ಹರತೀತಿ ಹ್ರೀಂ" ಎಂದು ವಿಗ್ರಹವು.

೨೦. ಮೂಲಮಂತ್ರ ರೂಪವಾದ ಹ್ರೀಂ ಎಂಬ ಶರೀರವುಳ್ಳವಳು. ಹ್ರೀಂ ಶರೀರಂ ಯಸ್ಯಾಃ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮವ್ಯಾಖ್ಯಾನದಲ್ಲಿ ಪಂಚಮಪ್ರಕಾಶವು ಸಮಾಪ್ತವು

## ೨೦

**ಹಕಾರರೂಪಾ ಹಲಧೃಕ್‌ಪೂಜಿತಾ ಹರಿಣೇಕ್ಷಣಾ ।**
**ಹರಪ್ರಿಯಾ ಹರಾರಾಧ್ಯಾ ಹರಿಬ್ರಹ್ಮೇಂದ್ರವಂದಿತಾ ॥**

### ೧. ಓಂ ಹಕಾರರೂಪಾಯೈ ನಮಃ ।

**ಹಕಾರರೂಪಾ । ಹಕಾರಃ ರೂಪಂ ಷಷ್ಠಾವಯವಃ ಯಸ್ಯಾಃ ಸಾ, ಮೂಲವಿದ್ಯಾವಾಚ್ಯಾರ್ಥವಾಚಕಂ ಯಸ್ಯಾಃ ಸಾ ತಥಾ ।**

### ೨. ಓಂ ಹಲಧೃಕ್ಪೂಜಿತಾಯೈ ನಮಃ ।

**ಹಲಧೃಕ್ಪೂಜಿತಾ । ಹಲಂ ಯುಗಂ ಧರತಿ ಇತಿ ಹಲಧೃಕ್ ಬಲರಾಮಃ ತೇನ ಪೂಜಿತಾ । ಧ್ಯಾನಾದಿಭಿಃ ಆರಾಧಿತೇತ್ಯರ್ಥಃ ।**

### ೩. ಓಂ ಹರಿಣೇಕ್ಷಣಾಯೈ ನಮಃ ।

**ಹರಿಣೇಕ್ಷಣಾ । ಹರಿಣ್ಯಾಃ ಏಣ್ಯಾಃ ಈಕ್ಷಣಮಿವ ಈಕ್ಷಣಂ ಯಸ್ಯಾಃ ಸಾ ತಥಾ । ಅತಿಸಂತೋಷೇಣ ಕಾತರಾಕ್ಷೀತಿ**

---

೧. ಹಕಾರವು ಮಂತ್ರದಲ್ಲಿ ಆರನೆಯ ಅವಯವವಾಗಿ ಉಳ್ಳವಳು. ಅಥವಾ ಮೂಲಮಂತ್ರವಾಚ್ಯವಾದ ಅರ್ಥಕ್ಕೆ ವಾಚಕವಾದ ಹಕಾರವುಳ್ಳವಳು. ಹಕಾರಃ + ರೂಪಂ, ಯಸ್ಯಾಃ ಎಂದು ವಿಗ್ರಹವು.

೨. ನೇಗಿಲನ್ನು ಆಯುಧವಾಗಿ ಧರಿಸಿದ ಬಲರಾಮನಿಂದ ಧ್ಯಾನಾದಿ ಪೂರ್ವಕವಾಗಿ ಆರಾಧಿಸಲ್ಪಟ್ಟವಳು. ಹಲಂ ಧರತೀತಿ ಹಲಧೃಕ್–ತೇನ ಪೂಜಿತಾ ಎಂದು ವಿಗ್ರಹವು.

೩. ಹೆಣ್ಣು ಜಿಂಕೆಯ ನೋಟವಂತೆ ಚಂಚಲವಾದ ನೋಟವುಳ್ಳವಳು. ಭಕ್ತರಲ್ಲಿ ಅತ್ಯಾದರ-ಸಂತೋಷಗಳಿಂದ ಕೂಡಿ ಅತಿಚಂಚಲವಾದ ನೋಟ

ಭಾವಃ । ಸರ್ವತ್ರ ಸರ್ವದಾ ಸರ್ವದ್ರಷ್ಟ್ರೀತಿ ವಾ । ಭಕ್ತೇಷ್ಟಾದರಹೇತುದರ್ಶನವತೀತಿ ಭಾವಃ ।

ಳ ಓಂ ಹರಪ್ರಿಯಾಯೈ ನಮಃ ।

ಹರಪ್ರಿಯಾ । ಹರಸ್ಯ ಪ್ರಿಯಾ ಶಿವವಲ್ಲಭೇತ್ಯರ್ಥಃ । ಹರಃ ಪ್ರಿಯೋ ಯಸ್ಯಾಃ ಸಾ ಇತಿ ವಾ ।

೫. ಓಂ ಹರಾರಾಧ್ಯಾಯೈ ನಮಃ ।

ಹರಾರಾಧ್ಯಾ । ಹರೇಣ ಸ್ವಭರ್ತ್ರಾ ಆರಾಧಿತುಂ ಯೋಗ್ಯಾ, ಕೇವಲಸಚ್ಚಿದಾನಂದಸ್ವರೂಪತ್ವಾತ್ ।

೬. ಓಂ ಹರಿಬ್ರಹ್ಮೇಂದ್ರವಂದಿತಾಯೈ ನಮಃ ।

ಹರಿಬ್ರಹ್ಮೇಂದ್ರವಂದಿತಾ। ಹರಿಃ ರಮೇಶಃ,ಬ್ರಹ್ಮಾ ವಾಣೀಶಃ, ಇಂದ್ರೋ ದೇವೇಶಃ, ಉಪಲಕ್ಷಣಂ ಸರ್ವದೇವ ಭೇದಾನಾಂ, ತೈರ್ವಂದಿತಾ ನಮಸ್ಕೃತಾ ।

---

ದಿಂದ ಸರ್ವಕಾಲದಲ್ಲಿಯೂ ಸರ್ವರನ್ನೂ ನೋಡುತ್ತಿರುವಳೆಂದು ತಾತ್ಪರ್ಯವು. ಹರಿಣ್ಯಾಃ ಈಕ್ಷಣಮಿವ ಈಕ್ಷಣಂ ಯಸ್ಯಾಃ ಎಂದು ವಿಗ್ರಹವು.

ಳ. ಹರನ ಅತಿಪ್ರೇಮಕ್ಕೆ ಪಾತ್ರಳಾದವಳು. ಅಥವಾ ಹರನೇ ಪ್ರಿಯನಾಗಿ ಉಳ್ಳವಳು. ಹರಸ್ಯ ಪ್ರಿಯಾ ಅಥವಾ ಹರಃ ಪ್ರಿಯಃ ಯಸ್ಯಾಃ ಎಂದು ವಿಗ್ರಹವು.

೫. ವಲ್ಲಭನಾದ ಹರನಿಂದ ಆರಾಧಿಸಲು ಯೋಗ್ಯಳಾದವಳು. ಸಚ್ಚಿದಾನಂದರೂಪದಿಂದ ಹರನಿಗೆ ದೇವಿಯು ಪೂಜ್ಯಳಾಗುವಳು. ಹರೇಣ + ಆರಾಧಿತುಂ ಯೋಗ್ಯಾ ಎಂದು ವಿಗ್ರಹವು.

೬. ಲಕ್ಷ್ಮೀಪತಿಯಾದ ವಿಷ್ಣು, ವಾಣೀಪತಿಯಾದ ಬ್ರಹ್ಮ, ದೇವರಾಜನಾದ ಇಂದ್ರ ಮುಂತಾದ ಸಕಲದೇವತೆಗಳಿಂದ ನಮಸ್ಕರಿಸಲ್ಪಟ್ಟವಳು. ಹರಿಶ್ಚ + ಬ್ರಹ್ಮಾ ಚ + ಇಂದ್ರಶ್ಚ, ತೈರ್ವಂದಿತಾ ಎಂದು ವಿಗ್ರಹವು.

೨೧

ಹಯಾರೂಢಾಸೇವಿತಾಂಘ್ರಿರ್ಹಯಮೇಧಸಮರ್ಚಿತಾ।
ಹರ್ಯಕ್ಷವಾಹನಾ ಹಂಸವಾಹನಾ ಹತದಾನವಾ॥

೭. ಓಂ ಹಯಾರೂಢಾಸೇವಿತಾಂಘ್ರ್ಯೈ ನಮಃ।

ಹಯಾರೂಢಾಸೇವಿತಾಂಘ್ರಿಃ। ಹಯಾರೂಢಾ ನಾಮ ಅಶ್ವಮಾತ್ರಸೇನಾನೀಶಕ್ತಿಃ ವಶ್ಯಕರೀ। ತಯಾ ಸೇವಿತೌ ಅಂಘ್ರೀ ಯಸ್ಯಾಃ ಸಾ ತಥಾ।

೮. ಓಂ ಹಯಮೇಧ ಸಮರ್ಚಿತಾಯೈ ನಮಃ।

ಹಯಮೇಧಸಮರ್ಚಿತಾ। ಹಯಮೇಧೇನ ಅಶ್ವಮೇಧೇನ ಸಮರ್ಚಿತಾ ಪೂಜಿತಾ। ಪುರುಷತ್ವಾದಿಪ್ರಾಪ್ತ್ಯೈ ಇಲಾದಿಭಿರಿತ್ಯರ್ಥಃ।

೯. ಓಂ ಹರ್ಯಕ್ಷವಾಹನಾಯೈ ನಮಃ।

ಹರ್ಯಕ್ಷವಾಹನಾ। ವಾಹಯತೀತಿ ವಾಹನಂ, ಹರ್ಯಕ್ಷಃ

---

೭. ಹಯಾರೂಢಾ ಎಂಬ ಅಶ್ವಸೈನ್ಯವನ್ನು ನಡೆಸುವ ಸೇನಾನೀ ಅಭಿಮಾನಿಯಾದ ವಶ್ಯಕರಣಮಾಡುವ ದೇವತೆಯಿಂದ ಸೇವೆಮಾಡಲ್ಪಟ್ಟ ಪಾದಕಮಲಗಳುಳ್ಳವಳು. ಹಯಾರೂಢಯಾ ಸೇವಿತೌ ಅಂಘ್ರೀ ಯಸ್ಯಾಃ ಸಾ ಎಂದು ವಿಗ್ರಹವು.

೮. ಇಲಾದಿ ದೇವಿಯರಿಂದ ಪುರುಷತ್ವಪ್ರಾಪ್ತಿಗೋಸ್ಕರ ಅಶ್ವಮೇಧಯಾಗದಿಂದ ಅರ್ಚಿಸಲ್ಪಟ್ಟವಳು. ಹಯಮೇಧೇನ + ಸಮರ್ಚಿತಾ ಎಂದು ವಿಗ್ರಹವು.

೯. ಸಿಂಹವೆಂಬ ಮಹಾವಾಹನವುಳ್ಳವಳು. ಮಹಾಲಕ್ಷ್ಮೀರೂಪ

ಕೇಸರೀ ವಾಹನಂ ಯಸ್ಯಾಃ ಸಾ ತಥಾ। ಮಹಾಲಕ್ಷ್ಮೀರೂಪ ದುರ್ಗೇತ್ಯರ್ಥಃ।

## ೧೧. ಓಂ ಹಂಸವಾಹನಾಯೈ ನಮಃ।

ಹಂಸವಾಹನಾ। ಹಂತಿ ಗಚ್ಛತೀತಿ ಹಂಸಃ ಸೂರ್ಯಃ ಪ್ರಾಣೋ ವಾ, ವಾಹನವತ್ ಆಧಾರಭೂತಪ್ರತೀಕಮಿತ್ಯರ್ಥಃ। ಅಭಿವ್ಯಕ್ತಿ ಸ್ಥಾನಮಿತಿ ಯಾವತ್। ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ। ಸ ಏಕಃ ಇತಿ ಶ್ರುತೇಃ। ಅಥವಾ ಹಂಸವಾಹನಾ ಬ್ರಾಹ್ಮೀರೂಪೇಣೇತ್ಯರ್ಥಃ।

## ೧೧. ಓಂ ಹತದಾನವಾಯೈ ನಮಃ।

ಹತದಾನವಾ। ಹತಾಃ ದಾನವಾಃ ಅನೇಕಪ್ರಕಾರಶಕ್ತಿರೂಪ ಧರಯಾ ಭಂಡಾಸುರಾದಯಃ ಯಯಾ ಸಾ ತಥಾ।

---

ಳಾದ ದುರ್ಗಾದೇವಿಗೆ ಸಿಂಹವು ವಾಹನವಾಗಿ ಸ್ವೀಕರಿಸಲ್ಪಟ್ಟಿದೆ. ವಾಹಯತೀತಿ ವಾಹನಂ, ಹರ್ಯಕ್ಷಃ ವಾಹನಂ ಯಸ್ಯಾಃ ಎಂದು ವಿಗ್ರಹವು.

೧೦. ಸೂರ್ಯ ಅಥವಾ ಪ್ರಾಣವು ವಾಹನದಂತೆ ಆಧಾರರೂಪವಾದ ಪ್ರತೀಕವುಳ್ಳವಳು. ಸೂರ್ಯನಲ್ಲಿಯೂ ಪ್ರಾಣದಲ್ಲಿಯೂ ಒಂದು ಬ್ರಹ್ಮ ವಸ್ತುವು ಅಭಿವ್ಯಕ್ತಿ ಹೊಂದುವುದೆಂಬುದನ್ನು "ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ" ಎಂಬ ಉಪನಿಷದ್ವಾಕ್ಯವು ಬೋಧಿಸುವುದು ಅಥವಾ ಹಂಸವೇ ವಾಹನವಾಗಿ ಉಳ್ಳ ಬ್ರಾಹ್ಮೀ ಮಾತೃಸ್ವರೂಪಳು. ಹಂತಿ ಗಚ್ಛತೀತಿ ಹಂಸಃ ಸ ವಾಹನಂ ಯಸ್ಯಾಃ ಎಂದು ವಿಗ್ರಹವು.

೧೧. ಅನೇಕ ವಿಧವಾದ ಶಕ್ತಿದೇವತಾರೂಪಗಳನ್ನು ಧರಿಸಿ ಸಂಹರಿಸಲ್ಪಟ್ಟ ಭಂಡಾಸುರ ಮುಂತಾದ ಅನೇಕ ದಾನವರುಳ್ಳವಳು. ಹತಾಃ + ದಾನವಾಃ ಯಯಾ ಸಾ ಎಂದು ವಿಗ್ರಹವು.

## ೨೨

**ಹತ್ಯಾದಿಪಾಪಶಮನೀ ಹರಿದಶ್ವಾದಿಸೇವಿತಾ ।**
**ಹಸ್ತಿಕುಂಭೋತ್ತುಂಗಕುಚಾ ಹಸ್ತಿಕೃತ್ತಿಪ್ರಿಯಾಂಗನಾ ॥**

### ೧೨. ಓಂ ಹತ್ಯಾದಿಪಾಪಶಮನ್ಯೈ ನಮಃ ।

ಹತ್ಯಾದಿಪಾಪಶಮನೀ । ಹತ್ಯಾ ಬ್ರಹ್ಮಹತ್ಯಾ ಆದಿರ್ಯೇಷಾಂ ತಾನಿ ತಥಾ ಪಾಪಾನಿ ಶಮಯತೀತಿ ತಥಾ, "ಹರಿರ್ಹರತಿ ಪಾಪಾನಿ" ಇತಿ ವಚನಾತ್ ।

### ೧೩. ಓಂ ಹರಿದಶ್ವಾದಿಸೇವಿತಾಯೈ ನಮಃ ।

ಹರಿದಶ್ವಾದಿಸೇವಿತಾ । ಹರಿತ್ ಹರಿದ್ವರ್ಣಃ ಮರಕತ ಇವ ಅಶ್ವೋ ಯಸ್ಯೇಂದ್ರಸ್ಯ ಸ ತಥಾ ಆದಿರ್ಯೇಷಾಂ ದಿಕ್ಪತೀನಾಂ ತೈಃ ಸೇವಿತಾ ಚರಣಾರವಿಂದಸನ್ನಿಧಿಂ ಕಿಂಕರತಯಾಶ್ರಿತ್ಯೇತ್ಯರ್ಥಃ ।

---

೧೨. ಬ್ರಹ್ಮಹತ್ಯಾ ಮುಂತಾದ ಅನೇಕ ವಿಧದ ಪಾಪಗಳನ್ನು ನಾಶ ಮಾಡುವವಳು. "ಹರಿರ್ಹರತಿ ಪಾಪಾನಿ" ಮುಂತಾದ ವಚನಗಳ ದೇವೀ ವಿಭೂತಿ ವಿಶೇಷದಿಂದ ಪಾಪಗಳನ್ನು ಶಮನಮಾಡುವುವೆಂದು ಹೇಳುವುವು. ಹತ್ಯಾ + ಆದಿಃ ಯೇಷಾಂ ತಾನಿ, ತಾನಿ ಶಮಯತೀತಿ ಎಂದು ವಿಗ್ರಹವು.

೧೩. ಮರಕತ ಮಣಿಯಂತೆ ಹಸುರು ಬಣ್ಣದ ಅಶ್ವವಾಹನವುಳ್ಳ ಇಂದ್ರ ಮೊದಲಾದ ದಿಕ್ಪಾಲಕರಿಂದ ಕೈಂಕರ್ಯವನ್ನು ವಹಿಸಿ ಚರಣಾರವಿಂದ ಸನ್ನಿಧಿಯಲ್ಲಿ ಸೇವಿಸಲ್ಪಟ್ಟವಳು. ಹರಿದ್ವರ್ಣೋಽಶ್ವಃ ಯಸ್ಯ, ಸ + ಆದಿರ್ಯೇಷಾಂ, ತೈಃ + ಸೇವಿತಾ ಎಂದು ವಿಗ್ರಹವು.

## ೧೪. ಓಂ ಹಸ್ತಿಕುಂಭೋತ್ತುಂಗಕುಚಾಯೈ ನಮಃ ।

ಹಸ್ತಿಕುಂಭೋತ್ತುಂಗಕುಚಾ। ಹಸ್ತಃ ಅಸ್ಯಾಸ್ತೀತಿ ಹಸ್ತೀ, ತಸ್ಯ ಕುಂಭೌ ತದ್ವದುನ್ನತೌ ಕುಚೌ ಸಾಂದ್ರೌ ಯಸ್ಯಾಃ ಸಾ ತಥಾ ।

## ೧೫. ಓಂ ಹಸ್ತಿಕೃತ್ತಿಪ್ರಿಯಾಂಗನಾಯೈ ನಮಃ ।

ಹಸ್ತಿಕೃತ್ತಿಪ್ರಿಯಾಂಗನಾ। ಹಸ್ತಿನಃ ಕೃತ್ತೌ ಚರ್ಮಣಿ ಪ್ರಿಯಃ ಪ್ರೀತಿಮಾನ್ ಶಿವಃ, ತಸ್ಯಾಂಗನಾ ಭಾಮಿನೀತ್ಯರ್ಥಃ ।

---

೧೪. ಸೊಂಡಿಲರೂಪವಾದ ಹಸ್ತವುಳ್ಳ ಆನೆಯ ಕುಂಭಗಳಂತೆ ಉನ್ನತವಾದ ಮತ್ತು ಒತ್ತಾದ ಸ್ತನಗಳುಳ್ಳವಳು. ಹಸ್ತಃ ಅಸ್ಯಾಸ್ತೀತಿ ಹಸ್ತೀ ತಸ್ಯ + ಕುಂಭೌ, ತದ್ವದುತ್ತುಂಗೌ + ಕುಚೌ ಯಸ್ಯಾಃ ಎಂದು ವಿಗ್ರಹವು.

೧೫. ಗಜದ ಚರ್ಮದಲ್ಲಿ ಪ್ರೀತಿಯನ್ನಿಟ್ಟಿರುವ ಶಿವನೆಂಬ ವಲ್ಲಭನ ಭಾಮಿನಿಯಾದವಳು. ಹಸ್ತಿನಃ ಕೃತ್ತೌ ಪ್ರಿಯಃ, ತಸ್ಯ + ಅಂಗನಾ ಎಂದು ವಿಗ್ರಹವು.

೨೩

**ಹರಿದ್ರಾಕುಂಕುಮಾದಿಗ್ಧಾ ಹರ್ಯಶ್ವಾದ್ಯಮರಾರ್ಚಿತಾ ।**
**ಹರಿಕೇಶಸಖೀ ಹಾದಿವಿದ್ಯಾ ಹಾಲಾಮದೋಲ್ಲಸಾ ॥**

**೧೬. ಓಂ ಹರಿದ್ರಾಕುಂಕುಮಾದಿಗ್ಧಾಯೈ ನಮಃ ।**

**ಹರಿದ್ರಾಕುಂಕುಮಾದಿಗ್ಧಾ । ಹರಿದ್ರಾಕುಂಕುಮಾಭ್ಯಾಂ ಉಪಲಕ್ಷಣಂ ಕಸ್ತೂರೀಪತ್ರಾದೀನಾಮ್। ದಿಗ್ಧಾ ಲಿಪ್ತೇತ್ಯರ್ಥಃ ।**

**೧೭. ಓಂ ಹರ್ಯಶ್ವಾದ್ಯಮರಾರ್ಚಿತಾಯೈ ನಮಃ ।**

**ಹರ್ಯಶ್ವಾದ್ಯಮರಾರ್ಚಿತಾ । ಹರ್ಯಶ್ವಃ ಸುರೇಶ ಆದಿರ್ಯೇಷಾಂ ಅಮರಾಣಾಂ ತೈರರ್ಚಿತಾ ಕಿಂಕರತಯಾ ನಿಯಾಮಕತ್ವೇನ ಪೂಜಿತೇತ್ಯರ್ಥಃ ।**

**೧೮. ಓಂ ಹರಿಕೇಶಸಖ್ಯೈ ನಮಃ ।**

**ಹರಿಕೇಶಸಖೀ। ಹರಯಃ ಹರಿದ್ವರ್ಣಾಃ ಕೇಶಃ ಶಿರೋರುಹಾಃ ಯಸ್ಯ "ಹಿರಣ್ಯಶ್ಮಶ್ರುರ್ಹಿರಣ್ಯಕೇಶಃ" ಇತಿ ಶ್ರುತೇಃ ।**

---

೧೬. ಹರಿದ್ರಾ, ಕುಂಕುಮ ಮತ್ತು ಕಸ್ತೂರೀ ಪತ್ರ ಮುಂತಾದುವುಗಳಿಂದ ಲೇಪಿಸಲ್ಪಟ್ಟವಳು. ಹರಿದ್ರಾ ಚ + ಕುಂಕುಮಂ ಚ ತಾಭ್ಯಾಂ ಆದಿಗ್ಧಾ ಎಂದು ವಿಗ್ರಹವು.

೧೭. ದೇವರಾಜನಾದ ಇಂದ್ರನು ಮೊದಲಾದ ದೇವತೆಗಳಿಂದ ಕಿಂಕರರೂಪದಿಂದ ಪೂಜಿಸಲ್ಪಟ್ಟ ನಿಯಾಮಕಳಾಗಿರುವವಳು. ಹರಿಃ + ಅಶ್ವಃ ಸ + ಆದಿರ್ಯೇಷಾಂ, ತೇ ಚ ತೇ + ಅಮರಾಶ್ಚ, ತೈರರ್ಚಿತಾ– ಎಂದು ವಿಗ್ರಹವು.

೧೮. ಹಿರಣ್ಯವರ್ಣದ ಕೇಶಗಳುಳ್ಳ ಪರಬ್ರಹ್ಮವಸ್ತುವಿಗೆ ಪ್ರಯೋಜನಾಪೇಕ್ಷೆಯಿಲ್ಲದೆ ಉಪಕಾರಮಾಡುವವಳು. ಬ್ರಹ್ಮವಸ್ತುವನ್ನು ಹಿರಣ್ಯಶ್ಮಶ್ರು

ತಸ್ಯ ಸಖೀ ಪ್ರಯೋಜನಮನಪೇಕ್ಷ್ಯ ಉಪಕಾರಿಣೀತ್ಯರ್ಥಃ। ಯದ್ವಾ ವರ್ಣೇನ ನೀಲೇನ ಹರಿಣಾ ವಿಷ್ಣುನಾ ಸಮಾಃ ಕೇಶಾ ಅಸ್ಯ ಸಂತೀತಿ ಸರ್ವಾಂಗಸುಂದರನಿತ್ಯಯೌವನಚಿದ್ರೂಪ ಸಹಿತಕಾಮೇಶ್ವರಃ। ತಸ್ಯ ಸಖೀ।

### ೧೯. ಓಂ ಹಾದಿವಿದ್ಯಾಯೈ ನಮಃ।

ಹಾದಿವಿದ್ಯಾ। ಲೋಪಾಮುದ್ರೋಪಾಸಿತಮನುರೂಪೇತ್ಯರ್ಥಃ।

### ೨೦. ಓಂ ಹಾಲಾಮದಾಲಸಾಯೈ ನಮಃ।

ಹಾಲಾಮದಾಲಸಾ। ಹಾಲಾಯಾಃ ಅಮೃತಮಥನೋದ್ಭೂತವಾರುಣ್ಯಾಃ ಮದೇನ ಉಲ್ಲಾಸೇನ ಅಲಸಾ ಆರಕ್ತನೇತ್ರಾಂತರೋಮಾಂಚಾದಿ ಚಿಹ್ನವತೀತ್ಯರ್ಥಃ।

ಇತಿ ತ್ರಿಶತ್ಯಾಂ ವಿದ್ಯಾಯಾಂ ಷಷ್ಠಾಕ್ಷರನಾಮವ್ಯಾಖ್ಯಾಯಾಂ ಹಕಾರವರ್ಣಪ್ರಕಾಶಃ ಷಷ್ಠಃ

---

ಹಿರಣ್ಯಕೇಶಃ ಮುಂತಾದ ಶ್ರುತಿಯು ಹಿರಣ್ಯವರ್ಣದ ಕೇಶಾದಿ ಸಗುಣಾಕಾರದಿಂದ ವರ್ಣಿಸುವುದು. ಅಥವಾ ನೀಲಮೇಘಶ್ಯಾಮನಾದ ವಿಷ್ಣುವಿಗೆ ಸಮಾನವಾದ ಕೇಶಗಳುಳ್ಳವನು ಸರ್ವಾಂಗ ಸುಂದರ ನಿತ್ಯಯೌವನ ಚಿದ್ರೂಪದಿಂದ ಕೂಡಿದ ಕಾಮೇಶ್ವರನು, ಅವನ ಸಖಿಯಾಗಿರುವವಳು. ಹರಯಃ + ಕೇಶಾ ಯಸ್ಯ, ತಸ್ಯ + ಸಖೀ– ಎಂದು ವಿಗ್ರಹವು.

೧೯. ಹಕಾರವೇ ಆದಿಯಲ್ಲಿರುವ ಲೋಪಾಮುದ್ರೆಯಿಂದ ಉಪಾಸನೆ ಮಾಡಲ್ಪಟ್ಟ ಮಂತ್ರ ರೂಪಳಾಗಿರುವಳು. ಹಃ + ಆದಿರ್ಯಸ್ಯಾಃ– ಎಂದು ವಿಗ್ರಹವು.

೨೦. ಅಮೃತಮಥನದಿಂದ ಹುಟ್ಟಿದ ವಾರುಣಿ ಎಂಬ ಮದ್ಯದ ಮದದ ಉಲ್ಲಾಸದಿಂದ ರಕ್ತನೇತ್ರ – ರೋಮಾಂಚ ಮುಂತಾದ ಚಿಹ್ನೆಗಳಿಂದ ಕೂಡಿದ ಅಲಸಭಾವವುಳ್ಳವಳು. ಹಾಲಾಯಾಃ + ಮದಃ, ತೇನ + ಅಲಸಾ। ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ಷಷ್ಠ ಪ್ರಕಾಶವು ಸಮಾಪ್ತವು.

## ೨೪

ಸಕಾರರೂಪಾ ಸರ್ವಜ್ಞಾ ಸರ್ವೇಶೀ ಸರ್ವಮಂಗಲಾ ।
ಸರ್ವಕರ್ತ್ರೀ ಸರ್ವಭರ್ತ್ರೀ ಸರ್ವಹಂತ್ರೀ ಸನಾತನಾ॥

### ೧. ಓಂ ಸಕಾರರೂಪಾಯೈ ನಮಃ ।

ಸಕಾರರೂಪಾ । ದ್ವಿತೀಯಖಂಡದ್ವಿತೀಯಾವಯವತ್ವೇನ ಜ್ಞಾಪಕಂ ಯಸ್ಯಾಃ ಸಾ ತಥಾ ।

### ೨. ಓಂ ಸರ್ವಜ್ಞಾಯೈ ನಮಃ ।

ಸರ್ವಜ್ಞಾ । ಅಲುಪ್ತನಿತ್ಯಜ್ಞಾನಸ್ವರೂಪೇಣ ಸಾಮಾನ್ಯ ರೂಪೇಣ ಸರ್ವಂ ಜಾನಾತೀತಿ ಸರ್ವಜ್ಞಾ ।" ಯಃ ಸರ್ವಜ್ಞಃ ಸರ್ವವಿತ್ " ಇತಿ ಶ್ರುತೇಃ ।

### ೩. ಓಂ ಸರ್ವೇಶ್ಯೈ ನಮಃ ।

ಸರ್ವೇಶೀ । ಸರ್ವಸ್ಯ ಕಾರ್ಯಸ್ಯ ಅಂತರ್ಯಾಮಿರೂಪೇಣ ಈಷ್ಟೇ ಪ್ರೇರಯತೀತಿ ತಥಾ ।

---

೧. ದ್ವಿತೀಯ ಖಂಡದ ಮಂತ್ರಭಾಗದಲ್ಲಿ ದ್ವಿತೀಯಾಕ್ಷರ ರೂಪವಾದ ಅವಯವದಿಂದ ಸೂಚಿಸಲ್ಪಡುವವಳು. ಸಕಾರಃ + ರೂಪಂ = ಯಸ್ಯಾಃ ಸಾ– ಸಕಾರ ರೂಪಾ ಎಂದು ವಿಗ್ರಹವು.

೨. ಲೋಪವಿಲ್ಲದ ನಿತ್ಯಜ್ಞಾನರೂಪದಿಂದ ಸಾಮಾನ್ಯರೂಪವಾಗಿ ಸರ್ವವನ್ನು ತಿಳಿದವಳು. " ಯಃ ಸರ್ವಜ್ಞಃ ಸರ್ವವಿತ್ " ಎಂಬ ಶ್ರುತಿವಚನವು ಈ ಅಂಶದಲ್ಲಿ ಪ್ರಮಾಣವಾಗಿದೆ. ಸರ್ವಂ ಜಾನಾತಿ ಎಂದು ವಿಗ್ರಹವು.

೩. ಅಂತರ್ಯಾಮಿ ರೂಪದಿಂದ ಸಮಸ್ತ ಕಾರ್ಯಗಳನ್ನು ಪ್ರೇರೇಪಿಸುವವಳು. ಸರ್ವಸ್ಯ ಈಷ್ಟೇ ಇತಿ ಸರ್ವೇಶೀ ಎಂದು ವಿಗ್ರಹವು.

## ೪. ಓಂ ಸರ್ವಮಂಗಲಾಯೈ ನಮಃ ।

ಸರ್ವಮಂಗಲಾ । ಸರ್ವಪ್ರಕಾರೇಣ ಶುದ್ಧವಿಶಿಷ್ಟಚೈತನ್ಯ ರೂಪೇಣ ಮಂಗಲಾ ಪರಮಾನಂದಸ್ವರೂಪಾ । ಅತ್ರ ಬಹು ವ್ರೀಹೇರವಿವಕ್ಷಿತತ್ವಾತ್ ವಿವಕ್ಷಿತಾಯಾಂ ವಾ ಸುಂದರ ಕಾಯೋ ರಾಜೇತ್ಯಾದಿವತ್ ಸಮಾಸಾರ್ಥಃ । ಅಥವಾ ಸರ್ವೇ ಷಾಂ ಮಂಗಳಂ ಯಸ್ಯಾಃ ಸಾ ತಥಾ । ಸರ್ವೈಃ ಪ್ರಕಾರೈಃ ಧ್ಯಾನಕೀರ್ತನಪೂಜಾನಮಸ್ಕಾರಾದ್ಯರ್ಚನಭಕ್ತಿಜನ್ಯಕೈಂಕರ್ಯೈಃ ಜಡಾನಾಮಪಿ ಮಂಗಳಂ ಸುಖಂ ಯಸ್ಯಾಃ ಜಾಯತೇ ಸಾ ತಥಾ । ಸರ್ವೇಷಾಮಾತ್ಮರೂಪತಯಾ ಪ್ರತೀಯಮಾನಂ ಮಂಗಲಂ ಸುಖಸ್ವರೂಪಂ ಯಸ್ಯಾಃ ಸೇತಿ ವಾ । ಸರ್ವಶಬ್ದ ವಾಚ್ಯಃ ಸರ್ವಕಾರಣಂ ಶಿವಃ, ತಸ್ಯ ಮಂಗಲಂ ಸುಖಂ ಯ ಸ್ಯಾಃ ಜಾಯತೇ ಸಾ ತಥಾ । "ಸಚ್ಚಿನ್ಮಯಃ ಶಿವಃ ಸಾಕ್ಷಾತ್ ತಸ್ಯಾನಂದಮಯೀ ಶಿವಾ" ಇತಿವಚನಾತ್। ಅಥವಾ ಮಂಗ

---

೪. ಶುದ್ಧವಾದ ವಿಶಿಷ್ಟ ಚೈತನ್ಯವೆಂಬ ಆಕಾರದಿಂದ ಸಕಲ ಪ್ರಕಾರ ಗಳಲ್ಲಿಯೂ ಪರಮಾನಂದ ಸ್ವರೂಪವಾದ ಮಂಗಲವುಳ್ಳವಳು ಎಂಬ ಬಹು ವ್ರೀಹಿ ಸಮಾಸದಿಂದ ತೋರುವ ಅರ್ಥಕ್ಕೆ ವಿವಕ್ಷೆಯಿಲ್ಲದ್ದರಿಂದ ಮಂಗಲ ರೂಪವಾದ ಪರಮಾನಂದ ಸ್ವರೂಪಳು ಎಂದು ವ್ಯಾಖ್ಯಾನವನ್ನು ಮಾಡಿರು ತ್ತದೆ. ಬಹುವ್ರೀಹಿ ಸಮಾಸವನ್ನು ವಿವಕ್ಷಿಸಿದರೂ ಕೂಡ ಸುಂದರ ದೇಹ ವುಳ್ಳ ರಾಜನು ಎಂಬ ಉದಾಹರಣೆಯಲ್ಲಿ ರಾಜನ ಸ್ವರೂಪವಾದ ಶರೀರವು ಸುಂದರವಾಗಿದೆಯೆಂಬ ಅಭಿಪ್ರಾಯದಿಂದ ಸುಂದರವಾದ ದೇಹವುಳ್ಳವನು ಎಂದು ಹೇಳುವಂತೆ ಅರ್ಥವು ಬಾಧಿತವಾಗುವುದಿಲ್ಲ. ಅಥವಾ ಸಮಸ್ತರಿಗೆ ಮಂಗಳವನ್ನು ಉಂಟು ಮಾಡುವ ಕಾರಣ ಸ್ವರೂಪಳು. ಅಥವಾ ಧ್ಯಾನ, ಕೀರ್ತನ, ಪೂಜಾ, ನಮಸ್ಕಾರ, ಅರ್ಚನ ಮುಂತಾದ ಭಕ್ತಿಯಿಂದ ಅವಲಂಬಿ ಸುವ ಕೈಂಕರ್ಯದಿಂದ ಎಲ್ಲರಿಗೂ ಮಂಗಲ ಪ್ರದಾನ ಮಾಡುವವಳು. ಅಥವಾ ಸರ್ವಪ್ರಾಣಿಗಳಿಗೆ ಆತ್ಮರೂಪಳಾದ್ದರಿಂದ ಮಂಗಳರೂಪವಾಗಿ ತೋರುವ ಸುಖಸ್ವರೂಪವುಳ್ಳವಳು. ಅಥವಾ ಸರ್ವವಸ್ತುಗಳಿಗೆ ಕಾರಣನಾದ್ದ

**ಲಶಬ್ದೇನ ಮಂಗಲಹೇತು ಭೂತಾಃ ಸ್ತ್ರಿಯಃ ಲಕ್ಷ್ಯಂತೇ। ಸರ್ವೇಷಾಂ ಪ್ರಾಣಿನಾಂ ಮಂಗಲಂ ಮಂಗಲಸಾಧನಭೂತಾಃ ಯೋಷಾಃ ಸ್ವಾಭಿನ್ನಸಚ್ಚಿದಾನಂದವತ್ತ್ವೇನ ಯಸ್ಯಾಃ ಸಾ ತಥಾ; "ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ" ಇತಿ ಶ್ರುತೇರಿತ್ಯರ್ಥಃ। ಅಶುಭಾನಿ ನಿರಾಚಷ್ಟೇ ತನೋತಿ ಶುಭಸಂತತಿಮ್। ಸ್ಮೃತಿಮಾತ್ರೇಣ ಯತ್ಪುಂಸಾಂ ಬ್ರಹ್ಮಂನ್ಮಗಲಂ ವಿದುಃ॥ ಅತಿಕಲ್ಯಾಣರೂಪತ್ವಾನ್ನಿತ್ಯಕಲ್ಯಾಣಸಂಶ್ರಯಾತ್। ಸ್ಮರ್ತೄಣಾಂ ವರದತ್ವಾಚ್ಚ ಬ್ರಹ್ಮತನ್ಮಂಗಲಂ ವಿದುಃ" ಇತ್ಯಾದಿವಚನಾತ್।**

---

ರಿಂದ ಸರ್ವಾತ್ಮಕನಾದ ಶಿವನಿಗೆ ಮಂಗಲಪ್ರದಳಾದವಳು. ಶಿವನಿಗೆ ಮಂಗಲ ರೂಪಳಾದವಳು ಎಂಬುದನ್ನು "ಸಚ್ಚಿನ್ಮಯಃ ಶಿವಃ ಸಾಕ್ಷಾತ್ತಸ್ಯಾನಂದಮಯೀ ಶಿವಾ" ಎಂಬ ವಚನವು ಬೋಧಿಸುವುದು. ಅಥವಾ ಮಂಗಲ ಶಬ್ದಕ್ಕೆ ಲಕ್ಷಣಾ ಎಂಬ ವೃತ್ತಿಯಿಂದ ಮಂಗಲಕ್ಕೆ ಕಾರಣರಾದ ಸ್ತ್ರೀ ವ್ಯಕ್ತಿಗಳು ಎಂದು ಅರ್ಥವು. ಸರ್ವ ಪ್ರಾಣಿಗಳ ಮಂಗಳ ಸಾಧನರಾದ ಮತ್ತು ಸಚ್ಚಿದಾನಂದ ರೂಪದಿಂದ ಇರುವ ವನಿತೆಯರುಳ್ಳವಳು. ಸ್ತ್ರೀ ಸಂಗದಿಂದ ಉಂಟಾಗುವ ಸೌಖ್ಯವು ಬ್ರಹ್ಮಾನಂದದ ಒಂದು ಮಾತ್ರಾತ್ಮಕವಾಗಿರುವುದು. "ಏತಸ್ಯೈವ ಆನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪ ಜೀವಂತಿ" ಎಂಬ ಶ್ರುತಿಯೂ ಆ ಅರ್ಥದಲ್ಲಿ ಆಧಾರವಾಗಿರುವುದು. ಮತ್ತು "ಅಶುಭಾನಿ ನಿರಾಚಷ್ಟೇ ತನೋತಿ ಶುಭ ಸಂತತಿಮ್। ಸ್ಮೃತಿಮಾತ್ರೇಣ ಯತ್ಪುಂಸಾಂ ಬ್ರಹ್ಮತನ್ಮಂಗಲಂ ವಿದುಃ। ಅತಿ ಕಲ್ಯಾಣರೂಪತ್ವಾನ್ನಿತ್ಯ ಕಲ್ಯಾಣ ಸಂಶ್ರಯಾತ್। ಸ್ಮರ್ತೄಣಾಂ ವರದತ್ವಾಚ್ಚ ಬ್ರಹ್ಮ ತನ್ಮಂಗಲಂ ವಿದುಃ" ಎಂಬ ವಚನಗಳು ಕೂಡ ಭಕ್ತರಿಗೆ ಅಶುಭಗಳನ್ನು ಧ್ವಂಸಮಾಡಿ ಶುಭ ಮಂಗಲರೂಪಗಳನ್ನು ಕೊಡುವುದೆಂಬುದನ್ನು ಹೇಳುತ್ತವೆ. ಸರ್ವೇಣ ಮಂಗಲಾನಿ ಯಸ್ಯಾಃ ಸ್ಸಾ, ಅಥವಾ ಸರ್ವೇಷಾಂ ಮಂಗಲಂ ಯಸ್ಯಾಃ, ಅಥವಾ ಸರ್ವೈಃ ಮಂಗಲಂ ಯಸ್ಯಾಃ, ಸರ್ವಸ್ಯ ಮಂಗಲಂ ಯಸ್ಯಾಃ ಎಂದು ಅರ್ಥಗಳನ್ನು ಅನುಸರಿಸಿ ನಾನಾ ವಿಧವಾದ ವಿಗ್ರಹಗಳು.

## ೫. ಓಂ ಸರ್ವಕರ್ತ್ರ್ಯೈ ನಮಃ ।

ಸರ್ವಕರ್ತ್ರೀ । ಸರ್ವಂ ಸಮಸ್ತಂ ಸ್ವಶಕ್ತ್ಯಾ ಮಾಯಯಾ ರೂಪಯಾ ಕರೋತೀತಿ ತಥಾ, "ಈಕ್ಷತ ಈಶನೀಭಿಃ" ಇತಿ ಶ್ರುತೇಃ ।

## ೬. ಓಂ ಸರ್ವಭರ್ತ್ರ್ಯೈ ನಮಃ ।

ಸರ್ವಭರ್ತ್ರೀ । ಸರ್ವಂ ಬಿಭರ್ತೀತಿ ತಥಾ । "ಏಷ ವಿಧೃತಿರೇಷಾಂ ಲೋಕಾನಾಂ" ಇತಿ ಶ್ರುತೇಃ ।

## ೭. ಓಂ ಸರ್ವಹನ್ತ್ರ್ಯೈ ನಮಃ ।

ಸರ್ವಹಂತ್ರೀ । ಸರ್ವಂ ಹಂತೀತಿ ತಥಾ । ಏಭಿರ್ನಾಮತ್ರಯೈಃ "ಯತೋ ವಾ" ಇತ್ಯಾದಿಶ್ರುತ್ಯುಕ್ತ ತಟಸ್ಥಲಕ್ಷಣತ್ರಯಮಭಿಹಿತಮಿತಿ ವೇದಿತವ್ಯಮ್ ।

---

೫. ಮಾಯಾ ರೂಪವಾದ ಸ್ವಶಕ್ತಿಯಿಂದ ಸರ್ವವನ್ನು ನಿರ್ಮಿಸುವವಳು, "ಈಶತ ಈಶಿನೀಭಿಃ" ಎಂಬ ಶ್ರುತಿ ವಚನವು ಈ ಅಂಶದಲ್ಲಿ ಆಧಾರವು. ಸರ್ವಂ ಕರೋತಿ ಎಂದು ವಿಗ್ರಹವು.

೬. ಸರ್ವವನ್ನು ಭರಣಮಾಡುವವಳು "ಏಷ ವಿಧೃತಿರೇಷಾಂ ಲೋಕಾನಾಂ" ಎಂಬ ಶ್ರುತಿಯು ಬ್ರಹ್ಮವಸ್ತುವಿನಲ್ಲಿ ಸರ್ವವಿಧಾರಕತ್ವವನ್ನು ತಿಳಿಸುತ್ತದೆ. ಸರ್ವಂ ಬಿಭರ್ತಿ ಎಂದು ವಿಗ್ರಹವು.

೭. ಸಮಸ್ತವನ್ನು ಸಂಹರಿಸುವವಳು. ಸರ್ವಕರ್ತ್ರೀ, ಸರ್ವಭರ್ತ್ರೀ, ಸರ್ವಹಂತ್ರೀ ಎಂಬ ಮೂರು ನಾಮಗಳಿಂದ ಜಗತ್ತಿನ ಉತ್ಪತ್ತಿ–ಸ್ಥಿತಿ–ಲಯ ಕಾರಣತ್ವವೆಂಬ ಪರಬ್ರಹ್ಮವಸ್ತುವಿನಲ್ಲಿ ಅನ್ವಯಿಸುವ ತಟಸ್ಥಲಕ್ಷಣಗಳು ಹೇಳಲ್ಪಟ್ಟಿವೆ. ಸರ್ವಸ್ಯ + ಹಂತ್ರೀ ಎಂದು ವಿಗ್ರಹವು.

## ೮. ಓಂ ಸನಾತನಾಯ್ಯೈ ನಮಃ ।

**ಸನಾತನಾ। " ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ " ಇತಿ ಶ್ರುತೇಃ ನಿತ್ಯಸಿದ್ಧಸ್ವರೂಪೇತ್ಯರ್ಥಃ ।**

---

೮. ನಿತ್ಯಸಿದ್ಧವಾದ ಅನಾದಿ ಸ್ವರೂಪವುಳ್ಳವಳು. " ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ " ಎಂಬ ವಚನದಿಂದ ಈ ಅಂಶವು ವ್ಯಕ್ತವಾಗಿರುವುದು. ಸನಾ + ಭವತೀತಿ ಎಂದು ವಿಗ್ರಹವು.

೨೫

**ಸರ್ವಾನವದ್ಯಾ ಸರ್ವಾಂಗಸುಂದರೀ ಸರ್ವಸಾಕ್ಷಿಣೀ ।**
**ಸರ್ವಾತ್ಮಿಕಾ ಸರ್ವಸೌಖ್ಯದಾತ್ರೀ ಸರ್ವವಿಮೋಹಿನೀ ॥**

### ೯. ಓಂ ಸರ್ವಾನವದ್ಯಾಯೈ ನಮಃ ।

ಸರ್ವಾನವದ್ಯಾ। ಸರ್ವೈರ್ಜ್ಞಾನೈಶ್ವರ್ಯಾದಿಗುಣೈರನವದ್ಯಾ । ಅವದ್ಯಾ ನಾಮ ವಿದ್ಯಯಾ ಹೀನಾ ಜಡಪ್ರಕೃತಿಃ ಮಿಥ್ಯಾ ಬಾಧ್ಯಮಾನತ್ವಾತ್ । ತದ್ವಿಲಕ್ಷಣಾ ಸತ್ಯಜ್ಞಾನಾನಂದರೂಪತ್ವಾದನವದ್ಯಾ ।

### ೧೦. ಓಂ ಸರ್ವಾಂಗಸುಂದರ್ಯೈ ನಮಃ ।

ಸರ್ವಾಂಗಸುಂದರೀ । ಸರ್ವಾಣಿ ಚ ತಾನಿ ಅಂಗಾನಿ ಚ ಅವಯವಾಃ ಶಿರಃಪಾಣ್ಯಾದಯಃ; ತೇಷ್ವನ್ಯೂನಾನತಿರಿಕ್ತಭಾವವತ್ತ್ವಾತ್ ಯಥಾ ಸಾಮುದ್ರಿಕಲಕ್ಷಣಂ ತದ್ವತ್ತ್ವೇನ ಸರ್ವಾಂಗಸುಂದರೀ । ಅಥವಾ ಸರ್ವೇಷಾಮಂಗೇಷು ಶರೀ

---

೯. ಜ್ಞಾನ ಐಶ್ವರ್ಯ ಮುಂತಾದ ಸಮಸ್ತ ಗುಣಗಳಿಂದ ನಿತ್ಯಜ್ಞಾನಾನಂದ ಸ್ವರೂಪಳಾದವಳು. ಅವದ್ಯಾಶಬ್ದಕ್ಕೆ ಮಿಥ್ಯಾರೂಪವೂ ವಿದ್ಯಾಹೀನವೂ ಆದ ಜಡ ಪ್ರಕೃತಿಯು ಅರ್ಥವಾಗುವುದು, ಅನವದ್ಯಾ ಎಂಬ ಶಬ್ದವು ಅದಕ್ಕೆ ವಿರುದ್ಧವಾದ ನಿತ್ಯ ಜ್ಞಾನಾನಂದ ಸ್ವರೂಪವನ್ನು ಬೋಧಿಸುತ್ತಿದೆ. ಅಥವಾ ಸರ್ವ ಜನರಿಗೆ ಇಷ್ಟಾರ್ಥಗಳನ್ನು ಪ್ರದಾನಮಾಡುವವಳಾಗಿ ಸ್ತುತ್ಯಳಾದವಳು. ನ ಅವದ್ಯಾ, ಸರ್ವೈಃ ಅನವದ್ಯಾ, ಅಥವಾ ಸರ್ವೇಷಾಂ + ಅನವದ್ಯಾ ಎಂದು ವಿಗ್ರಹವು.

೧೦. ಶಿರಸ್ಸು, ಪಾಣಿ ಮುಂತಾದ ಸರ್ವಾವಯವಗಳಲ್ಲಿ ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿರುವ ಸಕಲ ಲಕ್ಷಣಗಳು ನ್ಯೂನ–ಅಧಿಕ ಭಾವಗಳಿಲ್ಲದೆ ತುಂಬಿರುವುದರಿಂದ ಸರ್ವ ಅವಯವಗಳಲ್ಲಿ ಸುಂದರಿಯಾಗಿರುವಳು. ಅಥವಾ

ತೇಷು ಬ್ರಹ್ಮಸ್ವರೂಪತಯಾ ಅತ್ಯಂತಪ್ರೇಮವಿಷಯತ್ವೇನ ಸುಂದರಪದಾರ್ಥವದವಿನಾಭಾವವಾಂಛಾವಿಷಯತ್ವಾತ್ತಥಾ।

## ೧೧. ಓಂ ಸರ್ವಸಾಕ್ಷಿಣ್ಯೈ ನಮಃ ।

ಸರ್ವಸಾಕ್ಷಿಣೀ। ಸರ್ವೇಷಾಂ ಜಡಾನಾಂ ಕಾರ್ಯಾಣಾಂ ಸ್ಫೂರ್ತ್ಯಾಧಾಯಕತ್ವೇನ ಪ್ರಕಾಶಶಕ್ತಿರ್ಃ ತಥಾ। ಸರ್ವಂ ಸಾಕ್ಷಾದೀಕ್ಷತ ಇತಿ ವಾ ತಥಾ ।

## ೧೨. ಓಂ ಸರ್ವಾತ್ಮಿಕಾಯೈ ನಮಃ ।

ಸರ್ವಾತ್ಮಿಕಾ । ಸರ್ವೇಷಾಂ ಆತ್ಮಸ್ವರೂಪತ್ವಾತ್ "ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ। ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಗೀಯತೇ" ಇತಿ ವಚನಾತ್ತಥಾ ।

---

ಸರ್ವಪ್ರಾಣಿಗಳ ಶರೀರಗಳಲ್ಲಿ ಅತಿ ಪ್ರೇಮ ವಿಷಯವಾದ ಬ್ರಹ್ಮರೂಪದಿಂದ ಸುಂದರವಾದ ಒಂದು ವಸ್ತುವಿನಂತೆ ಎಲ್ಲರ ಆದರ ವಿಷಯಳಾಗಿರುವವಳು. ಸರ್ವಾಣಿ ಚ ತಾನಿ ಅಂಗಾನಿ ಚ, ತೇಷು ಸುಂದರೀ, ಅಥವಾ ಸರ್ವೇಷಾಂ ಅಂಗೇಷು ಸುಂದರೀ ಎಂದು ವಿಗ್ರಹವು.

೧೧. ಸರ್ವ ಜಡವಸ್ತುಗಳಿಗೆ ಸ್ಫೂರ್ತಿಯನ್ನು ಕೊಡುವ ಚೈತನ್ಯ ರೂಪದಿಂದ ಪ್ರಕಾಶವನ್ನು ಕೊಡುವವಳು, ಅಥವಾ ಸಮಸ್ತವನ್ನು ಪ್ರತ್ಯಕ್ಷವಾಗಿ ನೋಡುವವಳು. ಸರ್ವೇಷಾಂ ಸಾಕ್ಷಿಣೀ, ಅಥವಾ ಸರ್ವಂ ಸಾಕ್ಷಾತ್ + ಈಕ್ಷತ ಇತಿ ಎಂದು ವಿಗ್ರಹವು.

೧೨. ಸರ್ವ ವಸ್ತುಗಳಿಗೆ ಆತ್ಮಸ್ವರೂಪಳಾಗಿರುವಳು. "ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ। ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಗೀಯತೇ" ಎಂಬ ವಚನವು ಆತ್ಮನಿಗೆ ವ್ಯಾಪಕವೂ ನಿತ್ಯವೂ ಚೇತನವೂ ಆದ ಶುದ್ಧ ಸ್ವರೂಪವನ್ನು ಪ್ರತಿಪಾದಿಸುತ್ತದೆ. ಸರ್ವ ಪ್ರಾಣಿಗಳಿಗೆ ಅಂತಹ ಪರಬ್ರಹ್ಮ ವಸ್ತುವು ಆತ್ಮರೂಪವಾಗಿರುವುದು. ಸರ್ವೇಷಾಂ + ಆತ್ಮಾ ಸರ್ವಾತ್ಮಿಕಾ ಎಂದು ವಿಗ್ರಹವು.

## ೧೩. ಓಂ ಸರ್ವಸೌಖ್ಯದಾತ್ರ್ಯೈ ನಮಃ ।

**ಸರ್ವಸೌಖ್ಯದಾತ್ರೀ । ಸುಖಿನಃ ಭಾವಃ ಸೌಖ್ಯಂ ಸರ್ವಾಣಿ ಚ ತಾನಿ ಪ್ರಿಯಮೋದಪ್ರಮೋದಾನಂದ ಶಬ್ದವಾಚ್ಯಾನಿ । ಇಷ್ಟದರ್ಶನಜನ್ಯಂ ಸುಖಂ ಪ್ರಿಯಂ,ತಲ್ಲಾಭಜನ್ಯಂ ಮೋದಃ। ತದನುಭವಜನ್ಯಂ ಪ್ರಮೋದಃ । ಆನಂದಃ ಸಮಷ್ಟಿಃ। ಜೀವಃ ಭೋಕ್ತಾ । ತಾನಿ ದದಾತೀತಿ ತಥಾ । ಸರ್ವಪ್ರಕಾರೈಃ ಸ್ಮರಣಾದಿಭಿಃ ಸೌಖ್ಯಂ ದದಾತೀತಿ ವಾ । ಸರ್ವೇಷಾಂ ಆಬ್ರಹ್ಮಸ್ತಂಬಪರ್ಯಂತಾನಾಂ ಯಥಾಕರ್ಮೋಪಾಸನಂ ಪ್ರತ್ಯಕ್ಷೇಣ ದೃಶ್ಯಮಾನಂ ಜ್ಞಾನೈಶ್ವರ್ಯಾದಿಸಹಿತಂ ಸುಖಂ ದದಾತೀತಿ ವಾ ತಥಾ । "ಏಷ ಹ್ಯೇವಾನಂದಯಾತಿ" ಇತಿ ಶ್ರುತೇಃ ।**

---

೧೩. ಸುಖಗಳು ಅನೇಕವಿಧವಾಗಿವೆ. ಇಷ್ಟ ವಸ್ತು ದರ್ಶನದಿಂದ ಉಂಟಾಗುವ ಪ್ರಿಯವೆಂಬಸುಖವು ಒಂದು, ಅದರ ಪ್ರಾಪ್ತಿಯಿಂದ ಆಗುವ ಮೋದವು ಮತ್ತೊಂದುಬಗೆಯು, ಅದನ್ನು ಅನುಭವಿಸಿ ಹೊಂದಬಹುದಾದ ಪ್ರಮೋದವೆಂಬುದು ಇನ್ನೊಂದು ಬಗೆಯು. ಇವುಗಳ ಸಮಷ್ಟಿಯನ್ನು ಆನಂದವೆಂದು ಕರೆಯುವರು. ಇವುಗಳನ್ನು ಭೋಕ್ತೃಸ್ವರೂಪನಾದ ಜೀವನು ಅನುಭವಿಸುತ್ತಾನೆ. ಸಮಸ್ತ ಭೋಕ್ತೃಗಳಿಗೆ ವಿವಿಧವಾದ ಈ ಸೌಖ್ಯಗಳನ್ನು ಕೊಡುವವಳು, ಅಥವಾ ಸ್ಮರಣ ಮುಂತಾದ ಸರ್ವಪ್ರಕಾರಗಳಿಂದ ಸೌಖ್ಯವನ್ನು ಕೊಡುವವಳು, ಅಥವಾ ಆಬ್ರಹ್ಮಸ್ತಂಬಪರ್ಯಂತವಾದ ಸಕಲ ಪ್ರಾಣಿಗಳಿಗೆ ಅವುಗಳ ಕರ್ಮ–ಉಪಾಸನೆಗಳನ್ನು ಅನುಸರಿಸಿ ಜ್ಞಾನ–ಐಶ್ವರ್ಯಾದಿಗಳಿಂದ ಕೂಡಿದ ಪ್ರತ್ಯಕ್ಷ ಸುಖವನ್ನು ಕೊಡುವವಳು, ಸುಖವನ್ನು ಪ್ರದಾನ ಮಾಡುವವಳು ಎಂಬ ಅಂಶದಲ್ಲಿ "ಏಷ ಹ್ಯೇವಾನಂದಯಾತಿ" ಎಂಬ ವಚನವು ಪ್ರಮಾಣವಾಗಿದೆ. **ಸುಖಿನಃ + ಭಾವಾಃ ಸೌಖ್ಯಾನಿ, ಸರ್ವಾಣಿ ಚ ತಾನಿ ಸೌಖ್ಯಾನಿ ಚ ತಾನಿ ದದಾತೀತಿ, ಅಥವಾ ಸರ್ವೇಷಾಂ ಸೌಖ್ಯದಾತ್ರೀ ಎಂದು ವಿಗ್ರಹವು.**

## ೧೪. ಓಂ ಸರ್ವವಿಮೋಹಿನ್ಯೈ ನಮಃ ।

**ಸರ್ವವಿಮೋಹಿನೀ । ಸರ್ವಾನ್ ವಿಮೋಹಯತೀತಿ ಅನ್ಯಥಾ ಗ್ರಾಹಯತೀತಿ ವಾ ತಥಾ । "ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ, ಅನೃತೇನ ಹಿ ಪ್ರತ್ಯೂಢಾಃ" ಇತಿ ಶ್ರುತಿಸ್ಮೃತಿಭ್ಯಾಂ ಅಜ್ಞಾನಾವರಣಶಕ್ತಿಕಾರ್ಯಂ ಮೋಹನಾದಿಸತ್ತಾಪ್ರಕಾಶಾದಿಪ್ರಧಾನಾಧಿಷ್ಠಾನತ್ವೇನ ಉಪಚಾರಾತ್ ಸರ್ವಂ ಮೋಹಯತೀತ್ಯುಚ್ಯತೇ, ಅಯೋ ದಹತೀತಿವತ್ ।**

---

೧೪. ಸರ್ವರಿಗೂ ಅನ್ಯಥಾಗ್ರಹಣವೆಂಬ ಮೋಹವನ್ನು ಉಂಟುಮಾಡುವವಳು. "ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ" 'ಅನೃತೇನ ಹಿ ಪ್ರತ್ಯೂಢಾಃ" ಎಂಬ ಶ್ರುತಿಸ್ಮೃತಿಗಳಿಂದ ಮಾಯೆಯು ಆವರಣ ವಿಕ್ಷೇಪಗಳೆಂಬ ಶಕ್ತಿಯ ಮೋಹಾವಸ್ಥೆಗಳಿಗೆ ಸತ್ತಾ–ಸ್ಫೂರ್ತಿಯನ್ನು ಕೊಡುವ ಅಧಿಷ್ಠಾನಪ್ರಕಾಶರೂಪಳಾಗಿರುವಳು. ಆದುದರಿಂದ ಮೋಹಕಳೆಂದು ಔಪಚಾರಿಕವಾಗಿ ನಿರ್ದೇಶಿಸಲ್ಪಟ್ಟಿದೆ. ಲೋಕದಲ್ಲಿ ಆರೋಪಿತವಾದ ಅಗ್ನಿಯು ದಹಿಸಿದರೂ ಉಪಚಾರದಿಂದ ಲೋಹವು ಸುಡುವುದು ಎಂಬುದಾಗಿ ಹೇಳುವುದನ್ನು ಕಂಡಿದೆ. ಸರ್ವಾನ್ ವಿಮೋಹಯತಿ ಎಂದು ವಿಗ್ರಹವು.

೨೬

**ಸರ್ವಾಧಾರಾ ಸರ್ವಗತಾ ಸರ್ವಾವಗುಣವರ್ಜಿತಾ ।**
**ಸರ್ವಾರುಣಾ ಸರ್ವಮಾತಾ ಸರ್ವಭೂಷಣಭೂಷಿತಾ ॥**

**೧೫. ಓಂ ಸರ್ವಾಧಾರಾಯೈ ನಮಃ ।**

**ಸರ್ವಾಧಾರಾ। ಸರ್ವಸ್ಯಾಧಾರಾ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತಿ ಶ್ರುತೇಃ ಸರ್ವೇಷಾಂ ಹೃದಯಾನಿ ಆಧಾರಃ ಅಭಿವ್ಯಕ್ತಿ ಸ್ಥಾನಂ ಉಪಾಸನಾಯ ಯಸ್ಯಾಃ ಸೇತಿ ತಥಾ ।**

**೧೬. ಓಂ ಸರ್ವಗತಾಯೈ ನಮಃ ।**

**ಸರ್ವಗತಾ । ಸರ್ವಂ ಗಚ್ಛತೀತಿ ತಥಾ । "ಅನೇನ ಜೀವೇ ನಾತ್ಮನಾನುಪ್ರವಿಶ್ಯ" ಇತಿ ಶ್ರುತೇಃ ।**

**೧೭. ಓಂ ಸರ್ವಾವಗುಣವರ್ಜಿತಾಯೈ ನಮಃ ।**

**ಸರ್ವಾವಗುಣವರ್ಜಿತಾ । ಅವಮಾನಹೇತವಶ್ಚತೇ ಗುಣಾಶ್ಚ ತಥಾ ; ಆಧ್ಯಾತ್ಮಿಕಸಂಬಂಧೇನ ಆರೋಪಿತಾಃ ಸತ್ತ್ವಾದಯಃ**

---

೧೫. ಸರ್ವವಸ್ತುಗಳಿಗೆ ಆಧಾರಸ್ವರೂಪಳು. "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಎಂಬ ಶ್ರುತಿಯು ಸರ್ವಾಧಾರತ್ವವನ್ನು ಬೋಧಿಸುತ್ತಿದೆ. ಅಥವಾ ಸರ್ವಪ್ರಾಣಿಗಳ ಹೃದಯವು ಉಪಾಸನೆಯಲ್ಲಿ ಅಭಿವ್ಯಕ್ತಿ ಸ್ಥಾನವಾದ ಆಧಾರ ವಾಗಿ ಉಳ್ಳವಳು. ಸರ್ವಸ್ಯ + ಆಧಾರಾ ಅಥವಾ ಸರ್ವೇ ಆಧಾರಾ ಯಸ್ಯಾಃ ಸಾ ಎಂದು ವಿಗ್ರಹವು.

೧೬. ಸರ್ವವನ್ನು ಅನುಪ್ರವೇಶಿಸಿರುವವಳು. "ಅನೇನ ಜೀವೇ ನಾತ್ಮನಾನುಪ್ರವಿಶ್ಯ" ಎಂಬ ಶ್ರುತಿಯನ್ನು ಅನುಸರಿಸಿ ಸರ್ವವಸ್ತುವಿನಲ್ಲಿ ಪ್ರವೇಶವನ್ನು ತಿಳಿಯಬೇಕು. ಸರ್ವಂ + ಗಚ್ಛತೀತಿ ಎಂದು ವಿಗ್ರಹವು.

೧೭. ಅಧಮತ್ವಕ್ಕೆ ಕಾರಣಗಳಾದ ಆಧ್ಯಾಸಿಕ ತಾದಾತ್ಮ್ಯ ವೆಂಬ ಸಂಬಂಧದಿಂದ ಸಮಷ್ಟಿಯಲ್ಲಿ ಆರೋಪಿಸಲ್ಪಟ್ಟ ಸತ್ತ್ವ ಮುಂತಾದ ಗುಣ

ಸಮಷ್ಟೌ, ಅಂತಃಕರಣಧರ್ಮಾಃ ಕಾಮಾದಯಃ ವ್ಯಷ್ಟೌ; ಸರ್ವೇ ಚ ತೇ ಅವಗುಣಾಶ್ಚ ತಥಾ। ಸರ್ವಾಂತರ್ಯಾಮಿತ್ವೇನ ಸರ್ವಾನುಸ್ಯೂತತ್ವೇಽಪಿ ತತ್ತದುಪಾಧಿನಿಷ್ಠೋತ್ತಮಾಧಮ ಧರ್ಮೈಃ ನ ಸಂಬಧ್ಯತೇ। ಘಟಾದಿನಿಷ್ಠಾಕಾಶವತ್-ಕೋಶಾಂತರ್ಗತಖಡ್ಗವದ್ವಾ। "ಸೂರ್ಯೋ ಯಥಾ ಸರ್ವ ಲೋಕಸ್ಯ ಚಕ್ಷುಃ ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ। ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ"। ಇತಿ ಶ್ರುತೇಃ।

## ೧೮. ಓಂ ಸರ್ವಾರುಣಾಯೈ ನಮಃ।

ಸರ್ವಾರುಣಾ। ಸರ್ವೇಷ್ವಂಗೇಷ್ವರುಣಾ ಆರಕ್ತವತೀ। "ಅಸೌ ಯಸ್ತಾಮ್ರೋ ಅರುಣಃ" ಇತಿ ಶ್ರುತೇಃ।

---

ಗಳಿಂದಲೂ ಸೃಷ್ಟಿಯಲ್ಲಿ ಆರೋಪಿಸಲ್ಪಟ್ಟ ಕಾಮಾದಿಗುಣಗಳಿಂದಲೂ ವರ್ಜಿತಳಾದವಳು. ಸರ್ವಾಂತರ್ಯಾಮಿರೂಪದಿಂದ ಸರ್ವೋಪಾಧಿಗಳಲ್ಲಿ ಅಂತರ್ಗತಳಾಗಿದ್ದರೂ ಉಪಾಧಿಯಲ್ಲಿರುವ ಉತ್ತಮ–ಮಧ್ಯಮ–ಅಧಮಭಾವಕ್ಕೆ ಕಾರಣವಾದ ಧರ್ಮಗಳಿಂದ ಸಂಪರ್ಕ ಹೊಂದುವುದಿಲ್ಲ. ಘಟದ ಒಳಗಿನ ಆಕಾಶ, ಒರೆಯ ಒಳಗಿನ ಖಡ್ಗದಂತೆ ಹೊರಗಿನ ಉಪಾಧಿ ಧರ್ಮಗಳು ಅಂತರ್ಯಾಮಿ ವಸ್ತುವನ್ನು ಸ್ಪರ್ಶಿಸಲಾರವು. "ಸೂರ್ಯೋ ಯಥಾ ಸರ್ವ ಲೋಕಸ್ಯ ಚಕ್ಷುಃ ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ। ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" ಎಂಬ ವಚನವನ್ನು ಇದಕ್ಕೆ ಆಧಾರವೆಂದು ಅರಿಯಬೇಕು. ಅವಮಾನಹೇತವಶ್ಚ + ತೇ ಗುಣಾಶ್ಚ, ತೈಃ + ವರ್ಜಿತಾ ಎಂದು ವಿಗ್ರಹವು.

೧೭. "ಅಸೌ ಯಸ್ತಾಮ್ರೋ ಅರುಣಃ" ಎಂಬ ಶ್ರುತಿವಚನಾನುಸಾರವಾಗಿ ಸಕಲ ಅವಯವಗಳಲ್ಲಿ ರಕ್ತವರ್ಣವುಳ್ಳವಳು. ಸರ್ವೇಷು + ಅರುಣಾ ಎಂದು ವಿಗ್ರಹವು.

## ೧೯. ಓಂ ಸರ್ವಮಾತ್ರೇ ನಮಃ ।

ಸರ್ವಮಾತಾ । ಸರ್ವೇಣ ಕಾರ್ಯೇಣ ಮೀಯತೇ ಅನುಮೀ
ಯತೇ ಅಭೇದೇನೇತಿ, ತಥಾ ಹಿ ಇದಂ ಜಗತ್ ಬ್ರಹ್ಮಾಭಿನ್ನಂ
ತತ್ಸತ್ತಾಸ್ಫೂರ್ತಿನಿಯತಸತ್ತಾಪ್ರಕಾಶಜ್ಞಾನವಿಷಯತ್ವಾತ್ ।
ಯಃ ಯನ್ನಿಯತಸತ್ತಾಪ್ರಕಾಶವಾನ್ ಸಃ ತದಭಿನ್ನಃ ಯಥಾ
ತಂತುಕಾರ್ಯಃ ಪಟ ಇತಿ । ಸರ್ವಾನ್ ಮಿನೋತಿ ಸ್ವಾಭೇ
ದೇನ ಜಾನಾತೀತಿ ತಥಾ ।

## ೨೦. ಓಂ ಸರ್ವಭೂಷಣಭೂಷಿತಾಯೈ ನಮಃ ।

ಸರ್ವಭೂಷಣಭೂಷಿತಾ । ಸರ್ವಾತ್ಮಕತ್ವೇನ ಯೇ ಯೇ
ಪ್ರಾಣಿನಃ ಯಾನಿ ಯಾನಿ ಭೂಷಣಾಲಂಕಾರಭೋಜನಾದೀನಿ
ಭೋಗ್ಯವಸ್ತೂನ್ಯಾತ್ಮಾರ್ಥಂ ಸಂಪಾದಯನ್ತಿ ತೇಷಾಂ
ಸರ್ವೇಷಾಂ ಪ್ರತ್ಯಕ್ತಯಾ ತೈಃ ಸರ್ವೈರ್ಭೂಷಿತಾ ಉಪ
ಕೃತೇತ್ಯರ್ಥಃ । "ಆತ್ಮನಸ್ತು ಕಾಮಾಯ ಸರ್ವಂ
ಪ್ರಿಯಂ ಭವತಿ" ಇತಿ ಶ್ರುತೇಃ । ಅಥವಾ ಸರ್ವದೇವಾತ್ಮಕ

---

೧೯. ಸಮಸ್ತ ಕಾರ್ಯಗಳಿಂದ ಕಾರಣರೂಪಳಾಗಿ ಊಹಿಸಲ್ಪಡು ವವಳು. ತಂತುವಿನಿಂದ ಹುಟ್ಟಿರುವ ಪಟವು ತಂತುವಿನ ಸತ್ತಾ-ಪ್ರಕಾಶ ಗಳಿಗೆ ನಿಯತವಾಗಿರುವುದರಿಂದ ತಂತುವಿನೊಡನೆ ಏಕತತ್ತ್ವವಾಗಿರುವಂತೆ ಬ್ರಹ್ಮವಸ್ತುವಿನಿಂದ ನಿಯತಸತ್ತಾ-ಪ್ರಕಾಶಗಳನ್ನು ಹೊಂದಿರುವ ಜಗತ್ತು ಬ್ರಹ್ಮನ ಅಭೇದವನ್ನು ಹೊಂದಿರುವುದು ಎಂಬ ರೀತಿಯಲ್ಲಿ ಅನುಮಾನಕ್ಕೆ ಗೋಚರಳಾಗುವಳೆಂದು ತಿಳಿಯಬೇಕು. ಅಥವಾ ಸರ್ವರನ್ನೂ ಅಭೇದದಿಂದ ತಿಳಿಯುವವಳು. ಸರ್ವೇಣ + ಮೀಯತ ಇತಿ, ಅಥವಾ ಸರ್ವಾನ್ ಮಿನೋತಿ ಇತಿ ಎಂದು ವಿಗ್ರಹವು.

೨೦. ಸಮಸ್ತಪ್ರಾಣಿಗಳು ಅನುಭವಿಸುವ ಭೂಷಣ-ಅಲಂಕಾರ-ಭೋಜನ-ಮುಂತಾದ ಭೋಗ್ಯವಸ್ತುಗಳಿಂದ ಸರ್ವಪ್ರಾಣಿಗಳ ಪ್ರತ್ಯಗ್ರೂಪ ಳಾದ ದೇವಿಯು ಉಪಕರಿಸಲ್ಪಡುವುದರಿಂದ ಎಲ್ಲ ಭೂಷಣಗಳಿಂದ ಭೂಷಿ ಸಲ್ಪಟ್ಟವಳು. "ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ" ಎಂಬ ಶ್ರುತಿಯು ಸಮಸ್ತಭೋಗ್ಯವಸ್ತುಗಳನ್ನು ಆತ್ಮವಸ್ತುವಿಗೋಸ್ಕರ ಉಪಯೋಗಿ

ತ್ವೇನ ಸರ್ವಭಕ್ತಜನಸ್ಯ ಸ್ವಸ್ವೇಷ್ಟದೇವತಾಪ್ರೀತ್ಯರ್ಥಂ ಭೂಷಣಭೂಷಿತತ್ವೇನ ತಥಾ । ಅಥವಾ ಸರ್ವೈರ್ಭಕ್ತಜನೈಃ ತತ್ತದವಯವೇಷು ಭೂಷಣೈರಾರೋಪಿತಾ; ಸ್ವಸ್ಯಾಃ ಮಹಾ ರಾಜ್ಞೀತ್ವೇನ ಅಸಂಗೋದಾಸೀನಸ್ವಭಾವತ್ವಾದಿತಿ ಭಾವಃ । ಯದ್ವಾ ಸರ್ವದೇಶಕಾಲಲೋಕೇಷು ಭೂಷಣೈಃ ತತ್ರ ತತ್ರ ಭವೈಃ ಉಚ್ಚಾವಚೈಃ ಭೂಷಣೈರಾರೋಪಿತಾ ಹಸ್ತ್ಯಶ್ವಾದಿ ದೇಹೋಪಾಧಿಕಾ ಸತೀ ತತ್ತದೀಯಾಲಂಕಾರಾದಿಷು ಜುಗುಪ್ಸಾರಹಿತೇತ್ಯರ್ಥಃ। ಭೂಷಯಂತಿ ಸರ್ವೋತ್ತಮತ್ವೇನ ಪ್ರತಿಪಾದಯಂತೀತಿ ಭೂಷಣಾನಿ ವೇದಾಂತಮಹಾವಾಕ್ಯಾನಿ; ಸರ್ವೈಃ ಸಮಸ್ತೈಃ ಗತಿಸಾಮಾನ್ಯಾತ್ ಏಕತಾತ್ಪರ್ಯೇಣ ಭೂಷಿತಾ ಲಕ್ಷಣಯಾ ಪರ್ಯವಸಿತಾ ಸಮನ್ವಿತಾ ವೇತ್ಯರ್ಥಃ ।

ಇತಿ ತ್ರಿಶತ್ಯಾಂ ವಿದ್ಯಾಯಾಂ ಸಪ್ತಮಾಕ್ಷರನಾಮ ವ್ಯಾಖ್ಯಾಯಾಂ ಸಕಾರವರ್ಣಪ್ರಕಾಶಃ ಸಪ್ತಮಃ

---

ಸುತ್ತಾರೆಂದು ಹೇಳುತ್ತಿದೆ. ಅಥವಾ ಸಕಲದೇವತಾಸ್ವರೂಪಳಾದ್ದರಿಂದ ತಮ್ಮ ತಮ್ಮ ಇಷ್ಟದೇವತೆಗೆ ಭಕ್ತರು ಅರ್ಪಿಸುವ ಆಭರಣಗಳಿಂದ ಅಲಂಕರಿ ಸಲ್ಪಟ್ಟವಳು. ಅಥವಾ ಸಮಸ್ತಭಕ್ತಜನರಿಂದ ಆಯಾಯ ಅವಯವಗಳಲ್ಲಿ ಭೂಷಣ ಶೋಭೆಯುಳ್ಳವಳಂತೆ ಆರೋಪಿಸಲ್ಪಟ್ಟವಳು. ವಾಸ್ತವಿಕವಾಗಿ ಅಸಂ ಗೋದಾಸೀನ ಸ್ವಭಾವಳಾದ್ದರಿಂದ ಭೂಷಣಾದಿ ಸಂಪರ್ಕವು ದೇವಿಯಲ್ಲಿ ಇರುವುದಿಲ್ಲ. ಅಥವಾ ಸರ್ವದೇಶಕಾಲಗಳಲ್ಲಿರುವ ಉಪಾಧಿಗಳಿಂದ ಕೂಡಿದ ವಳಾಗಿ ಆಯಾಯ ಹಸ್ತಿಅಶ್ವ ಮುಂತಾದುವುಗಳ ಶರೀರಗಳಿಗೆ ಯೋಗ್ಯವಾದ ನಾನಾವಿಧದ ಆಭರಣಗಳಿಂದ ಜುಗುಪ್ಸೆ ಪಡದೆ ಭೂಷಿಸಲ್ಪಟ್ಟವಳು. ಅಥವಾ ಸರ್ವೋತ್ತಮರೂಪದಿಂದ ಪರಬ್ರಹ್ಮವಸ್ತುವನ್ನು ಪ್ರತಿಪಾದಿಸುವ ವೇದಾಂತ ಮಹಾವಾಕ್ಯಗಳು ಭೂಷಣಪ್ರಾಯವಾದುವುಗಳು. ಅಂತಹ ಸಕಲವೇದಾಂತ ಮಹಾವಾಕ್ಯಗಳಿಂದ ಏಕತಾತ್ಪರ್ಯದಿಂದ ಸಮನ್ವಯ ಹೊಂದಿದವಳು. ಸರ್ವಾಣಿ ಚ ತಾನಿ ಭೂಷಣಾನಿ ಚ, ತೈಃ ಭೂಷಿತಾ, ಅಥವಾ ಭೂಷಣೈ, ಭೂಷಿತಾ ಸರ್ವೈರ್ಭೂಷಣಭೂಷಿತಾ, ಅಥವಾ ಸರ್ವೇಷು ಭೂಷಣಭೂಷಿತಾಃ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮವ್ಯಾಖ್ಯಾನದಲ್ಲಿ ಸಪ್ತಮಪ್ರಕಾಶವು ಸಮಾಪ್ತವು.

## ೨೭

**ಕಕಾರಾರ್ಥಾ ಕಾಲಹಂತ್ರೀ ಕಾಮೇಶೀ ಕಾಮಿತಾರ್ಥದಾ ।**
**ಕಾಮಸಂಜೀವನೀ ಕಲ್ಯಾ ಕಠಿನಸ್ತನಮಂಡಲಾ ॥**

### ೧. ಓಂ ಕಕಾರಾರ್ಥಾಯೈ ನಮಃ ।

ಕಕಾರಾರ್ಥಾ । ಕಂ ಬ್ರಹ್ಮ ಇತಿ ಶ್ರುತ್ಯಾ ಕಕಾರಸ್ಯ ಬ್ರಹ್ಮಾರ್ಥಕತ್ವೇನ ತದ್ವ್ಯತಿರಿಕ್ತಸ್ಯಾತದರ್ಥಸ್ಯ ಬಾಧಿತತ್ವಾತ್ ।

### ೨. ಓಂ ಕಾಲಹಂತ್ರ್ಯೈ ನಮಃ ।

ಕಾಲಹಂತ್ರೀ। ಅಜಪಾರೂಪೇಣ ಪ್ರಾಣಾಪಾನನಾಮಕಚಂದ್ರಸೂರ್ಯನಿಯಮನೇ ಪುರುಷಾಣಾಂ ನಿಯಮಿತಪರಿಮಿತಾಯುಃ ಸ್ವರೂಪೈಕವಿಂಶತಿ ಷಟ್ ಶತಾಧಿಕಸಹಸ್ರ ಸಂಖ್ಯಾಕ-ನಿರ್ಗಮನರೂಪೇಣ ಕ್ಷಪಯಂತಿ ಅವಶೇಷಾಯುಷೋ

---

೧. ಕಕಾರವೆಂಬ ಪದದ ಅರ್ಥಸ್ವರೂಪಳಾದವಳು. "ಕಂ ಬ್ರಹ್ಮ" ಎಂಬ ಶ್ರುತಿಯು ಕ ಶಬ್ದಕ್ಕೆ ಬ್ರಹ್ಮವಸ್ತುವೆಂಬ ಅರ್ಥವನ್ನು ಬೋಧಿಸುತ್ತಿದೆ. ಬ್ರಹ್ಮವ್ಯತಿರಿಕ್ತವಾದ ಸಮಸ್ತಪ್ರಪಂಚವೂ ಅನರ್ಥರೂಪವಾದುದು. ಕಕಾರಸ್ಯ ಅರ್ಥಃ ಯಸ್ಯಾಃ ಸಾ ಎಂದು ವಿಗ್ರಹವು.

೨. ಕಾಲವನ್ನು ನಾಶಮಾಡುವವಳು. ಅಜಪಾಮಂತ್ರೋಪಾಸನ ರೂಪದಿಂದ ಪ್ರಾಣ-ಅಪಾನ ವೆಂಬ ಚಂದ್ರಸೂರ್ಯರನ್ನು ನಿಗ್ರಹಿಸಲು ನಿಯಮಿತವಾದ ಒಂದು ಸಾವಿರದ ಆರು ನೂರು ಇಪ್ಪತ್ತೊಂದು ಸಂಖ್ಯೆಯ ಪರಿಮಿತ ಆಯುಃಸ್ವರೂಪವು ವೃದ್ಧಿಹೊಂದಿ ಹಾಗೆ ಯುಗ-ಕಲ್ಪಾದಿ ರೂಪ ವಾದ ಕಾಲವು ವೃದ್ಧಿ ಹೊಂದಲಾಗಿ ಪುರುಷನಿಗೆ ಮತ್ತೆ ಮತ್ತೆ ಯೋಗಾಭ್ಯಾಸ ಪಾಟವದಿಂದ ಸಮಸ್ತ ಪ್ರಾಣ-ಇಂದ್ರಿಯಗಳ ಜಯದಿಂದ ವೃತ್ತಿಯು ಲಯ ವಾದರೆ ಮನೋನ್ಮನೀ ಎಂಬ ಅವಸ್ಥೆಯು ಪ್ರಾಪ್ತವಾಗುವುದು. "ಪೃಥಿವ್ಯ

ಯುಗಕಲ್ಪಾದ್ಯವಿಶಿಷ್ಟಸ್ಯ ವೃದ್ಧೌ ಪುನಃ ಸಂಯಮನೇ ತಥಾ ತಥಾ ವೃದ್ಧೌ ಸಂಯುಂಜಾನಸ್ಯ ಸರ್ವಪ್ರಾಣೇಂದ್ರಿಯಸ್ಯ ವೃತ್ತಿಲಯೇ ಮನೋನ್ಮನ್ಯವಸ್ಥಾ ನಿಷ್ಪದ್ಯತೇ । ತಥಾ ಚ ಶ್ರುತಿಃ—“ ಪೃಥಿವ್ಯಪ್ತೇಜೋಽನಿಲಖೇ ಸಮುತ್ಥಿತೇ ಪಂಚಾತ್ಮಕೇ ಯೋಗಗುಣೇ ಪ್ರವೃತ್ತೇ । ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೊಗಾಗ್ನಿಮಯಂ ಶರೀರಮ್ ” ಇತಿ । “ ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ” ಇತಿ ಚ । ತಥಾ ಚ ತದಾನೀಮಾವಿರ್ಭೂತಬ್ರಹ್ಮಸ್ವರೂಪೇಣ “ ತತಃ ಸಂವತ್ಸರೋಽಜಾಯತ ” ಇತಿ ಶ್ರುತ್ಯಾ ಕ್ರಿಯಾಶಕ್ತ್ಯಾತ್ಮಕಕಾಲೋತ್ಪತ್ತಿಶ್ರವಣಾತ್ ತಸ್ಮಿನ್ ಬ್ರಹ್ಮಣ್ಯೇವ ಲಯೇ ಕಾಲಂ ಹಂತಿ ನಾಶಯತೀತಿ ತಥಾ ನಾಮನಿರ್ವಚನಂ ಯುಕ್ತಂ ವಕ್ತುಮಿತಿ ಭಾವಃ ।

## ೩. ಓಂ ಕಾಮೇಶ್ಯೈ ನಮಃ ।

ಕಾಮೇಶೀ । ಕಾಮಾನಾಂ ಭೋಗ್ಯಪದಾರ್ಥಾನಾಂ ಯಥಾದೃಷ್ಟಂ ಈಷ್ಟೇ ಪ್ರೇರಯತೀತಿ ತಥಾ ।

---

ಪ್ತೇಜೋಽನಿಲಖೇ ಸಮುತ್ಥಿತೇ ಪಂಚಾತ್ಮಕೇ ಯೋಗಗುಣೇ ಪ್ರವೃತ್ತೇ । ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಮ್ ” “ ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ” ಎಂಬ ವಚನಗಳು ಇಂದ್ರಿಯನಿಗ್ರಹ ಪೂರ್ವಕವಾಗಿ ಮನೋನ್ಮನ್ಯವಸ್ಥಾಪ್ರಾಪ್ತಿಯಾಗಲಾಗಿ ಜರಾ–ರೋಗಾದ್ಯುಪದ್ರವಗಳ ಶೂನ್ಯತೆಯನ್ನೂ ಹರ್ಷ–ಶೋಕಾದಿ ವಿಗಮವನ್ನೂ ಬೋಧಿಸುತ್ತವೆ. ಆಗ ಬ್ರಹ್ಮಸ್ವರೂಪವು ಆವಿರ್ಭವಿಸುವುದರಿಂದ ಬ್ರಹ್ಮಸ್ವರೂಪದಿಂದ ಸಂವತ್ಸರರೂಪವಾದ ಕಾಲವು ಉತ್ಪತ್ತಿ–ಲಯಗಳನ್ನು ಹೊಂದುವುದರಿಂದ ಕ್ರಿಯಾಶಕ್ತಿ ಸ್ವರೂಪವಾದ ಕಾಲವನ್ನು ಲಯಮಾಡುವಳೆಂದು ಈ ನಾಮದ ತಾತ್ಪರ್ಯಾರ್ಥವು. ಕಾಲಂ + ಹಂತಿ ಎಂದು ವಿಗ್ರಹವು.

೩. ಭೋಗ್ಯವಸ್ತುಗಳೆಂಬ ಕಾಮಗಳನ್ನು ಅದೃಷ್ಟಾನುಸಾರವಾಗಿ ಪ್ರೇರಿಸುವವಳು. ಕಾಮಾನ್ + ಈಷ್ಟೇ ಎಂದು ವಿಗ್ರಹವು.

## ೪. ಓಂ ಕಾಮಿತಾರ್ಥದಾಯೈ ನಮಃ ।

ಕಾಮಿತಾರ್ಥದಾ । ಕಾಮಿತಾನರ್ಥಾನ್ ದದಾತೀತಿ ತಥಾ । ಆಪ್ತಕಾಮ ಇತಿ ಶ್ರುತೇಃ । ಸಂಸಾರದಶಾಯಾಮಾವೃತಾನಂದಸ್ಯ ಅನಾಪ್ತವದವಭಾಸಮಾನಸ್ಯ ಆತ್ಯಂತಿಕಸುಖಾತ್ಮಿಕಾ ಮುಕ್ತಿರ್ಮೇ ಸ್ಯಾದಿತಿ ಕಾಮ್ಯಮಾನತ್ವಾದಾತ್ಮನಃ ಕಾಮಿತತ್ವಮ್ । ಕಾಮಿತಶ್ಚಾಸಾವರ್ಥಶ್ಚೇತಿ ತಸ್ಯೈವ ಜ್ಞಾನಸ್ಯಾವರಣಾಭಿಭಾವಕತ್ವೇನ ಪ್ರಾಪ್ತಪ್ರಾಪ್ತಿರೂಪತಯಾ ತಂ ದದಾತಿ ಪ್ರಯಚ್ಛತೀತಿ ಪ್ರಕಾಶಸ್ವರೂಪೇಣ ಅನುಭಾವಯತೀತ್ಯರ್ಥಃ ।

## ೫. ಓಂ ಕಾಮಸಂಜೀವನ್ಯೈ ನಮಃ

ಕಾಮಸಂಜೀವನೀ । ಕಾಮಂ ಮನ್ಮಥಂ ಪರಮೇಶ್ವರನೇತ್ರಾಗ್ನಿವಿಪ್ಲುಷ್ಟಂ ಭಂಡಾಸುರಾತ್ಮನಾ ಅನೇಕಕಾಲದೇವಲೋಕವಿ

---

೪. ಕಾಮಿತವಾದ ಅರ್ಥವನ್ನು ಕೊಡುವವಳು. ಸಂಸಾರ ದಶೆಯಲ್ಲಿ ಆತ್ಮಾನಂದವು ಮುಚ್ಚಿ ಹೋಗಿರುವುದರಿಂದ ಅಪ್ರಾಪ್ತವಾದಂತೆ ತೋರುವುದು. ಮುಮುಕ್ಷು ಮಾನವನಿಗೆ ಆತ್ಮಾನಂದವು ದೊರಕಬೇಕೆಂಬ ಆಶೆಯಿರುವುದರಿಂದ ಆತ್ಮವಸ್ತುವು ಕಾಮಿತವಾಗುವುದು. ಅದರ ಆವರಣವನ್ನು ನಾಶಪಡಿಸಿ ಆತ್ಮಾನಂದವನ್ನು ಪ್ರಕಾಶಪಡಿಸುವುದರಿಂದ ಅಪ್ರಾಪ್ತವಾದ ಆತ್ಮಾನಂದವೆಂಬ ಕಾಮಿತವಸ್ತುವನ್ನು ಪ್ರಕಾಶಪಡಿಸಿ ಅನುಭವಿಸುವಂತೆ ಮಾಡುವಳು. "ಆಪ್ತಕಾಮಃ" ಎಂಬ ಶ್ರುತಿಯು ಆತ್ಮಸ್ವರೂಪಜ್ಞಾನಿಯು ಆಪ್ತಕಾಮನಾಗಿರುವನೆಂದು ವರ್ಣಿಸುವುದು. ಕಾಮಿತಶ್ಚಾಸೌ ಅರ್ಥಶ್ಚ ತಂ ದದಾತೀತಿ ಎಂದು ವಿಗ್ರಹವು.

೫. ಪರಮೇಶ್ವರನ ತೃತೀಯನೇತ್ರಾಗ್ನಿಯಿಂದ ಭಸ್ಮವಾಗಿದ್ದ, ಮತ್ತು ಭಂಡಾಸುರರೂಪದಿಂದ ಅನೇಕಕಾಲದ ವರೆಗೆ ದೇವಲೋಕಕ್ಕೆ ಶತ್ರುವಾಗಿದ್ದ ಮನ್ಮಥನನ್ನು ಕಾಮಶಾಸ್ತ್ರಪ್ರಯೋಗಸಮಯದಲ್ಲಿ ರತಿದೇವಿಯ ಪ್ರಾರ್ಥನೆಯಂತೆ ನಮ್ರವಾದ ಪೂರ್ವಕಾಯದಿಂದಲೂ ತಪಶ್ಚರ್ಯೆ ಮುಂತಾದ ಪುಣ್ಯ

ಪಕ್ಷಂ ಕಾಮಶಾಸ್ತ್ರಪ್ರಯೋಗಸಮಯೇ ರತಿದೇವೀಪ್ರಾರ್ಥನ ಸಮಿಚೀನತದೀಯಪೂರ್ವಕಾಯಂ ತಪಶ್ಚರ್ಯಾದಿಪರಿಪಾಕ ಫಲಭೂತಂ ಕರುಣಾರಸ ಪೂರಿತಾಪಾಂಗಾವಲೋಕನೇನ ಸಂಜೀವಯತಿ ಸಪ್ರಾಣಂ ಕೃತ್ವಾ ತಸ್ಮೈ ವರಾದಿ ಪ್ರಯಚ್ಛತಿ ತೇನ ತಂ ಹರ್ಷಯತೀತಿ ತಥಾ ।

೬. ಓಂ ಕಲ್ಯಾಯೈ ನಮಃ ।

ಕಲ್ಯಾ । ಕಲಯಿತುಂ ಧ್ಯಾತುಂ ಯೋಗ್ಯಾ । ಅಥವಾ ಸರ್ವೋತ್ತಮದೇವತ್ವೇನ ಧ್ಯಾತುಂ ಯೋಗ್ಯಾ ಕಲ್ಯಾ । ಕಲೇಃ ಕಾಮಧೇನುತ್ವೇನ ಯಥಾ ವಾಂಛಿತಾರ್ಥಕಾರಣಮ್।

೭. ಓಂ ಕಠಿನಸ್ತನಮಂಡಲಾಯೈ ನಮಃ ।

ಕಠಿನಸ್ತನಮಂಡಲಾ । ಸ್ತನಯೋಃ ಮಂಡಲೇ ಆದಿಮಭಾಗೌ ಸಾಂತಃಪ್ರದೇಶೌ ಕಠಿನೇ ಅಪ್ರಕಂಪೇ ಅತಿಸ್ಥಿರೇ ವಾ ಯಸ್ಯಾಃ ತಥಾ ।

---

ಪರಿಪಾಕದಿಂದಲೂ ಕೂಡಿರುವುದರಿಂದ ಕರುಣಾ ರಸದಿಂದ ತುಂಬಿದ ಕಟಾಕ್ಷ ವೀಕ್ಷಣದಿಂದ ಸಂಜೀವನಮಾಡಿ ವರ ಮುಂತಾದುವುಗಳನ್ನು ಕೊಡುವವಳು. ಕಾಮಂ ಸಂಜೀವಯತಿ ಎಂದು ವಿಗ್ರಹವು.

೬. ಧ್ಯಾನಿಸಲು ಅರ್ಹಳಾದವಳು. ಅಥವಾ ದೇವತೆಗಳಲ್ಲಿ ಉತ್ತಮ ಳೆಂದು ಧ್ಯಾನಿಸಲು ಯೋಗ್ಯಳು. ಕಲಿ ಎಂಬ ಧಾತುವು ಕಾಮಧೇನುವಿ ನಂತೆ ಬೇಕಾದ ಅರ್ಥಗಳನ್ನು ಬೋಧಿಸುವುದು. ಕಲಯಿತುಂಯೋಗ್ಯಾ ಎಂದು ವಿಗ್ರಹವು.

೭. ಚಲನವಿಲ್ಲದ ಅಥವಾ ಅತಿಸ್ಥಿರವಾದ ಮಂಡಲಾಕಾರವಾದ ಸ್ತನ ಗಳ ಪ್ರದೇಶವುಳ್ಳವಳು. ಕಠಿನೇ + ಸ್ತನಯೋರ್ಮಂಡಲೇ ಯಸ್ಯಾಃ ಎಂದು ವಿಗ್ರಹವು.

೨೮

**ಕರಭೋರುಃ ಕಲಾನಾಥಮುಖೀ ಕಚಜಿತಾಂಬುದಾ।**
**ಕಟಾಕ್ಷಸ್ಯಂದಿಕರುಣಾ ಕಪಾಲಿಪ್ರಾಣನಾಯಿಕಾ॥**

**೮. ಓಂ ಕರಭೋರವೇ ನಮಃ।**

**ಕರಭೋರುಃ। ಕರಭ ಇವ ಊರೂ ಯಸ್ಯಾಃ ಸಾ ತಥಾ। "ಮಣಿಬಂಧಾದಾಕನಿಷ್ಠಂ ಕರಸ್ಯ ಕರಭೋ ಬಹಿಃ" ಇತಿ ಪ್ರಮಾಣಾದಿತಿ ಭಾವಃ।**

**೯. ಓಂ ಕಲಾನಾಥಮುಖ್ಯೈ ನಮಃ।**

**ಕಲಾನಾಥಮುಖೀ। ಕಲಾಃ ಚತುಃಷಷ್ಟಿಕಲಾಃ ನಾಥಯತಿ ಪ್ರೇರಯತೀತಿ ಕಲಾನಾಥಃ। "ನಿಶ್ವಸಿತಮೇತದೃಗ್ವೇದೋ ಯಜುರ್ವೇದಃ ಸಾಮವೇದಃ" ಇತ್ಯಾದಿ ಶ್ರುತೇಃ। ಶಾಸ್ತ್ರಯೋನಿತ್ವಾದಿತಿ ನ್ಯಾಯಾಚ್ಚ। ತಾದೃಶಮುಖಂ ವದನಂ ಯಸ್ಯಾಃ ಸೇತಿ ತಥಾ। ಕಲಾನಾಥಶ್ಚಂದ್ರ ಇವ ಮುಖಂ ಯಸ್ಯಾಃ ಸಾ ಇತಿ ವಾ।**

---

೮. ಕಿರಿಬೆರಳಿನವರೆಗಿರುವ ಹಸ್ತ ಪಾರ್ಶ್ವವೆಂಬ ಕರಭದಂತೆ ತೊಡೆಗಳುಳ್ಳವಳು. "ಮಣಿಬಂಧಾದಾಕನಿಷ್ಠಂ ಕರಸ್ಯ ಕರಭೋ ಬಹಿಃ" ಎಂಬ ಕೋಶದಿಂದ ಕರಭಶಬ್ದಕ್ಕೆ ಅಂಗೈಯ ಪಾರ್ಶ್ವವೆಂಬ ಅರ್ಥವು ಲಭಿಸುವುದು. ಕರಭ ಇವ ಊರೂ ಯಸ್ಯಾಃ ಎಂದು ವಿಗ್ರಹವು.

೯. ಅರವತ್ತನಾಲ್ಕು ಕಲೆಗಳೆಂಬ ಸಮಸ್ತ ವಿದ್ಯೆಗಳನ್ನು ಪ್ರೇರೇಪಿಸುವ ಮುಖವುಳ್ಳವಳು. "ಶಾಸ್ತ್ರಯೋನಿತ್ವಾತ್" ಎಂಬ ಸೂತ್ರೋಕ್ತನ್ಯಾಯ, "ನಿಶ್ವಸಿತಮೇತದೃಗ್ವೇದೋ ಯಜುರ್ವೇದಃ ಸಾಮವೇದಃ" ಮುಂತಾದ ಶ್ರುತಿಗಳಿಂದ ವೇದಾದಿಗಳಿಗೆ ಪರಬ್ರಹ್ಮವಸ್ತುವು ಕಾರಣವೆಂದು ತಿಳಿಯುವುದು. ಅಥವಾ ಹದಿನಾರು ಕಲಾಧಿಪತಿಯಾದ ಚಂದ್ರನಂತೆ ರಾಜಿಸುವ ಮುಖವುಳ್ಳವಳು. ಕಲಾಃ ನಾಥಯತೀತಿ ಕಲಾನಾಥಂ, ತಾದೃಶಂ ವದನಂ ಯಸ್ಯಾಃ ಅಥವಾ ಕಲಾನಾಂ + ನಾಥಃ ತದ್ವತ್ ವದನಂ ಯಸ್ಯಾಃ ಎಂದು ವಿಗ್ರಹವು.

## ೧೦. ಓಂ ಕಚಜಿತಾಂಬುದಾಯೈ ನಮಃ ।

ಕಚಜಿತಾಂಬುದಾ । ಕಚೇನ ಕೇಶಭಾರೇಣ ಕಬರೇಣ ವೇತ್ಯರ್ಥಃ । ಜಿತಾಃ ಅಧರೀಕೃತಾಃ ಅಂಬುದಾ ಮೇಘಾ ಯಯಾ ಸಾ ತಥಾ। ಮೇಘ ಮಂಡಲಾಪೇಕ್ಷಯಾ ಊರ್ಧ್ವಗಾಮಿ ಶಿರೋರುಹಭಾರಾ ವ್ಯೋಮಕೇಶೀತಿ ಭಾವಃ। ಅಥವಾ ಕೇಶವೃತ್ತಿ ನೀಲರೂಪೇಣ ಸಾದೃಶ್ಯಾಸಹತ್ವೇನ ಧಿಕ್ಕೃತಾಃ ಮೇಘಾಃ ಯಯಾ ಸಾ ತಥಾ ।

## ೧೧. ಓಂ ಕಟಾಕ್ಷಸ್ಯಂದಿಕರುಣಾಯೈ ನಮಃ ।

ಕಟಾಕ್ಷಸ್ಯಂದಿಕರುಣಾ । ಯದ್ಯಪಿ ದೀನೇಷು ಪರಿಪಾಲ್ಯತಾ ಬುದ್ಧಿರ್ದೇವಾನಾಂ ಮಹತಾಂ ಕರುಣೇತ್ಯುಚ್ಯತೇ । ತಥಾಪಿ ತಸ್ಯಾ ಆಂತರತ್ವೇನ ಅಜ್ಞಾಯಮಾನತಯಾ ತೇಷು ಭಕ್ತ್ಯಾತಿಶಯೇನ ಪ್ರವೃತ್ತ್ಯರ್ಥಂ ಸೇವಾದೌ ತದ್ವತ್ತ್ವಾಜ್ಞಾನಸ್ಯಾವಶ್ಯಕ ಫಲಪ್ರದಾನಾದಿಹೇತುತಯಾ ನಿಶ್ಚಯೇನ ತದನುರೂಪಕ

---

೧೦. ಕೇಶಗಳ ಭಾರದಿಂದ ಅಥವಾ ಗ್ರಂಥಿರೂಪವಾದ ಕಬರದಿಂದ ಅಧೋಭಾಗದಲ್ಲಿ ತಳ್ಳಲ್ಪಟ್ಟಿರುವ ಮೋಡಗಳುಳ್ಳವಳು ಮೇಘಮಂಡಲಕ್ಕಿಂತ ಊರ್ಧ್ವಭಾಗವನ್ನು ವ್ಯಾಪಿಸಿರುವ ಕೇಶಗಳಿಂದ ಕೂಡಿರುವುದರಿಂದ ವ್ಯೋಮಕೇಶೀ–ಆಕಾಶವನ್ನು ವ್ಯಾಪಿಸಿರುವ ಕೂದಲುಗಳುಳ್ಳವಳೆಂಬ ಅರ್ಥವು ತೋರುವುದು. ಅಥವಾ ಕೇಶಗಳು ಅತಿಶಯವಾದ ತನ್ನ ನೀಲರೂಪದಿಂದ ಮೋಡಗಳನ್ನು ತಿರಸ್ಕರಿಸುತ್ತಿರುವುದರಿಂದ ಕೇಶಭಾರದಿಂದ ತಿರಸ್ಕರಿಸಲ್ಪಟ್ಟ ಮೋಡಗಳುಳ್ಳವಳು. ಕಚೇನ + ಜಿತಾಃ + ಅಂಬುದಾಃ ಯಯಾ ಎಂದು ವಿಗ್ರಹವು.

೧೧. ಸಾತ್ತ್ವಿಕ ವೀಕ್ಷಣ ರೂಪವಾದ ಕಟಾಕ್ಷದರ್ಶನದಿಂದ ಸುರಿಯುವ ಕರುಣಾರಸವುಳ್ಳವಳು. ದೇವತೆಗಳಿಗೂ ಮಹಾತ್ಮರಿಗೂ ದೀನರ ವಿಷಯದಲ್ಲಿರುವ ಪರಿಪಾಲ್ಯರೆಂಬ ಬುದ್ಧಿಯು ಕರುಣೆಯೆಂದು ಕರೆಯಲ್ಪಡುತ್ತದೆ. ಆದರೆ ಅಂತಹ ಕರುಣೆಯು ಆಂತರವಾದ್ದರಿಂದ ಭಕ್ತಿ ಅತಿಶಯದಿಂದ ಸೇವೆಯಲ್ಲಿ ಪ್ರವರ್ತಿಸುವ ಭಕ್ತರಿಗೆ ಅದು ತಿಳಿಯಲಾರದು. ಅದರ ಜ್ಞಾನವು ಆವಶ್ಯ

ಸಾತ್ತ್ವಿಕವೀಕ್ಷಣಸ್ಮೇರಸಂಭಾಷಣಾದಿಸತ್ತ್ವಂ ತತ್ರಾವಶ್ಯಂ ಭವತೀತಿ ಕಾರ್ಯಸತ್ತ್ವಪ್ರಸಂಜಿತಕಾರಣಸತ್ತ್ವವತ್ತ್ವಾತ್ । ಕರುಣಾಯಾ ನವರಸೇಷ್ವಂತರ್ಭಾವಾತ್; ರಸಶಬ್ದಸ್ಯ ಮಧುರಾದೌ ರೂಢತ್ವಾತ್ ತೇಷಾಮನಿರ್ವಚನೀಯತ್ವೇಽಪಿ ಅನುಭವಗೋಚರತಾಯಾಮಿಕ್ಷ್ವಾದಿಸಾರದ್ರವ್ಯಪದಾರ್ಥನಿಷ್ಠತ್ವೋಪಲಬ್ಧೇಃ ತತ್ಸಂಬಂಧವಶಾತ್ ಪರಂಪರಯಾ ದ್ರವದ್ರವ್ಯವೃತ್ತಿಸ್ಯಂದನರೂಪಕ್ರಿಯಾಶ್ರಯತ್ವಮುಪಚರ್ಯತೇ। ತಥಾ ಚ ಕಟಾಕ್ಷಸ್ಯಂದಿನೀ ಕರುಣಾ ಪರಿಪಾಲ್ಯತಾಬುದ್ಧಿರೂಪಾ ಯಸ್ಯಾಃ ಸಾ ತಥಾ ।

## ೧೨. ಓಂ ಕಪಾಲಿಪ್ರಾಣನಾಯಿಕಾಯೈ ನಮಃ ।

ಕಪಾಲಿಪ್ರಾಣನಾಯಿಕಾ । ಕಪಾಲಮಸ್ಯ ಅಸ್ತೀತಿ ಕಪಾಲೀ ಆನಂದಭೈರವಃ । ತಸ್ಯ ಪ್ರಾಣನಾಯಿಕಾ । ಪ್ರಾಣಸ್ಯೇತ್ಯುಪ

---

ಸೇವಾಫಲವನ್ನು ಕೊಡುವಳು ಎಂಬ ನಿಶ್ಚಯಕ್ಕೆ ಕಾರಣವಾಗುವುದು. ಆದುದರಿಂದ ಅಂತಹ ಕರುಣೆಯು ಭಕ್ತಜನರಿಗೆ ವ್ಯಕ್ತವಾಗುವುದಕ್ಕೆ ಸಾತ್ವಿಕ ವೀಕ್ಷಣ, ಮಂದಹಾಸ, ಮೃದುಸಂಭಾಷಣ ಮುಂತಾದುವುಗಳು ಆವಶ್ಯಕವು. ಇಂತಹ ಕಾರ್ಯಗಳ ಅಸ್ತಿತ್ವದಿಂದ ಕಾರಣದ ಅಸ್ತಿತ್ವವನ್ನು ಊಹಿಸಿ ತಿಳಿಯಬಹುದು. ಕರುಣಾ ಎಂಬುದು ನವರಸಗಳಲ್ಲಿ ಒಂದಾಗಿದೆ. ರಸಶಬ್ದವು ಮಧುರ ಮುಂತಾದ ರಸಗಳಲ್ಲಿ ರೂಢವಾಗಿದೆ. ಅದು ಅನಿರ್ವಚನೀಯವಾಗಿದ್ದರೂ ಇಕ್ಷು ಮುಂತಾದ ದ್ರವ್ಯಗಳ ಸಾರದ ಪಾನದಿಂದ ಅನುಭವ ವೇದ್ಯವಾಗುತ್ತದೆ. ಆದರ ಸಂಬಂಧದಿಂದ ದ್ರವದ್ರವ್ಯದಲ್ಲಿರುವ ಸ್ಯಂದನ ರೂಪವನ್ನು ಹೊಂದುವುದು. ಆದುದರಿಂದ ಕಟಾಕ್ಷಗಳ ಮೂಲಕವಾಗಿ ಕರುಣೆಯು ಹರಿಯುವುದೆಂಬುದು ಉಪಚಾರದ ವರ್ಣನೆಯು. ಕಟಾಕ್ಷಯೋಃ ಸ್ಯಂದಿನೀ ತಾದೃಶೀ ಕರುಣಾ ಯಸ್ಯಾಃ ಎಂದು ವಿಗ್ರಹವು.

೧೨. ಕಪಾಲವನ್ನು ಧರಿಸಿರುವ ಆನಂದಭೈರವ ಮೂರ್ತಿಯ ಪಂಚಪ್ರಾಣಗಳಿಗೆ ಅಧಿಷ್ಠಾನ ರೂಪದಿಂದ ಪ್ರೇರೇಪಿಸುವವಳು. "ನ ಪ್ರಾಣೇನ ನಾಪಾ,

**ಲಕ್ಷಣಂ ಪಂಚಾನಾಂ ನಾಯಿಕಾ ಅಧಿಷ್ಠಾನತ್ವೇನ ಪ್ರೇರಿಕಾ। "ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ। ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ" ಇತಿ ಶ್ರುತೇಃ ತಸ್ಯಾಪಿ ಹೃದಯಾಂತರ್ವರ್ತಿಪರಮೇಶ್ವರರೂಪೇತಿ ಯಾವತ್। ಪ್ರಾಣವಲ್ಲಭೇತಿ ವಾ, ಪ್ರಿಯೇತಿ ಭಾವಃ।**

---

ನೇನ ಮರ್ತ್ಯೋ ಜೀವತಿ ಕಶ್ಚನ। ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ" ಎಂಬ ಶ್ರುತಿಯನ್ನು ಅನುಸರಿಸಿ ಬ್ರಹ್ಮವಸ್ತುವನ್ನು ಪ್ರಾಣ-ಅಪಾನಾದಿ ಉಪಕರಣ ಸಮಷ್ಟಿಗೆ ಅಧಿಷ್ಠಾನ ರೂಪವೆಂದು ಅರಿಯಬೇಕು. ಅಥವಾ ಆನಂದಭೈರವಮೂರ್ತಿಯ ಹೃದಯದ ಅಂತರ್ವರ್ತಿಯಾದ ಪರಮೇಶ್ವರರೂಪವುಳ್ಳವಳು. ಪ್ರಾಣವಲ್ಲಭೆಯಾದ ಪ್ರಿಯೆಯು ಎಂದು ತಾತ್ಪರ್ಯವು. ಕಪಾಲಮಸ್ಯಾಸ್ತೀತಿ ಕಪಾಲೀ, ತಸ್ಯ ಪ್ರಾಣಸ್ಯ ನಾಯಿಕಾ ಎಂದು ವಿಗ್ರಹವು.

೩೦

**ಕಾರುಣ್ಯವಿಗ್ರಹಾ ಕಾಂತಾ ಕಾಂತಿಧೂತಜಪಾವಲಿಃ ।**
**ಕಲಾಲಾಪಾ ಕಂಬುಕಂಠೀ ಕರನಿರ್ಜಿತಪಲ್ಲವಾ ॥**

**೧೩. ಓಂ ಕಾರುಣ್ಯವಿಗ್ರಹಾಯೈ ನಮಃ ।**

**ಕಾರುಣ್ಯವಿಗ್ರಹಾ । ಕಾರುಣ್ಯಂ ಪೂರ್ವೋಕ್ತಕೃಪಾಂ । ಕರುಣಸ್ಯ ಭಾವಃ । ತತ್ ವಿಗ್ರಹಃ ಮೂರ್ತಿರ್ಯಸ್ಯಾಃ ಸೇತಿ ತಥಾ । ಕಾರುಣ್ಯಸ್ಯಾಂತಃಕರುಣಪರಿಣಾಮಬುದ್ಧಿರೂಪತ್ವೇನ ನೇತ್ರಾಂತವೀಕ್ಷಾಸಸ್ಮಿತಭಾಷಾದಿನಾನುಮೇಯಮಾನತ್ವೇಪಿ ಸಾಕ್ಷಾತ್ತಜ್ಜನ್ಯಮನೋವಾಂಛಿತವರಪ್ರದಾನಾದೀನಾಂ ಶರೀರಾವಯವವಿಶೇಷಜನ್ಯತಯಾ ಕಾರುಣ್ಯಂ ವಿಗ್ರಹೋ ಯಸ್ಯಾಃ ಸೇತಿ ಸಮಾಸೋಪಪತ್ತಿಃ । ಮಾಯೋಪಾಧಿಕಸ್ಯ ಬ್ರಹ್ಮಣಃ ಜಗತ್ಸೃಷ್ಟ್ಯನುಕರಣಹೇತುಭೂತಸ್ವೇಚ್ಛಾಮಾತ್ರನಿಮಿತ್ತಕ-**

---

೧೩. ಕಾರುಣ್ಯವೆಂಬ ವಿಗ್ರಹವುಳ್ಳವಳು. ದಯಾಮಯನ ಭಾವವು ಕಾರುಣ್ಯವು. ಅದು ಅಂತಃಕರಣದ ಪರಿಣಾಮವೆಂಬ ಬುದ್ಧಿವಿಶೇಷ ರೂಪವಾಗಿ ಕಟಾಕ್ಷವೀಕ್ಷಣ ಮಂದಹಾಸ ಪೂರ್ವಕವಾದ ಭಾಷಣ ಮುಂತಾದುವುಗಳಿಂದ ಊಹಿಸಲ್ಪಡುವುದಾದರೂ ಅದರ ಕಾರ್ಯವಾದ ಇಷ್ಟವರದಾನಾದಿಗಳು ಶರೀರಾವಯವಗಳಿಂದ ಸಂಭವಿಸುವುದರಿಂದ ಅಂತಹ ಕಾರ್ಯರೂಪದಿಂದ ವಿಗ್ರಹರೂಪವಾಗುವುದು. ಅಥವಾ ಕಾರುಣ್ಯಮಯವಾದ ಉಪಾಸನಾರ್ಥವಾಗಿ ಕಲ್ಪಿತವಾದ ದೇಹವುಳ್ಳವಳು. ಮಾಯೋಪಾಧಿಯುಳ್ಳ ಬ್ರಹ್ಮವಸ್ತುವು ಜಗತ್ತಿನ ಸೃಷ್ಟಿಯನ್ನು ಅನುಕರಿಸುವ, ಸ್ವೇಚ್ಛಾಮಾತ್ರದಿಂದ ಆವಿರ್ಭವಿಸುವ, ಕರ್ಮಾನಧೀನವಾದ ಮತ್ತು ಸಚ್ಚಿದಾನಂದಘನವಾದ ಭಕ್ತರನ್ನು ಅನುಗ್ರಹಿಸುವ ಮೂರ್ತಿಯನ್ನು ಪರಿಗ್ರಹಿಸಿದ ವಿನಹ ಬುದ್ಧಿ ಗೋಚರವಾಗದಿರುವುದರಿಂದ ಅದರ ಸಗುಣೋಪಾಸನವು ಅಶಕ್ಯವಾಗುವುದು. ಆದುದರಿಂದ ಮಂತ್ರಗಳಿಂದ ವಿಗ್ರಹ ಮುಂತಾದುವು ದೇವತೆಯಲ್ಲಿ ಇವೆಯೆಂದು ಅಂಗೀಕರಿಸಬೇಕು.

**ಕರ್ಮಾನಧೀನ ಸಚ್ಚಿದಾನಂದ ಘನೀ ಭೂತಾತ್ಮಕ ಭಕ್ತಾನು– ಗ್ರಾಹಕವಿಗ್ರಹವತ್ತ್ವಂ ವಿನಾ ದೇವತಾಯಾಃ ಬುದ್ಧ್ಯಾವನಾ ರೂಪೇಣ ಸಗುಣೋಪಾಸನಮನುಪಪದ್ಯಮಾನಂ ಸ್ಯಾತ್, ತದರ್ಥಂ ದೇವತಾಧಿಕರಣೇ ಮಂತ್ರಪ್ರಕಾಶಿತಾ ದೇವಾಃ "ವಜ್ರಹಸ್ತಃ ಪುರಂದರ" ಇತ್ಯಾದಿಸ್ವತಃಪ್ರಮಾಣವೇದ ವಾಕ್ಯವಶಾತ್ ಬಾಧಕಾಭಾವೇ ವಿಗ್ರಹವಂತಃ ಅಂಗೀಕರ್ತವ್ಯಾ ಇತಿ ಪ್ರತಿಷ್ಠಾಪಿತಮ್ । ತಥಾ "ಬಹುಶೋಭಮಾನಾ ಮುಮಾಂ ಹೈಮವತೀಂ" ಇತಿ ಕೇನೋಪನಿಷದ್ಭಾಷ್ಯೇ ಹೈಮಾನಿ ಹೇಮವಿಕಾರಾಣಿ ಭೂಷಣಾನಿ ಯಸ್ಯಾಃ ಸೇತಿ ವಾ ತಥಾ। ಹಿಮವತಃ ಅಪತ್ಯಂ ಸ್ತ್ರೀತಿ ಚ ತಥೇತಿ ಪರದೇವ ತಾಯಾಃ ದಿವ್ಯವಿಗ್ರಹವತ್ತ್ವಂ ಪ್ರತಿಷ್ಠಾಪಿತಮ್ । ತಥಾ ಚ ಮಹಾನುಭಾವಾನಾಂ ಸ್ವಪ್ರಕಾಶಚೈತನ್ಯರೂಪಾಣಾಮೇವಂ ಭೂತಾನಾಂ ಸರ್ವಾತ್ಮನಾ ಸರ್ವೋತ್ತಮಾನಾಂ ಮೂರ್ತಿ ತ್ರಯದೇವಾನಾಂ ಧ್ಯಾನಾದ್ಯುಪಕಾರಾಯ ತಾದೃಶಮೂರ್ತಿ**

---

"ವಜ್ರಹಸ್ತಃ ಪುರಂದರಃ" ಮುಂತಾದ ಮಂತ್ರಭಾಗಗಳು ಸ್ವತಃ ಪ್ರಮಾಣ ವಾದುದರಿಂದ ದೇವತೆಗೆ ವಿಗ್ರಹಾದಿಸತ್ತೆಯನ್ನು ಬೋಧಿಸುವುವು. ಹಾಗೆಯೇ "ಬಹು ಶೋಭಮಾನಾಮುಮಾಂ ಹೈಮವತೀಂ" ಎಂಬ ಕೇನೋಪನಿಷತ್ತಿನ ಭಾಷ್ಯದಲ್ಲಿ ಸುವರ್ಣಮಯವಾದ ಆಭರಣವುಳ್ಳವಳು ಎಂಬುದಾಗಿ ಹೈಮ ವತೀಂ ಎಂಬ ಪದಕ್ಕೆ ಅರ್ಥಮಾಡಿರುವುದರಿಂದ ದೇವತಾವಿಗ್ರಹಾದಿಗಳನ್ನು ಅಂಗೀಕರಿಸಿದಂತೆ ಆಗಿರುವುದು. "ಹೈಮವತೀಂ" ಎಂಬ ಪದಕ್ಕೆ ಹಿಮ ವಂತನ ಮಗಳು ಎಂದು ಅರ್ಥಮಾಡಿದರೆ ದಿವ್ಯ ವಿಗ್ರಹವಿದೆಯೆಂಬುದನ್ನು ಮತ್ತಷ್ಟು ಸ್ಪಷ್ಟಪಡಿಸಿದಂತಾಗುವುದು. ಆದ್ದರಿಂದ ಮಹಾಮಹಿಮೆಯುಳ್ಳ ವರೂ, ಸ್ವಪ್ರಕಾಶಚೈತನ್ಯರೂಪರೂ, ಸರ್ವೋತ್ತಮರೂ ಆದ ತ್ರಿಮೂರ್ತಿ ಮುಂತಾದ ದೇವತೆಗಳ ಧ್ಯಾನ–ಅರ್ಚನ ಮುಂತಾದುವುಗಳನ್ನು ಮಾಡಲು ಅನುಕೂಲವಾಗಿ ತ್ರಿಮೂರ್ತಿಗಳಿಗೆ ವಿಗ್ರಹಾದಿಗಳು ಉಂಟೆಂಬುದು ಸಿದ್ಧಾಂತವು.

ಮುತ್ತ್ವಂ ಅಸ್ತೀತಿ ನ ಕಿಂಚಿದನೀಶ್ವರವಾದಪ್ರಸಂಗಾವಕಾಶ ಇತಿ ಆಸ್ತಾಂ ವಿಸ್ತರಃ।

೧೪. ಓಂ ಕಾಂತಾಯೈ ನಮಃ।

ಕಾನ್ತಾ। "ಕನ ದೀಪ್ತೌ" ಇತಿ ಧಾತೋಃ ಅತ್ಯಂತಮನೋಹರತಮೇತ್ಯರ್ಥಃ। ಮದನಗೋಪಾಲವಿಗ್ರಹಾ ವಾ,। "ಕದಾಚಿದಾದ್ಯಾ ಲಲಿತಾ ಪುಂರೂಪಾ ಕೃಷ್ಣವಿಗ್ರಹಾ। ವಂಶನಾದ ವಿನೋದೇನ ಕರೋತಿ ವಿವಶಂ ಜಗತ್", ಇತಿ ತ್ರಿಪುರಾತಾಪನೀಯೇ।

೧೫. ಓಂ ಕಾಂತಿಧೂತಜಪಾವಲ್ಲ್ಯೈ ನಮಃ।

ಕಾಂತಿಧೂತಜಪಾವಲಿಃ। ಜಪಾನಾಂ ಜಪಾಪುಷ್ಪಾಣಾಂ

---

ಇದರಿಂದ ಯಾವವಿಧವಾದ ಅಪಸಿದ್ಧಾಂತವು ತಲೆದೋರಲು ಅವಕಾಶವಿಲ್ಲ. ಕಾರುಣ್ಯಂ ವಿಗ್ರಹಃ= ಯಸ್ಯಾಃ ಎಂದು ವಿಗ್ರಹವು.

೧೪. ಅತ್ಯಂತ ಮನೋಹರಳಾದವಳು, ಅಥವಾ ಮದನಗೋಪಾಲರೂಪವಾದ ವಿಗ್ರಹವುಳ್ಳವಳು. "ಕನ ದೀಪ್ತೌ" ದೀಪ್ತಿ ಎಂಬ ಅರ್ಥವನ್ನು ಬೋಧಿಸುವ ಕನಧಾತುವಿನಿಂದ ಕಾಂತ ಎಂಬ ಶಬ್ದವು ರೂಪಗೊಂಡಿರುವುದರಿಂದ ಮನೋಹರಳೆಂಬ ಮೊದಲನೆಯ ಅರ್ಥವನ್ನು ವಿವರಿಸಿದೆ. ಮದನಗೋಪಾಲಸುಂದರೀ ರೂಪದಿಂದಲೂ ರಾಮಣೀಯಕವನ್ನು ಅತಿಶಯವಾಗಿ ವರ್ಣಿಸಬಹುದೆಂಬ ಭಾವನೆಯಿಂದ ಎರಡನೆಯ ಅರ್ಥವನ್ನು ತೋರಿಸಿದೆ. "ಕದಾಚಿದಾದ್ಯಾ ಲಲಿತಾ ಪುಂರೂಪಾ ಕೃಷ್ಣವಿಗ್ರಹಾ ವಂಶನಾದವಿನೋದೇನ ಕರೋತಿ ವಿವಶಂ ಜಗತ್" ಎಂಬ ವಚನವು ಆದ್ಯಳಾದ ಲಲಿತಾ ದೇವಿಯು ಗೋಪಾಲರೂಪವಾದ ಪುರುಷ ವಿಗ್ರಹವನ್ನು ಧರಿಸಿರುವಳೆಂಬ ಅಂಶವನ್ನು ಸ್ಪಷ್ಟಪಡಿಸುವುದು.

೧೫. ಅಪ್ರಾಕೃತವೂ, ಸ್ವಚ್ಛವೂ, ಮತ್ತು ಪರಮಾನಂದರೂಪವೂ ಆದ ಕಾಂತಿಯಿಂದ ತಿರಸ್ಕರಿಸಲ್ಪಟ್ಟ, ಕವಿಗಳು ಉಪಮಾನವಾಗಿ ಕಲ್ಪಿಸುವ ರೂಢಿಗೆ

ಉಪಲಕ್ಷಣಂ ಅನ್ಯೇಷಾಮಾರಕ್ತವರ್ಣಾನಾಂ, ಆವಲಿಃ ಪಂಕ್ತಿಃ ದೃಷ್ಟಾಂತತ್ವೇನ ಕವಿಭಿರುತ್ಪ್ರೇಕ್ಷಿತಾ । ಕಾಂತ್ಯಾ ಅಪ್ರಾಕೃತಸ್ವಚ್ಛಪರಮಾನಂದಚಿದ್ಭಾಸಾ ಧೂತಾಃ ಪರಿತ್ಯಕ್ತಾಃ ಪ್ರಾಕೃತತ್ವೇನ ಅಲ್ಪಕಾಂತಿಮತ್ತಯಾ ಉಪಮಾಯೋಗ್ಯತಯಾ ಯಯಾ ಸಾ । "ನ ಹಿ ಮಹಾಂತೋ ನೀಚೈರುಪಮೀಯಂತೇ" ಇತಿ ನ್ಯಾಯಾದಿತಿ ಭಾವಃ ।

## ೧೬. ಓಂ ಕಲಾಲಾಪಾಯೈ ನಮಃ ।

ಕಲಾಲಾಪಾ । ಕಲಾಃ ಚತುಃಷಷ್ಟಿಕಲಾಃ ಆಲಾಪೋ ವ್ಯಾವಹಾರಿಕಶಬ್ದಃ ಯಸ್ಯಾಃ ಸಾ ತಥಾ, "ವೇದಶಾಸ್ತ್ರಮಯೀ ವಾಣೀ ಯಸ್ಯಾಃ ಸಾ ಪರದೇವತಾ" ಇತಿ ವಚನಾತ್ । ಕಲಃ ಅವ್ಯಕ್ತಮಧುರಃ ಸಪ್ರಯೋಜನಃ ಆಲಾಪಃ ಸಂಲಾಪೋ ಯಸ್ಯಾಃ ಸೇತಿ ವಾ ತಥಾ । "ಅವ್ಯಕ್ತಾ ಭಾರತೀ ತಥಾ" ಇತಿ ಮಹಾಪುರಷಸಾಮುದ್ರಿಕವಚನಾತ್ ।

---

ಪಾತ್ರಗಳೂ ಅಲ್ಪಕಾಂತಿಯಿಂದ ಕೂಡಿದುವುಗಳೂ ಆದ ಜಪಾಕುಸುಮ ಮುಂತಾದ ಕೆಂಪು ಪುಷ್ಪಗಳ ಪಂಕ್ತಿಯುಳ್ಳವಳು. ಉದಾರ ಗುಣಗಳಿಂದ ಕೂಡಿದ ವಸ್ತುಗಳನ್ನು ನಿಸ್ಸಾರವಸ್ತುಗಳೊಡನೆ ಹೋಲಿಸುವುದು ಅನ್ಯಾಯವು. ಆದ್ದರಿಂದ ಜಪಾಕುಸುಮ ಪಂಕ್ತಿಯು ಉಪಮಾನ ಭಾವವನ್ನು ಕೂಡ ಹೊಂದದೆ ತಿರಸ್ಕರಿಸಲ್ಪಟ್ಟಿದೆ. ಜಪಾನಾಂ + ಆವಳಿಃ, ಕಾಂತ್ಯಾ ಧೂತಾ, ಕಾಂತಿಧೂತಾ ಜಪಾವಳಿಃ ಯಯಾ ಸಾ ಎಂದು ವಿಗ್ರಹವು.

೧೬. ಚತುಃಷಷ್ಟಿ ಕಲಾ ರೂಪವಾದ ವ್ಯವಹಾರವುಳ್ಳವಳು. "ವೇದಶಾಸ್ತ್ರಮಯೀ ವಾಣೀ ಯಸ್ಯಾಃ ಸಾ ಪರದೇವತಾ" ಎಂಬ ವಚನಾನುಸಾರವಾಗಿ ಪರದೇವತೆಯ ವ್ಯವಹಾರವು ಅರವತ್ತು ನಾಲ್ಕು ಕಲಾರೂಪವಾಗಿದೆಯೆಂದು ತಿಳಿಯಬೇಕು. ಅಥವಾ "ಅವ್ಯಕ್ತಾ ಭಾರತೀ ತಥಾ" ಎಂಬ ಸಾಮುದ್ರಿಕ ವಚನಾನುಸಾರವಾಗಿ ಅವ್ಯಕ್ತ ಮಧುರವೂ ಅನೇಕ ಪ್ರಯೋಜನ ಗರ್ಭಿತವೂ ಆದ ವ್ಯವಹಾರವುಳ್ಳವಳು. ಕಲಃ +ಆಲಾಪಃ ಯಸ್ಯಾಃ ಅಥವಾ ಕಲಾಃ ಆಲಾಪಾಃ ಯಸ್ಯಾಃ ಎಂದು ವಿಗ್ರಹವು.

## ೧೭. ಓಂ ಕಂಬುಕಂಠ್ಯೈ ನಮಃ ।

ಕಂಬುಕಂಠೀ। ಕಂಬುಶಬ್ದೇನ ಅತ್ರ ಶಂಖನಿಷ್ಠರೇಖಾತ್ರಯಂ ಲಕ್ಷ್ಯತೇ। ತದ್ವಾನ್ ಕಂಠೋ ಯಸ್ಯಾಃ ಸೇತಿ ತಥಾ ಗುಣ ನಾಮೇದಮ್ ।

## ೧೮. ಓಂ ಕರನಿರ್ಜಿತಪಲ್ಲವಾಯೈ ನಮಃ ।

ಕರನಿರ್ಜಿತಪಲ್ಲವಾ। ಕರಶಬ್ದೇನ ಕರತಲಂ ಲಕ್ಷ್ಯತೇ। ಪಲ್ಲವಾ ಶಬ್ದೇನ ತನ್ನಿಷ್ಠಪಾಟಲ್ಯಂ ಸ್ನಿಗ್ಧತಾ ಲಕ್ಷಣಯಾ ಇತ್ಯರ್ಥಃ। ತಥಾ ಚ ಅನ್ಯೋನ್ಯಗುಣಯೋರ್ಜಯಪರಾಜಯೋ ಅರ್ಥಾತ್ತ ದ್ವತೋರಪಿ ತೌ ಸಿದ್ಧಾವಿತಿ ತನ್ನಾಮೋಪಪತ್ತಿಃ "ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ" ಇತಿ ವಚನಾತ್ ಕರತಲೇ ತತ್ಸಾಮ್ಯಧ್ವನಿರನೇನ ನಾಮ್ನಾ ಕೃತಃ। ಕರೇಣ ನಿರ್ಜಿತಾಃ ಪಲ್ಲವಾಃ ಯಸ್ಯಾಃ ಸಾ ತಥಾ ।

---

೧೭. ಶಂಖದಲ್ಲಿರುವಂತೆ ರೇಖಾತ್ರಯದಿಂದ ಕೂಡಿದ ಕಂಠವುಳ್ಳವಳು. ಶಂಖ ಶಬ್ದಕ್ಕೆ ರೇಖಾತ್ರಯವೆಂಬ ಅರ್ಥದಲ್ಲಿ ಲಕ್ಷಣೆಯನ್ನು ಅಂಗೀಕರಿಸಿದೆ. ಇದು ಸಗುಣಮೂರ್ತಿಯಲ್ಲಿರುವ ಗುಣವಿಶೇಷವಾಚಕವಾದ ಶಬ್ದವು, ಕಂಬುವತ್, ಕಂಬುಮಾನ್ ವಾ ಕಂಠಃ ಯಸ್ಯಾಃ ಎಂದು ವಿಗ್ರಹವು.

೧೮. ಪಾಣಿಯ ತಲಪ್ರದೇಶದಿಂದ ಪಾಟಲ್ಯ–ಸ್ನಿಗ್ಧತ್ವ ಮುಂತಾದ ಗುಣಗಳ ವಿಷಯದಲ್ಲಿ ಜಯಿಸಲ್ಪಟ್ಟ ಅಂಕುರಗಳುಳ್ಳವಳು. ಪಾಣಿತಲದ ಗುಣದಿಂದ ಪಲ್ಲವದ ಗುಣಕ್ಕೆ ಅಪಜಯವಾದರೆ ಪಾಣಿತಲದಿಂದ ಪಲ್ಲವವು ಅಪಜಯ ಹೊಂದಿದಂತಾಗುವುದು. "ವಿವಾದಶ್ಚ ವಿವಾಹಶ್ಚ ಸಮಯೋರೇವ ಶೋಭತೇ" ಎಂಬನ್ಯಾಯವನ್ನು ಅನುಸರಿಸಿ ಪಾಣಿತಲ ಪಲ್ಲವಗಳಿಗೆ ಸಾಮ್ಯವು ಈ ವಚನದಿಂದ ಸೂಚಿಸಲ್ಪಟ್ಟಿದೆ. ಕರೇಣನಿರ್ಜಿತಾಃ ಪಲ್ಲವಾಃ ಯಯಾ ಸಾ ಎಂದು ವಿಗ್ರಹವು.

೩೧

ಕಲ್ಪವಲ್ಲೀಸಮಭುಜಾ ಕಸ್ತೂರೀತಿಲಕಾಂಚಿತಾ ।
ಹಕಾರಾರ್ಥಾ ಹಂಸಗತಿರ್ಹಾಟಕಾಭರಣೋಜ್ಜ್ವಲಾ ॥

೧೯. ಓಂ ಕಲ್ಪವಲ್ಲೀಸಮಭುಜಾಯೈ ನಮಃ ।

ಕಲ್ಪವಲ್ಲೀಸಮಭುಜಾ । ಯಥಾ ದಿವ್ಯವೃಕ್ಷಾಃ ನಂದನೋದ್ಯಾನೇ ಪ್ರಸಿದ್ಧಾಃ ತಥಾ ತದಲಂಕಾರಾಯ ವಲ್ಲ್ಯಾದಯೋಽಪಿ ಕಲ್ಪಯಂತಿ ಸಂಪಾದಯಂತೀತಿ ಕಲ್ಪಾಃ । ಕಲ್ಪಾಶ್ಚತಾ ವಲ್ಲ್ಯಶ್ಚ ವ್ರತತ್ಯಃ ತಾಭಿಃ ಸಮಾಃ ಭುಜಾಃ ಹಸ್ತಾಃ ಯಸ್ಯಾಃ ಸಾ ತಥಾ । ಕವಿಸಂಪ್ರದಾಯಪ್ರಾಪ್ತ್ಯಾ ಸ್ತ್ರೀಭುಜಾನಾಂ ವಲ್ಲೀಸಾಮ್ಯೋಕ್ತಿರಿತಿ ಮಂತವ್ಯಮ್ । ಅತ್ರ ಸಮಪದಸ್ವಾರಸ್ಯೇನ ತೇಷಾಮಪಿ ತದವಚ್ಛಿನ್ನಚೈತನ್ಯದ್ವಾರಾ ಯಥಾಪ್ರಾರಬ್ಧಂ ಚೇತನವಲ್ಲೋಕವಾಂಛಿತಫಲಕರ್ತೃತ್ವಮಿತಿ ಧ್ವನಿತಮ್ । "ಏಕಸ್ತಥಾ ಸರ್ವಭೂತಾಂತರಾತ್ಮಾ

---

೧೯. ನಂದನೋದ್ಯಾನವನದಲ್ಲಿರುವ ಪ್ರಸಿದ್ಧವಾದ ಕಲ್ಪವಲ್ಲಿಗಳಿಗೆ ಸಮಾನವಾದ ಭುಜಗಳುಳ್ಳವಳು. ಬೇಕಾದ ಇಷ್ಟಾರ್ಥಗಳನ್ನು ಸೇವಕರಿಗೆ ಕೊಡುವ ವೃಕ್ಷ ಅಥವಾ ಲತೆಗಳನ್ನು ಕಲ್ಪವೃಕ್ಷ, ಅಥವಾ ಕಲ್ಪಲತೆಗಳೆನ್ನುವರು. ಕವಿಗಳ ವರ್ಣನೆಯಸಂಪ್ರದಾಯವನ್ನು ಅನುಸರಿಸಿ ಸ್ತ್ರೀಮೂರ್ತಿಯ ಭುಜಗಳಿಗೆ ಕಲ್ಪಲತೆಯನ್ನು ಹೋಲಿಸಿದೆ. ಕಲ್ಪಲತೆಯು ಇಷ್ಟಾರ್ಥಗಳನ್ನು ಕೊಡುವಂತೆ ದೇವಿಯ ಭುಜಗಳು ಚೈತನ್ಯದ ಮೂಲಕ ಭಕ್ತರಿಗೆ ಅವರವರ ಪ್ರಾರಬ್ಧಕರ್ಮಾನುಸಾರವಾಗಿ ಫಲಗಳನ್ನು ಕೊಡುತ್ತವೆ ಎಂದು ತಾತ್ಪರ್ಯವು. "ಏಕಸ್ತಥಾ ಸರ್ವಭೂತಾಂತರಾತ್ಮಾರೂಪಂ ರೂಪಂ ಪ್ರತಿರೂಪೋ ಬಹಿಶ್ಚ, ತತ್ತದೇವಾವಗಚ್ಛ ತ್ವಂ ಮಮತೇಜೋಂಶಸಂಭವಮ್" ಎಂಬ ಶ್ರುತಿ–ಸ್ಮೃತಿಗಳಂತೆ ವಿಭೂತಿಯಿಂದ ಕೂಡಿದ ಮಹಾಮಹಿಮೆಯುಳ್ಳ ವಸ್ತುಗಳು ಪರಮಾತ್ಮನ ಅಂಶವೆಂದು ತಿಳಿಯಬೇಕು. ಅದರಿಂದ ಕಲ್ಪಲತಾರೂಪ

ರೂಪಂ ರೂಪಂ ಪ್ರತಿರೂಪೋ ಬಹಿಶ್ಚ" ಇತಿ ಶ್ರುತೇಃ ।
"ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಮ್
ಇತಿ ಸ್ಮೃತೌ ಚ ಭಗವತಾ ಸ್ವಕೀಯಸಚ್ಚಿದಾನಂದಸ್ವರೂ
ಪಾವಸ್ಥಿತಿರೇವೋಕ್ತಾ । ಅತ ಏವ ಪರದೇವೀಭುಜಾನಾಂ
ನೈವ ಸಾಮ್ಯೋಕ್ತಿರಿತಿ ಶಂಕಾ ನಿರಸ್ತಾ ವೇದಿತವ್ಯಾ, ಔಪಾಧಿಕ
ಚೈತನ್ಯೇನ ತಥಾಭೂತಚೈತನ್ಯಸ್ಯ ಸಾಮ್ಯೋಪಪತ್ತೇಃ ।

೨೦. ಓಂ ಕಸ್ತೂರೀತಿಲಕಾಂಚಿತಾಯೈ ನಮಃ ।

ಕಸ್ತೂರೀತಿಲಕಾಂಚಿತಾ । ಕಸ್ತೂರೀತಿಲಕೇನ ಲಲಾಟದೇಶ
ಸಂಸ್ಥಾಪಿತಬಿಂದ್ವಾಕಾರಮೃಗನಾಭಿನಾ ಅಂಚಿತಾ। ಚಿಹ್ನಿತಾ
ಅಲಂಕೃತೇತ್ಯರ್ಥಃ ।

ಇತಿ ತ್ರಿಶತ್ಯಾಂ ವಿದ್ಯಾಯಾಂ ಅಷ್ಟಮಾಕ್ಷರನಾಮವ್ಯಾಖ್ಯಾಯಾಂ
ಕಕಾರವರ್ಣಪ್ರಕಾಶಃ ಅಷ್ಟಮಃ ।

---

ವಾದ ಉಪಾಧಿಯಿಂದ ಕೂಡಿದ ಚೈತನ್ಯವನ್ನು ಸ್ವರೂಪಾನಂದ ಚೈತನ್ಯಕ್ಕೆ ಉಪಮಾನವನ್ನಾಗಿ ಕಲ್ಪಿಸಿರುವುದರಿಂದ ದೇವೀಭುಜಗಳಿಗೆ ಉಪಮಾನವು ಇಲ್ಲ ವೆಂದು ಶಂಕಿಸಲು ಅವಕಾಶವಿಲ್ಲ. ಕಲ್ಪಯಂತೀತಿ ಕಲ್ಪಾಃ, ತಾಶ್ಚ ತಾ ವಲ್ಲ್ಯಶ್ಚ ಕಲ್ಪವಲ್ಲ್ಯಃ, ತಾಭಿಃ + ಸಮಾಃ, ತಾದೃಶಾ ಭುಜಾ ಯಸ್ಯಾ ಸ್ಸಾ ಎಂದು ವಿಗ್ರಹವು.

೨೦. ಹಣೆಯಪ್ರದೇಶದಲ್ಲಿ ಅಲಂಕಾರಕ್ಕೋಸ್ಕರ ಇಡಲ್ಪಟ್ಟ ಬಿಂದುವಿನ ಆಕಾರವುಳ್ಳ ಕಸ್ತೂರೀ ತಿಲಕದಿಂದ ಶೃಂಗರಿಸಲ್ಪಟ್ಟವಳು. ಕಸ್ತೂರ್ಯಾಃ + ತಿಲಕಂ, ತೇನ ಅಂಕಿತಾ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮವ್ಯಾಖ್ಯಾನದಲ್ಲಿ ಅಷ್ಟಮಪ್ರಕಾಶವು ಸಮಾಪ್ತವು.

## ೧. ಓಂ ಹಕಾರಾರ್ಥಾಯೈ ನಮಃ ।

ಹಕಾರಾರ್ಥಾ । ಹಕಾರಸ್ಯಆಕಾಶಬೀಜಸ್ಯ ಅರ್ಥಾ, ಅರ್ಥಃ ಸ್ವರೂಪಚೈತನ್ಯಂ ಆಕಾಶವಿಗ್ರಹೇತ್ಯರ್ಥಃ, "ಆಕಾಶೋ ಹ ವೈ ನಾಮ ನಾಮರೂಪಯೋರ್ನಿರ್ವಹಿತಾ । ತೇ ಯದಂತರಾ ತದ್ಬ್ರಹ್ಮ" ಇತಿ ಶ್ರುತೇಃ ।

## ೨. ಓಂ ಹಂಸಗತ್ಯೈ ನಮಃ ।

ಹಂಸಗತಿಃ । ಹಂತಿ ಗಚ್ಛತೀತಿ ಹಂಸಃ ಪ್ರಾಣಃ । ಆದಿತ್ಯೋ ವಾ, ಹಂಸಸ್ಯ ಪ್ರಾಣಸ್ಯ ಗತಿಃ ಗಮನಾಗಮನೇ ಲಕ್ಷಣಯಾ ತಜ್ಜಾಪ್ಯಾಜಪಾಮಂತ್ರರೂಪಾ ಯಸ್ಯಾಃ ಸಾ ತಥಾ "ಹಕಾರೇಣ ಬಹಿರ್ಯಾತಿ ಸಕಾರೇಣ ಪುನರ್ವಿಶೇತ್" ಇತಿವಚನಾತ್ । ಯದ್ವಾ ತದಭಿಮಾನಿದೇವತಾರೂಪಾಗ್ನೀಷೋಮಾ

---

೧. ಆಕಾಶವೆಂಬ ಮಹಾಭೂತದ ಬೀಜಾಕ್ಷರವಾದ ಹಕಾರದ ಅರ್ಥವಾದ ಚೈತನ್ಯಸ್ವರೂಪಳಾದವಳು. "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ, ತೇ ಯದಂತರಾ ತದ್ಬ್ರಹ್ಮ" ಎಂದು ಶ್ರುತಿವಚನವನ್ನು ಅನುಸರಿಸಿ ಆಕಾಶ ಶರೀರಳಾಗಿರುವಳೆಂಬ ಅಂಶವು ಈ ನಾಮದಿಂದ ಸೂಚಿಸಲ್ಪಟ್ಟಿದೆ. ಹಕಾರಸ್ಯ + ಅರ್ಥಾ ಎಂದು ವಿಗ್ರಹವು.

೨. ಅಂತರ್ಭಾಗ–ಬಹಿರ್ಭಾಗಗಳಲ್ಲಿ ಗಮನಾಗಮನವುಳ್ಳ ಪ್ರಾಣವಾಯುವಿನ ವ್ಯಾಪಾರದಿಂದ ಸಾಧ್ಯವಾದ ಅಜಪಾಮಂತ್ರ ಜಪದಿಂದ ಜಪಿಸಲ್ಪಡುವ ಮಂತ್ರಸ್ವರೂಪವುಳ್ಳವಳು. "ಹಕಾರೇಣ ಬಹಿರ್ಯಾತಿ ಸಕಾರೇಣ ಪುನರ್ವಿಶೇತ್" ಎಂಬ ವಚನವು ಹಕಾರದಿಂದ ಪ್ರಾಣಕ್ಕೆ ಬಹಿರ್ಗಮನವನ್ನೂ ಸಕಾರದಿಂದ ಪ್ರಾಣದ ಅಂತರ್ಗಮನವನ್ನೂ ಪ್ರತಿಪಾದಿಸುತ್ತದೆ. ಅಥವಾ ಹ-ಸ-ಕಾರ ಅಭಿಮಾನಿದೇವತಾರೂಪರಾದ ಅಗ್ನಿ ಮತ್ತು ಸೋಮಸ್ವರೂಪರಾದ ಸೂರ್ಯಚಂದ್ರರ ಗತಿಯಿಂದ ಕೂಡಿದ ಅಹೋರಾತ್ರರೂಪವಾದ ಕಾಲರೂಪವುಳ್ಳವಳು. ಅಥವಾ ಒಂದು ದೇಹವನ್ನು ತ್ಯಜಿಸಿ ದೇಹಾಂತರಕ್ಕೆ ಹೋಗುವ

ತ್ಮಕಸೂರ್ಯಚಂದ್ರಗತೀ ಅಹೋರಾತ್ರಾತ್ಮಕಕಾಲಸ್ವರೂ
ಪಾಯಾಃ ಯಸ್ಯಾಃ ಸಾ । ಅಥವಾ ಹಂತಿ ದೇಹಾದ್ದೇಹಾಂ
ತರಂ ಗಚ್ಛತಿ ಸ್ವಕರ್ಮವಶೇನೇತಿ ಹಂಸೋ ಜೀವಃ। ತಸ್ಯ
ಗತಿಃ ಪ್ರಾಪ್ಯಸ್ಥಾನಂ ಮುಕ್ತಿರಿತ್ಯರ್ಥಃ । "ಬ್ರಹ್ಮವಿದಾಪ್ನೋತಿ
ಪರಮ್", "ಯದ್ಗತ್ವಾ ನ ನಿವರ್ತಂತೇ" ಇತಿ ಶ್ರುತಿಸ್ಮೃತಿ
ವಚನಾತ್ । ಅಥವಾ ಹಂತಿ ಸ್ವಕಾರ್ಯಭೂತಂ ಜಗತ್ಪ್ರವಿಶ
ತೀತಿ ಹಂಸಃ । "ಹಂಸಸ್ತು ಪರಮೇಶ್ವರಃ" ಇತಿ ನೃಸಿಂಹ
ತಾಪನೀಯೇ । ಗಮ್ಯತೇ ಪ್ರಾಪ್ಯತೇ ಶರಣತ್ವೇನ ಪ್ರಪದ್ಯತೇ
ಚತುರ್ವಿಧಭಕ್ತೈರಿತಿ ಗತಿಃ ಹಂಸಶ್ಚಾಸೌ ಗತಿಶ್ಚ ಇತಿ ಸಾಮಾ
ನಾಧಿಕರಣ್ಯಸಮಾಸಃ। "ಹಂಸಃ ಶುಚಿಷತ್" ಇತಿ ಶ್ರುತೇಃ।
ಆಹೋಸ್ವಿತ್ ಹಂಸಸ್ಯ ಬ್ರಹ್ಮವಾಹನಸ್ಯ ಗತಿರಿವ ಗಮನಂ
ಯಸ್ಯಾಃ ಸಾ ತಥಾ । ಉತಾಹೋ ಹಂಸಶಬ್ದೇನ ನಾಮೈಕ
ದೇಶೇನ ಹಂಸಕಂ ಪಾದಕಟಕಮುಚ್ಯತೇ। ಗಮ್ಯತೇಽನೇನೇತಿ
ಗತಿಃ ಚರಣಂ, ಹಂಸಯುಕ್ತೇ ಗತೀ ಪಾದಾರವಿಂದೇ

---

ಜೀವಾತ್ಮನ ಪ್ರಾಪ್ಯಸ್ಥಾನವಾದ ಮುಕ್ತಿಸ್ವರೂಪಳಾದವಳು. "ಬ್ರಹ್ಮವಿದಾ
ಪ್ನೋತಿ ಪರಮ್" "ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ"
ಎಂಬ ಶ್ರುತಿಸ್ಮೃತಿವಚನಗಳಿಂದ ದೇವಿಯು ಪುನರಾವೃತ್ತಿರಹಿತವಾದ ಮುಕ್ತಿ
ಸ್ವರೂಪಳೆಂದು ತಿಳಿಯುವುದು. ಅಥವಾ ಕಾರ್ಯಾಕಾರವನ್ನು ಪ್ರವೇಶಿಸುವ
ಪರಮೇಶ್ವರನ ಸ್ವರೂಪವು ಹಂಸ ಎಂದು ಕರೆಯಲ್ಪಡುವುದು. ಈ ಅಭಿ
ಪ್ರಾಯವು "ಹಂಸಸ್ತು ಪರಮೇಶ್ವರಃ" ಎಂಬ ನೃಸಿಹ್ಮತಾಪನೀಯೋಪ
ನಿಷತ್ತಿನಲ್ಲಿ ವ್ಯಕ್ತವಾಗುವುದು. ಆರ್ತ ಮುಂತಾದ ಚತುರ್ವಿಧಭಕ್ತರಿಂದ
ಪ್ರಪತ್ತಿಭಕ್ತಿಯಿಂದ ಭಜಿಸಲ್ಪಡುಪವಳು. ಒಟ್ಟು ಸೇರಿ ಪರಮೇಶ್ವರ
ಸ್ವರೂಪಳು, ಭಕ್ತರಿಂದ ಭಜಿಸಲ್ಪಡುವವಳು ಎಂದು ಅರ್ಥವು. "ಹಂಸಃ
ಶುಚಿಷತ್" ಎಂಬ ವಚನವು ಈ ಅಭಿಪ್ರಾಯವನ್ನು ವರ್ಣಿಸಿದೆ. ಅಥವಾ
ಬ್ರಹ್ಮನ ವಾಹನವಾದ ಹಂಸಪಕ್ಷಿಯಂತೆ ಮಂದವೂ ರಮ್ಯವೂ ಆದ ಗಮನ
ವುಳ್ಳವಳು. ಅಥವಾ ಕಾಲುಕಡಗವೆಂಬ ಆಭರಣದಿಂದ ಅಲಂಕರಿಸಲ್ಪಟ್ಟ
ಚರಣವುಳ್ಳವಳು. ಅಥವಾ ನಿತ್ಯಾನಿತ್ಯ–ಸಾರಾಸಾರ–ಜಡಾಜಡವಸ್ತುಗಳಲ್ಲಿ

ಯಸ್ಯಾಃ ಸಾ ತಥಾ । ಯದ್ವಾ ಹಂಸಶಬ್ದೇನ ನಿತ್ಯಾನಿತ್ಯಾ ಸಾರಾಸಾರ-ಜಡಾಜಡಾದಿವಸ್ತುವಿವೇಕಸಮರ್ಥಾಃ; ಹಂತಿ ಗಚ್ಛಂತಿ ಪ್ರತಿಗ್ರಾಮಂ ಪ್ರತಿದೇಶಂ ಇತಿ ಹಂಸಾಃ ಪರಿವ್ರಾಜಕಾಃ ಚತುರ್ಥಾಶ್ರಮಿಣಃ ನಿಷ್ಕಾಮಾಃ । ತೇಷಾಂ ಗತಿಃ ಗಮ್ಯತೇ ಜ್ಞಾಯತೇ ಸಾಕ್ಷಾತ್ಕ್ರಿಯತೇ ಇತಿ ಗತಿಃ "ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ" ಇತಿ ಶ್ರುತೇಃ। "ಯೇ ಪೂರ್ವಂ ದೇವಾ ಋಷಯಶ್ಚ ತದ್ವಿದುಃ ತೇ ತನ್ಮಯಾ ಅಮೃತಾ ವೈ ಬಭೂವುಃ" ಇತಿ ಶ್ರುತೇಃ । ಜೀವನ್ಮುಕ್ತ ಪುರುಷಾನುಭೂಯಮಾನಪರಮಾನಂದಮುಕ್ತಿಸ್ವರೂಪೇತ್ಯರ್ಥಃ ।

೩. ಓಂ ಹಾಟಕಾಭರಣೋಜ್ಜ್ವಲಾಯೈ ನಮಃ ।

ಹಾಟಕಾಭರಣೋಜ್ಜ್ವಲಾ । ಹಾಟಕಸ್ಯ ಸುವರ್ಣಸ್ಯ

---

ನೀರಕ್ಷೀರಗಳಂತೆ ವಿವೇಕಬುದ್ಧಿಯುಳ್ಳ ಮತ್ತು ಪ್ರತಿಗ್ರಾಮ ದೇಶಗಳಲ್ಲಿ ಸಂಚರಿಸುತ್ತಿರುವ ಪರಮಹಂಸರಾದ ನಿಷ್ಕಾಮಿಗಳಿಂದ ಸಾಕ್ಷಾತ್ಕರಿಸಲ್ಪಡುವವಳು, ಈ ಅರ್ಥದಲ್ಲಿ ಸನ್ಯಾಸಯೋಗದಿಂದ ಶುದ್ಧಚಿತ್ತರು ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವರೆಂದು ಬೋಧಿಸುವ "ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ" ಎಂಬ ವಚನವು ಪ್ರಮಾಣವು. ಮತ್ತು "ಯೇ ಪೂರ್ವಂ ದೇವಾ ಋಷಯಶ್ಚ ತದ್ವಿದುಃ ತೇ ತನ್ಮಯಾ ಅಮೃತಾ ವೈ ಬಭೂವುಃ" ಎಂಬ ಶ್ರುತಿಯು ಬ್ರಹ್ಮಜ್ಞಾನದಿಂದ ಮೋಕ್ಷಪ್ರಾಪ್ತಿಯನ್ನು ಪ್ರತಿಪಾದಿಸುತ್ತದೆ. ಜೀವನ್ಮುಕ್ತರಿಂದ ಅನುಭವಿಸಲ್ಪಡುವ ಪರಮಾನಂದರೂಪವಾದ ಮುಕ್ತಿಸ್ವರೂಪದಿಂದ ಕೂಡಿ ಪ್ರಕಾಶಿಸುವಳೆಂದು ತಾತ್ಪರ್ಯವು. ಹಂತೀತಿ + ಹಂಸಃ, ತಸ್ಯ ಗತಿಃ ಯಸ್ಯಾಸ್ಸಾ, ಹಂಸಯೋರ್ಗತೀ ಯಸ್ಯಾಃ, ಹಂಸಸ್ಯ + ಗತಿಃ, ಹಂಸಶ್ಚಾಸೌ + ಗತಿಶ್ಚ, ಹಂಸಸ್ಯ + ಗತಿರಿವ ಗತಿಃ ಯಸ್ಯಾಃ ಸಾ, ಹಂಸಯುಕ್ತೇ ಗತೀ ಯಸ್ಯಾಃ ಸಾ, ಹಂಸಾನಾಂ + ಗತಿಃ ಎಂದು ಆಯಾಯ ಅರ್ಥಗಳಿಗೆ ಉಚಿತವಾಗಿ ಅನೇಕ ವಿಧವಾಗಿ ವಿಗ್ರಹಗಳು.

೩. ಸುವರ್ಣನಿರ್ಮಿತವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವಳು. ಅಥವಾ ಸುವರ್ಣಾಂಡದಂತೆ ಇರುವ ಬ್ರಹ್ಮಾಂಡಕ್ಕೆ ಆಭರಣದಂತೆ ಸತ್ತಾ

ಕಾರ್ಯಾಣಿ ಚ ತಾನಿ ಆಭರಣಾನಿ ಚ ಹಾಟಕಾಭರಣಾನಿ ತೈರುಜ್ಜ್ವಲಾ ತಥಾ । ಪ್ರಕಾಶಿತಾ ಅಲಂಕೃತೇತ್ಯರ್ಥಃ । ಹಾಟಕಸ್ಯ ಸುವರ್ಣರೂಪಬ್ರಹ್ಮಾಂಡಸ್ಯ ಆಭರಣವದುಜ್ಜ್ವಲಾ ಪ್ರಕಾಶಕರೀ ಸತ್ತಾಸ್ಫೂರ್ತಿಕರೀತ್ಯರ್ಥಃ । ಯದ್ವಾ ತಸ್ಮಿನ್ ಆಭರಣೈಃ ಮಂಗಲಸೂತ್ರಾದಿಭಿಃ ಸನಾಥಸ್ತ್ರೀಮಂಡಲಸ್ಥ ರೂಪೈರುಜ್ಜ್ವಲತೀತಿ । ಆಹೋಸ್ವಿತ್ ಕಾರ್ಯಕಾರಣದ್ವಯ ರೂಪವಸುದಾನೇನ ವಸುಸ್ವರೂಪೇಣ ವಾ ಉಜ್ಜ್ವಲತಿ ಪ್ರಕಾಶತ ಇತಿ ತಥಾ "ವಸುರಂತರಿಕ್ಷಸತ್" ಇತಿ ಶ್ರುತೇಃ ।

---

ಸ್ಫೂರ್ತಿಗಳನ್ನು ಕೊಟ್ಟು ಪ್ರಕಾಶಪಡಿಸುವವಳು. ಅಥವಾ ಅಂತಹ ಬ್ರಹ್ಮಾಂಡ ದಲ್ಲಿ ಮಂಗಲಸೂತ್ರ ಮುಂತಾದ ಸ್ವಾಸಿನಿಯ ಆಭರಣಗಳಿಂದ ಪ್ರಕಾಶಿಸು ವವಳು. ಅಥವಾ ಸುವರ್ಣ, ಮತ್ತು ಸುವರ್ಣಮಯವಾದ ಒಡವೆಗಳೆಂಬ ದ್ವಿವಿಧವಾದ ಐಶ್ವರ್ಯದ ದಾನದಿಂದಲೂ ಐಶ್ವರ್ಯಸ್ವರೂಪದಿಂದಲೂ ಪ್ರಕಾಶಿಸುವವಳು. "ವಸುರಂತರಿಕ್ಷಸತ್" ಮುಂತಾದ ಶ್ರುತಿಯಲ್ಲಿ ವಸು–ಐಶ್ವರ್ಯರೂಪತ್ವವನ್ನು ಹೇಳಿದೆ. ಹಾಟಕಸ್ಯ + ಆಭರಣಾನಿ, ತೈರುಜ್ಜ್ವಲಾ, ಹಾಟಕಸ್ಯ + ಆಭರಣವದುಜ್ವಲಾ, ಹಾಟಕೈಃ ಆಭರಣೈ ರುಜ್ಜ್ವಲಾ, ಹಾಟಕಂ ಚಾಭರಣಾನಿಚ ತೈರುಜ್ಜ್ವಲಾ ಎಂದು ಅನೇಕ ವಿಧವಾದ ವಿಗ್ರಹಗಳು.

೩೨

**ಹಾರಹಾರಿಕುಚಾಭೋಗಾ ಹಾಕಿನೀ ಹಲ್ಯವರ್ಜಿತಾ ।**
**ಹರಿತ್ಪತಿಸಮಾರಾಧ್ಯಾ ಹಠಾತ್ಕಾರಹತಾಸುರಾ ॥**

**೪. ಓಂ ಹಾರಹಾರಿಕುಚಾಭೋಗಾಯೈ ನಮಃ ।**

**ಹಾರಹಾರಿಕುಚಾಭೋಗಾ । ಹರಸ್ಯ ಪರಮೇಶ್ವರಸ್ಯ ಇಮೇ ಸಂಬಂಧಿನಃ ಹಾರಾಃ ಈಶ್ವರತ್ವಾಪ್ತಕಾಮತ್ವನಿತ್ಯತೃಪ್ತತ್ವಾದಯೋ ಗುಣಾಃ, ತಾನ್ ಹರತಿ ತದ್ವಿಪರೀತವಿದ್ಯಾದ್ಯಾಧಾನೇನ ಉತ್ಪಾದಯತೀತಿ ಹಾರಹಾರೀ ಕುಚಯೋರಾಭೋಗಃ ಪರ್ಯಂತಭೂಮಿಃ ಯಸ್ಯಾಃ ಸಾ ತಥಾ ಪರಮೇಶ್ವರಸ್ಯ ತದ್ವಿಷಯಕವಾಂಛಯಾ ತದೇಕಸಕ್ತಮನಸ್ತ್ವೇನ ತತ್ಕಾರಣೀಭೂತಾವಿದ್ಯಾವಶವೃತ್ತಿತ್ವೇನ ವಶೀಕೃತಮಾಯತ್ವಸ್ವರೂಪೇಶ್ವರತ್ವಸಮಾನಾಧಿಕರಣಾಪ್ತಕಾಮತ್ವಾದಯಃ ಅಪಹೃತಾಃ ಜೀವೇಶ್ವರಯೋರೇಕತ್ರ ತೇಷಾಂ ತದ್ಗುಣಾನಾಂ ಚ ಸಾಮಾ**

---

೪. ಪರಮೇಶ್ವರನಲ್ಲಿರುವ ಈಶ್ವರತ್ವ–ಆಪ್ತಕಾಮತ್ವ–ನಿತ್ಯತೃಪ್ತತ್ವ ಮುಂತಾದ ಗುಣಗಳನ್ನು ಅವಕ್ಕೆ ವಿರುದ್ಧವಾದ ಅವಿದ್ಯಾ ಎಂಬ ಉಪಾಧಿ ಬಲದಿಂದ ಅಪಹರಿಸುವ ಸ್ತನಾಗ್ರಪ್ರದೇಶವುಳ್ಳವಳು. ಪರಮೇಶ್ವರನು ಮಾಯಾವಶನಾಗಿ ದೇವಿಯ ಕುಚಾಭೋಗದಲ್ಲಿ ಆಶಿಸುವ ಮಾನಸವುಳ್ಳವನಾಗಿ ವ್ಯಸನಿಯಾಗುವನು. ಆದರಿಂದ ವಶೀಕೃತಮಾಯತ್ವ–ಈಶ್ವರತ್ವ–ಆಪ್ತಕಾಮತ್ವ ಮುಂತಾದ ಗುಣಗಳು ಅಪಹರಿಸಲ್ಪಡುವುವು. ಜೀವ ಮತ್ತು ಈಶ್ವರರಲ್ಲಿ ಒಂದು ವ್ಯಕ್ತಿಯಲ್ಲಿ ವಿರುದ್ಧ ಗುಣಗಳು ಸಹವಾಸವನ್ನು ಮಾಡಲಾಗುವುದಿಲ್ಲ. ಈಶ್ವರನಿಗೆ ಮತ್ತೊಂದು ವಸ್ತುವಿನಲ್ಲಿ ಇಷ್ಟಸಾಧನತ್ವ ಬುದ್ಧಿಯು ಉದಯಿಸುವುದೇ ಬಹುಭವನಸಂಕಲ್ಪರೂಪವಾದುದರಿಂದ ಆ ಕಲ್ಪನೆಗೆ ಅನುಗುಣವಾಗಿ ಈಶ್ವರನಿಗೆ ಜಗದಾಕಾರತ್ವವನ್ನು ಕಲ್ಪಿಸುವ ಅಧಿಕಗುಣಗಳಿಂದ ದೇವಿಯು ಪ್ರಕಾಶಿಸುವಳೆಂದು ಅತಿಶಯೋಕ್ತಿಯಲ್ಲಿ ತಾತ್ಪರ್ಯವು. ಅಥವಾ

ನಾಧಿಕರಣ್ಯಾಯೋಗಾದಿತ್ಯರ್ಥಃ । ತಥಾ ಚ ಈಶ್ವರಸ್ಯ ಮದಿಷ್ಟಸಾಧನಮಿತ್ಯನ್ಯತ್ರ ಪದಾರ್ಥೇ ಬುದ್ಧಿಮತ್ತ್ವಸ್ಯೈವ ಬಹುಭವನರೂಪತಯಾ ತಸ್ಯ ಜಗದಾಕಾರತ್ವಾಧಾಯಕಾ ಇತ್ಯಧಿಕಗುಣೋತ್ಪ್ರೇಕ್ಷಾವಿಷಯತ್ವೇನ ಭೋಗಸ್ಯಾತಿಶಯೋಕ್ತಿರಿತಿ ದ್ರಷ್ಟವ್ಯಮ್ । ಅಥವಾ ಹಾರಾನ್ ಮುಕ್ತಾಸ್ರಜಃ ಹರತಿ ಆದತ್ತ ಇತಿ ಹಾರಹಾರೀ ಕುಚಾಭೋಗೋ ಯಸ್ಯಾಃ ಸೇತಿ ತಥಾ ಷಟ್ಪ್ರಕಾರೇಣ ಯಥೋಚಿತಕಾಲಂ ಭೂಷಿತವತೀತಿ ಭಾವಃ ।

## ೫. ಓಂ ಹಾಕಿನ್ಯೈ ನಮಃ ।

ಹಾಕಿನೀ । ಹಾಕಯತಿ ಜನ್ಮಮರಣಯೋಃ ಛೇದಯತೀತಿ ಹಾಕಿನೀ; ಹಾಕ್ ಛೇದೇ ಇತಿ ಧಾತುಪಾಠಾತ್ ।

## ೬. ಓಂ ಹಲ್ಯವರ್ಜಿತಾಯೈ ನಮಃ ।

ಹಲ್ಯವರ್ಜಿತಾ। ಹಲಸಂಬಂಧಿ ಹಲ್ಯಂ ಕೃಷ್ಯಾದಿದ್ವಾರಾ ಜನಕತ್ವಂ ತದ್ವರ್ಜಿತಾ । ಕಾಮಾದಿವಿಹೀನಶುದ್ಧಚೈತನ್ಯಸ್ವರೂಪ

---

ವಿವಿಧವಾದ ಮುತ್ತಿನಹಾರಗಳನ್ನು ಆಯಾಯಸಮಯ ವಿಶೇಷಗಳಲ್ಲಿ ಧರಿಸಿಕೊಂಡಿರುವ ಕುಚಗಳ ಅಗ್ರಭಾಗವುಳ್ಳವಳು. ಹರಸ್ಯ + ಇಮೇ ಹಾರಾಃ ತಾನ್ ಹರತೀತಿ ಹಾರಹಾರೀ, ಕುಚಯೋಃ + ಆಭೋಗಃ ಹಾರಹಾರೀ ಕುಚಾಭೋಗಃ ಯಸ್ಯಾಃ ಎಂದು ವಿಗ್ರಹವು.

೫. ಜನ್ಮ ಮತ್ತು ಮರಣಗಳನ್ನು ಛೇದಿಸುವವಳು. ಛೇದನವೆಂಬ ಅರ್ಥದಲ್ಲಿ ಹಾಕ್ ಎಂಬ ಧಾತುವು ಪಠಿತವಾಗಿದೆ. ಹಾಕಯತೀತಿ ಹಾಕಿನೀ ಎಂದು ವಿಗ್ರಹವು.

೬. ನೇಗಲಿನಿಂದ ಸಾಧಿಸುವ ಕೃಷಿ ಮುಂತಾದ ಜೀವನಸಾಧನವು ಹಲ್ಯ ವೆಂದು ಕರೆಯಲ್ಪಡುವುದು. ಕಾಮಾದಿ ವಿಕಾರಗಳಿಂದ ಹೀನವಾದ

ತ್ವಾತ್ । ಹಲ್ಯಂ ಕಪಟಃ ಮಿತ್ರೇಷ್ವಪ್ಯನ್ಯಥಾ ಸ್ವಾಂತಃ ಕರಣಾವಿಷ್ಕೃತಿಃ ತೇನ ವರ್ಜಿತಾ। ಅವಿದ್ಯಾವಿರಹಿತ ತತ್ತ್ವಂಪದ ಲಕ್ಷ್ಯಾರ್ಥಭೂತತ್ವಾದಿತಿ ಯಾವತ್ ।

೭. ಓಂ ಹರಿತ್ಪತಿಸಮಾರಾಧ್ಯಾಯೈ ನಮಃ ।

ಹರಿತ್ಪತಿಸಮಾರಾಧ್ಯಾ। ಹರಿತಾಂ ದಿಶಾಂ ಪತಯಃ ಮಹೇಂದ್ರಾದಯಃ ತೈಃ ಸಮ್ಯಕ್ ಶ್ರದ್ಧಾಭಕ್ತಿಪೂರ್ವಕಂ ಆರಾಧಿತುಂ ಯೋಗ್ಯಾ। ತದ್ವಿಪಕ್ಷನಿಬರ್ಹಣೇಷ್ಟಪ್ರಾಪಕದೈವತತ್ವಾದಿತ್ಯಭಿಸಂಧಿಃ ।

೮. ಓಂ ಹಠಾತ್ಕಾರಹತಾಸುರಾಯೈ ನಮಃ ।

ಹಠಾತ್ಕಾರಹತಾಸುರಾ । ಹಠಾತ್ಕಾರೇಣ ಅತಿಶೀಘ್ರತಯಾ ಹತಾಃ ಪರಾಭೂತಾಃ ಅಸುರಾಃ ಅಸುರಪಕ್ಷಾ ಮಹಿಷಾದ

---

ಶುದ್ಧ ಚೈತನ್ಯ ಸ್ವರೂಪಳಾದ್ದರಿಂದ ಅಂತಹ ವ್ಯಾಪಾರಗಳಿಂದ ವರ್ಜಿತಳಾದವಳು. ಅಥವಾ ಮಿತ್ರರಲ್ಲಿ ಬೇರೆ ವಿಧವಾಗಿ ತೋರಿಸಿಕೊಳ್ಳುವ ಅಂತಃಕರಣ ಭಾವನೆಯು ಕೃತ್ರಿಮವು. ಅದು ಹಲ್ಯ ವೆಂಬ ಶಬ್ದದ ಅರ್ಥವು. ಅವಿದ್ಯಾಮುಂತಾದ ದೋಷಗಳಿಂದ ರಹಿತವಾದ ತತ್, ತ್ವಂ ಪದಗಳಿಂದ ಲಕ್ಷ್ಯಸ್ವರೂಪಳಾದ್ದರಿಂದ ಅಂತಹ ಕಪಟದಿಂದ ವರ್ಜಿತಳು. ಹಲ್ಯೇನ ವರ್ಜಿತಾ ಎಂದು ವಿಗ್ರಹವು.

೭. ಮಹೇಂದ್ರನು ಮೊದಲಾದ ದಿಕ್ಪಾಲಕರಿಂದ ಅವರವರ ವಿಪತ್ತುಗಳನ್ನು ದೂರಮಾಡಿ ಇಷ್ಟಾರ್ಥವನ್ನು ಕೊಡುವುದರಿಂದ ಶ್ರದ್ಧಾ, ಭಕ್ತಿ, ಆದರಗಳಿಂದ ಆರಾಧಿಸಲು ಯೋಗ್ಯಳಾದವಳು. ಹರಿತಾಂ ಪತಯಃ ತೈಃ, ಆರಾಧಯಿತುಂ ಯೋಗ್ಯಾ ಎಂದು ವಿಗ್ರಹವು.

೮. ಬಹುಬಲಶಾಲಿಯಾಗಿ ಅತಿತ್ವರೆಯಿಂದ ಸಂಹರಿಸಲ್ಪಟ್ಟ ಮಹಿಷಾದಿ ಅಸುರರುಳ್ಳವಳು. ಸಮಬಲರಾದರೆ ಲೋಕದಲ್ಲಿ ಎರಡು ಪಕ್ಷಗಳಲ್ಲಿ

**ಯೋ ಯಯಾ ಸಾ ತಥಾ। ಸಮಬಲಯೋಃ ಕಿಲ ಲೋಕೇ ಸಾಮಾದ್ಯುಪಾಯಃ ಬಲಾಬಲವಿಚಾರಣಾ ಚ ಭವತಿ ಪ್ರಬಲಸ್ಯ ತು ದುರ್ಬಲೇಷು ವೈರಿಷು ಸಿಹ್ಮಸ್ಯ ಮೇಷೇಷ್ವಿವ ತದಯೋಗೇನಾತಿತ್ವರಯಾ ಅವಿಚಾರೇಣೈವ ದೇವಲೋಕಸುಖಪ್ರದಾ ಇತಿ ನಾಮಾರ್ಥವಿಚಾರಣಾಯಾಮಿತರೇಷು ಕೈಮುತಿಕನ್ಯಾಯೇನ ತತ್ಕಾರಣತ್ವಂ ಧ್ವನಿತಮಿತಿ ಯೋಜನೀಯಮ್ ।**

---

ಸಾಮ ಮುಂತಾದ ಉಪಾಯಪ್ರಯೋಗವೂ, ಬಲಾಬಲ ನಿರ್ಧಾರಣವೂ ಆವಶ್ಯಕವಾದುದರಿಂದ ನಿಗ್ರಹಾನುಗ್ರಹಗಳು ವಿಲಂಬ ಸಾಧ್ಯವಾಗುವುವು. ಸಿಹ್ಮಕ್ಕೆ ಕುರಿಮರಿಯೊಡನೆ ಬಲಾಬಲಚಿಂತೆಗೆ ಅವಕಾಶವಿಲ್ಲದಂತೆ ಅತಿ ಶೀಘ್ರವಾಗಿ ಸುರ ವಿರೋಧಿಗಳನ್ನು ನಾಶಮಾಡಿ ದೇವಲೋಕಗಳಲ್ಲಿ ಸೌಖ್ಯವನ್ನು ಪ್ರತಿಷ್ಠೆಗೊಳಿಸುವಳು, ಹಠಾತ್ಕಾರೇಣ + ಹತಾಃ + ಅಸುರಾಃ ಯಯಾ ಸಾ ಎಂದು ವಿಗ್ರಹವು.

೩೩

**ಹರ್ಷಪ್ರದಾ ಹವಿರ್ಭೋಕ್ತ್ರೀ ಹಾರ್ದಸಂತಮಸಾಪಹಾ ।**
**ಹಲ್ಲೀಸಲಾಸ್ಯಸಂತುಷ್ಟಾ ಹಂಸಮಂತ್ರಾರ್ಥರೂಪಿಣೀ ॥**

### ೯. ಓಂ ಹರ್ಷಪ್ರದಾಯೈ ನಮಃ ।

**ಹರ್ಷಪ್ರದಾ । ಹರ್ಷಃ ಆನಂದಕಾರಕಃ ಮುಖವಿಕಾಸಾದಿಕಾರ್ಯೋನ್ನೇಯಃ ಸ್ವಾತ್ಮಸಂಭಾವನೇತರಪರಿಭವನಿಮಿತ್ತಚಿತ್ತವೃತ್ತಿವಿಶೇಷಃ । ಕಾರ್ಯಸ್ಯ ಕಾರಣಾವಿನಾಭಾವಿತಯಾ ತತ್ಪ್ರದಾನಂ ತದ್ಧೇತೋರಪ್ಯಾಕ್ಷಿಪತೀತಿ ಸುಖಪ್ರದೇತ್ಯರ್ಥಃ । ಪ್ರದದಾತೀತಿ ಪ್ರದಾ । ಅಥವಾ ಹರ್ಷಂ ಧನಯೌವನಾದಿಸುಖಂ ಪುತ್ರ ಬಂಧುವರ್ಗಾದಿರೂಪೇಣ ಪರಿಹೃತ್ಯ ಪ್ರಕರ್ಷೇಣ ದ್ಯತಿಖಂಡಯತೀತಿ ವಾ ತಥಾ ।**

### ೧೦. ಓಂ ಹವಿರ್ಭೋಕ್ತ್ರ್ಯೈ ನಮಃ ।

**ಹವಿರ್ಭೋಕ್ತ್ರೀ । "ಸ ಬ್ರಹ್ಮಾ ಸ ಶಿವಃ ಸ ಹರಿಃ ಸೇಂದ್ರಃ**

---

೯. ಆನಂದವನ್ನು ಉಂಟುಮಾಡುವ, ಮುಖ ವಿಕಾಸ ಮುಂತಾದ ಕಾರ್ಯಗಳಿಂದ ಊಹಿಸಬಹುದಾದ, ಮತ್ತು ತನ್ನಲ್ಲಿ ಮಹತ್ತ್ವ ಬುದ್ಧಿಯನ್ನು ಪರರಲ್ಲಿ ಅಪಕರ್ಷ ಬುದ್ಧಿಯನ್ನು ಉಂಟುಮಾಡುವ ಚಿತ್ತ ವೃತ್ತಿಯೆಂಬ ಹರ್ಷವನ್ನೂ ಅದಕ್ಕೆ ಕಾರಣವಾದ ಸುಖವನ್ನೂ ಕೊಡುವವಳು. ಕಾರ್ಯವನ್ನು ಕೊಟ್ಟರೆ ಅದಕ್ಕೆ ಅವಿನಾಭೂತವಾಗಿರುವ ಕಾರಣವನ್ನು ಕೊಟ್ಟಂತೆ ಆಗುವುದೆಂಬುದು ಸಹಜವು, ಅಥವಾ ಧನ–ಯೌವನ ಮುಂತಾದುದರಿಂದ ಉಂಟಾದ ಸೌಖ್ಯವನ್ನು ಪುತ್ರ ಬಂಧು ವರ್ಗ ಮುಂತಾದ ರೂಪದಿಂದ ಪರಿಹರಿಸಿ ಅಂತಹ ಮಾದಕ ಹರ್ಷವನ್ನು ನಿರಾಕರಿಸುವವಳು. ಹರ್ಷಂ ಪ್ರದದಾತೀತಿ, ಹರ್ಷಂ ಪ್ರಕರ್ಷೇಣ ದ್ಯತಿ ಎಂದು ವಿಗ್ರಹವು.

೧೦. "ಸ ಬ್ರಹ್ಮಾ ಸ ಶಿವಃ ಸ ಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್" ಎಂಬ ಶ್ರುತಿಯನ್ನು ಅನುಸರಿಸಿ ವಸು ರುದ್ರ ಮುಂತಾದ ನಾನಾ

ಸೋಽಕ್ಷರಃ ಪರಮಃ ಸ್ವರಾಟ್ '' ಇತಿ ಶ್ರುತೇಃ। ವಸುರುದ್ರಾ
ದಿತ್ಯಾಕಾರೇಣ ಹವೀಂಷಿ ಯಜಮಾನೇನ ಅಗ್ನೌ ಪ್ರಕ್ಷಿಪ್ತಾನಿ
ಸ್ವಾಹಾಮುಖೇನ ಭುಂಕ್ತೇ ಇತಿ ತಥಾ। ಯದ್ವಾ ಹವೀಂಷಿ
ಕಾಲಾಂತರಭಾವಿಫಲಾನಿ ಅದೃಷ್ಟಾತ್ಮನಾ ಸೂಕ್ಷ್ಮರೂಪಾಣಿ
ತತ್ತದ್ಯಜಮಾನಜೀವಗತಾನಿ ಭೂತಸೂಕ್ಷ್ಮಾಭಿಧಾನಾನಿ
ಸಮಷ್ಟಿವ್ಯಷ್ಟ್ಯಾತ್ಮನೇಶ್ವರಜೀವೋಪಾಧಿಭೂತಾನಿ ಮಾಯಾ
ವಿದ್ಯಾಶಬ್ದಿತಾನಿ ಮುಕ್ತಿಪರ್ಯಂತಂ ಭುನಕ್ತಿ ಪಾಲಯತೀತಿ
ವಾ ತಥಾ। ಅನ್ಯಥಾ ಸಂಸಾರಸ್ಯ ಅನಾದಿತ್ವಾಭಾವೇನ ಆದಿ
ಮಶರೀರಾದ್ಯುತ್ಪತ್ತೌ ಅಂಗೀಕ್ರಿಯಮಾಣಾಯಾಂ ಪ್ರಪಂ
ಚಸ್ಯಾಕಸ್ಮಿಕತ್ವಮಕೃತಾಭ್ಯಾಗಮಪ್ರಸಂಗಶ್ಚ ಸ್ಯಾದಿತಿ ಭಾವಃ।

೧೧. ಓಂ ಹಾರ್ದಸಂತಮಸಾಪಹಾಯೈ ನಮಃ।

ಹಾರ್ದಸಂತಮಸಾಪಹಾ। ಹೃದಯಾವಚ್ಛಿನ್ನಃ ಹಾರ್ದಃ
'' ಯೋ ವೇದ ನಿಹಿತಂ ಗುಹಾಯಾಮ್ '' ಇತಿ ಶ್ರುತೇಃ।

---

ಆಕಾರಗಳನ್ನು ಧರಿಸಿ ಅಗ್ನಿಯಲ್ಲಿ ಯಜಮಾನನು ಹಾಕಿರುವ ಅನೇಕ ಹವಿಸ್ಸು
ಗಳನ್ನು ಸ್ವಾಹಾದೇವಿಯ ಮುಖದಿಂದ ಭುಂಜಿಸುವವಳು. ಅಥವಾ ಕಾಲಾಂ
ತರದಲ್ಲಿ ಫಲವನ್ನು ಕೊಡುವ ಅದೃಷ್ಟ ವೆಂಬ ಸೂಕ್ಷ್ಮರೂಪದಿಂದ ಆಯಾಯ
ಯಜಮಾನ ಜೀವರಲ್ಲಿರುವ, ಭೂತಸೂಕ್ಷ್ಮವೆಂಬ ಹೆಸರಿನಿಂದ ಅಂಕಿತವಾದ
ಜೀವ ಈಶ್ವರರಿಗೆ ಸಮಷ್ಟಿ ವ್ಯಷ್ಟಿ ರೂಪವಾದ ಉಪಾಧಿದ್ವಯದ ಆಕಾರದಿಂದ
ಮಾಯಾ–ಅವಿದ್ಯಾ ಎಂದು ಎರಡು ಭೇದಗಳಿಂದ ಕೂಡಿದ ಹವಿಸ್ಸುಗಳನ್ನು
ಮುಕ್ತಿ ಪರ್ಯಂತವೂ ಪಾಲಿಸುವವಳು. ಇದನ್ನು ಒಪ್ಪದೇ ಸಂಸಾರದ ಅನಾ
ದಿತ್ವವನ್ನು ವಿರೋಧಿಸಿ ಆದಿ ಶರೀರದ ಉತ್ಪತ್ತಿಯನ್ನು ಸಾಧಿಸುವುದಾದರೆ,
ಪ್ರಪಂಚವು ಆಕಸ್ಮಿಕವಾಗಿ ಹುಟ್ಟಬೇಕೆಂಬ ಮತ್ತು ಅಕೃತಾಭ್ಯಾಗಮ, ಕೃತ
ಪ್ರಣಾಶಗಳೆಂಬ ದೋಷಗಳಿಗೆ ಅವಕಾಶವಾಗುವುದು. ಹವೀಂಷಿ ಭುಂಕ್ತೇ ಇತಿ
ಹವೀಂಷಿ ಭುನಕ್ತಿ ಇತಿ, ಎಂದು ವಿಗ್ರಹವು.

೧೧. ಹೃದಯದೇಶದಿಂದ ಅವಚ್ಛಿನ್ನನಾಗಿರುವ ಆತ್ಮಸ್ವರೂಪದಲ್ಲಿ ಆವಾ
ರಕವಾಗಿರುವ ಆತ್ಮವಸ್ತುವಿನ ಆಶ್ರಯ ವಿಷಯಗಳಿಂದ ಕೂಡಿದ ಅಜ್ಞಾನ

ಅಸ್ಮಿನ್ ಯತ್ಸಂತಮಸಂ ಆವಾರಕತ್ವಾತ್ "ತಮ ಆಸೀತ್" ಇತಿ ಶ್ರುತ್ಯಾ ಚ ಆತ್ಮವಿಷಯಕಂ ತದಾಶ್ರಯಮಜ್ಞಾನಂ ಅನರ್ಥಕರಂ ಅವ್ಯಾಕೃತಾಕಾಶಮಿತ್ಯುಚ್ಯತೇ। ಮಹಾವಾಕ್ಯ ಶ್ರವಣಜನ್ಯಧೀವೃತ್ತಿಪ್ರತಿಫಲಿತಾಕಾರೇಣಾಪಹಂತೀತಿ ಸಾ ತಥಾ। ನಾಹಂ ಬ್ರಹ್ಮಾಸ್ಮಿ ಸಂಸಾರೀ ಬ್ರಹ್ಮ ನಾಸ್ತಿ ನ ಭಾತಿ ಚ-ಇತ್ಯಜ್ಞಾನಸ್ಯ ಸೋಽಹಂ ಬ್ರಹ್ಮಾಸ್ಮಿ ಸಚ್ಚಿದಾನಂದ ಲಕ್ಷಣಃ ಇತಿ ಏಕಾಕಾರವೃತ್ತಿಬಾಧ್ಯತ್ವನಿಯಮೇನ ಬಾಧಾಧಿಷ್ಠಾನಂ "ನೇಹ ನಾನಾ" ಇತಿ ಶ್ರುತಿಸಿದ್ಧಬ್ರಹ್ಮರೂಪೇತಿ ಯಾವತ್।

## ೧೨. ಓಂ ಹಲ್ಲೀಸಲಾಸ್ಯಸಂತುಷ್ಟಾಯೈ ನಮಃ।

ಹಲ್ಲೀಸಲಾಸ್ಯಸಂತುಷ್ಟಾ। ಹಲ್ಲೀಸ್ಯೈಃ ಚಿತ್ರದಂಡ್ಯೈಃ ಕುಮಾರಿ

---

ವೆಂಬ ಅಂಧಕಾರವನ್ನು ಅಪಹರಿಸುವವಳು. ಪರಮಾತ್ಮನು ಹೃದಯಾವಚ್ಛಿನ್ನನಾಗಿರುವನೆಂಬ ಅಂಶವನ್ನು "ಯೋ ವೇದ ನಿಹಿತಂ ಗುಹಾಯಾಮ್" ಎಂಬ ಶ್ರುತಿವಚನವು ಬೋಧಿಸುತ್ತದೆ. ಹಾಗೆ "ತಮ ಆಸೀತ್" ಎಂಬ ಶ್ರುತಿಯು ಆತ್ಮಾವಾರಕವಾದ ಅಜ್ಞಾನದ ಅಸ್ತಿತ್ವವನ್ನು ಬೋಧಿಸುತ್ತದೆ. ಆ ಅಜ್ಞಾನಕ್ಕೆ ಅವ್ಯಾಕೃತಾಕಾಶವೆಂದು ಮತ್ತೊಂದು ಹೆಸರುಂಟು. ಮಹಾವಾಕ್ಯ ಶ್ರವಣದಿಂದ ಉಂಟಾದ ಜ್ಞಾನವೃತ್ತಿಯಲ್ಲಿ ಪ್ರತಿಬಿಂಬಿಸಿದ ಚೈತನ್ಯಾಕಾರವು ಆ ಅಜ್ಞಾನವನ್ನು ನಾಶಮಾಡುತ್ತದೆ, ಅಜ್ಞಾನವು "ನಾಹಂ ಬ್ರಹ್ಮಾಸ್ಮಿ ಸಂಸಾರೀ ಬ್ರಹ್ಮ ನಾಸ್ತಿ ನ ಭಾತಿ ಚ" ಎಂಬಂತೆ ಬ್ರಹ್ಮವಸ್ತುವಿನ ಸತ್ತಾ-ಭಾನಗಳನ್ನು ಪ್ರತಿಬಂಧಿಸಿ ತನ್ನ ಕಾರ್ಯವನ್ನು ಮಾಡುವುದು. ಅಹಂ ಬ್ರಹ್ಮಾಸ್ಮಿ ಎಂಬ ಅಖಂಡಾಕಾರವೃತ್ತಿಯಿಂದ ಅಂತಹ ಅಜ್ಞಾನವು ಸಂಪೂರ್ಣವಾಗಿ ನಾಶಹೊಂದುವುದರಿಂದ "ನೇಹ ನಾನಾಸ್ತಿ" ಮುಂತಾದ ಶ್ರುತಿವಚನದಿಂದ ಸಿದ್ಧಿಸುವ ಅಧಿಷ್ಠಾನ ಸ್ವರೂಪಳೆಂದು ತಾತ್ಪರ್ಯವು. ಹೃದಾವಚ್ಛಿನ್ನಃ ಹಾರ್ದಃ, ತಸ್ಮಿನ್ ಸಂತಮಸಂ ತತ್ ಅಪಹಂತಿ ಎಂದು ವಿಗ್ರಹವು.

೧೨. ಚಿತ್ರದಂಡಗಳನ್ನು ಧರಿಸಿ ಕುಮಾರಿಕೆಯರು ಏಕತಾಲಾದಿಗಳಿಂದ ಕೂಡಿದ ಗೀತಪೂರ್ವಕವಾಗಿ ಮಂಡಲಾಕಾರವಾಗಿ ಮಾಡುವ ನೃತ್ಯದಲ್ಲಿ ಸಂತು

ಕಾಭಿಃ ಏಕತಾಲಾದಿಯುಕ್ತಗೀತಪೂರ್ವಕಂ ಯತ್ ಲಾಸ್ಯಂ ನರ್ತನಂ ತಸ್ಮಿನ್ ಸಂತುಷ್ಟಾ ಪ್ರೀತಿಮತೀತ್ಯರ್ಥಃ । "ನಾರೀಣಾಂ ಮಂಡಲೀನೃತ್ಯಂ ಬುಧಾ ಹಲ್ಲೀಸಕಂ ವಿದುಃ" ಇತಿ ಹಾರಾವಲೀಕೋಶಾತ್ ಮಂಡಲಾಕಾರನೃತ್ಯಸಂತುಷ್ಟೇತ್ಯರ್ಥಃ ।

೧೩. ಓಂ ಹಂಸಮಂತ್ರಾರ್ಥರೂಪಿಣ್ಯೈ ನಮಃ ।

ಹಂಸಮಂತ್ರಾರ್ಥರೂಪಿಣೀ । ಹಂಸೈಃ ಪರಮಹಂಸೈಃ ಉಪಾಸ್ಯೋ ಯೋ ಮಂತ್ರಃ ಪ್ರಣವಃ ತಸ್ಯ ಶಾಸ್ತ್ರಬೋಧಿತ ತತ್ತ್ವಾರ್ಥರೂಪಿಣೀ । ವಾಚ್ಯಲಕ್ಷ್ಯಾರ್ಥಸ್ವರೂಪೇಣ ಜ್ಞಾಯಮಾನೇತ್ಯರ್ಥಃ । ಅಥವಾ ಹಂಸಮಂತ್ರಃ ಅಜಪಾ । ಹಂಕಾರಸಕಾರೌ ಬೋಧಿತತತ್ತ್ವಂಪದಾರ್ಥೌ, ಹಂಕಾರಸ್ಯ ಪರೋಕ್ಷವಾಚಿನಃ ಸಕಾರಸ್ಯ ತಾದೃಶಸ್ಯ ಚ ಭಾಗತ್ಯಾಗಲಕ್ಷಣಯಾ ನಿಷ್ಪ್ರಪಂಚನಿತ್ಯಶುದ್ಧಮುಕ್ತಬುದ್ಧಸಚ್ಚಿದಾನಂದಸ್ವರೂಪೇತ್ಯರ್ಥಃ ।

---

ಷ್ಟಳಾಗುವವಳು. "ನಾರೀಣಾಂ ಮಂಡಲೀನೃತ್ಯಂ ಬುಧಾ ಹಲ್ಲೀಸಕಂ ವಿದುಃ" ಎಂಬ ಕೋಶದಿಂದ ಕನ್ನಿಕೆಯರ ಕೋಲಾಟವು ಹಲ್ಲೀಸವೆಂದು ಕರೆಯಲ್ಪಡುತ್ತದೆ. ಹಲ್ಲೀಸೈಃ + ಲಾಸ್ಯಂ, ತಸ್ಮಿನ್ ಸಂತುಷ್ಟಾ ಎಂದು ವಿಗ್ರಹವು.

೧೩. ಪರಮಹಂಸರಿಂದ ಉಪಾಸನೆಮಾಡಲ್ಪಡುವ ಪ್ರಣವಮಂತ್ರಕ್ಕೆ ಶಾಸ್ತ್ರದಿಂದ ಬೋಧಿಸಲ್ಪಡುವ ತತ್ತ್ವಾರ್ಥಸ್ವರೂಪಳಾದವಳು, ಪ್ರಣವದಿಂದ ಅಭಿಧಾವೃತ್ತಿಯಿಂದಲೂ ಲಕ್ಷಣಾವೃತ್ತಿಯಿಂದಲೂ ದೇವಿಯ ಸಗುಣನಿರ್ಗುಣ ರೂಪಗಳು ಬೋಧಿಸಲ್ಪಡುವುವು, ಅಥವಾ ಅಜಪಾ ಎಂಬ ಮಂತ್ರವು ಹಂಸವೆನಿಸಿರುವುದು. ಹಂಕಾರ, ಮತ್ತು ಸಕಾರಗಳು ಬೋಧಿಸಲ್ಪಟ್ಟ ತತ್ + ತ್ವಂ ಪದಾರ್ಥಗಳು. ಪ್ರತ್ಯಕ್ಷ ಪರೋಕ್ಷಾದಿ ಧರ್ಮಗಳಿಂದ ಕೂಡಿದ ವಿಶಿಷ್ಟ ಚೇತನಗಳನ್ನು ಬೋಧಿಸುವ ಹಂ-ಸ-ಕಾರಗಳಿಂದ ಭಾಗತ್ಯಾಗ ವೆಂಬ ಲಕ್ಷಣಾವೃತ್ತಿಯಿಂದ ನಿತ್ಯ ಶುದ್ಧ ಬುದ್ಧಮುಕ್ತಸಚ್ಚಿದಾನಂದ ಸ್ವರೂಪವು ಬೋಧಿಸಲ್ಪಡುತ್ತದೆ. ಹಂಸೈಃ ಉಪಾಸ್ಯೋ ಮಂತ್ರಃ, ತಸ್ಯ + ಅರ್ಥಃ, ತಸ್ಯ ಸ್ವರೂಪಂ ಯಸ್ಯಾಃ ಸಾ, ಅಥವಾ ಹಂಸ ಇತಿ ಮಂತ್ರಃ, ತಸ್ಯ ಅರ್ಥಃ, ಸ್ವರೂಪಂ ಯಸ್ಯಾಃ ಎಂದು ವಿಗ್ರಹವು.

೩೨

**ಹಾನೋಪಾದಾನನಿರ್ಮುಕ್ತಾ ಹರ್ಷಿಣೀ ಹರಿಸೋದರೀ।**
**ಹಾಹಾಹೂಹೂಮುಖಸ್ತುತ್ಯಾ ಹಾನಿವೃದ್ಧಿವಿವರ್ಜಿತಾ॥**

**೧೪. ಓಂ ಹಾನೋಪಾದಾನನಿರ್ಮುಕ್ತಾಯೈ ನಮಃ।**

ಹಾನೋಪಾದಾನನಿರ್ಮುಕ್ತಾ। ಅನಿಷ್ಟಸಾಧನೇ ಹಾನಂ ಪರಿತ್ಯಾಗಕ್ರಿಯಾ। ಇಷ್ಟಸಾಧನೇ ಉಪಾದಾನಂ ಸ್ವೀಕಾರ ಕ್ರಿಯಾ। ಪರಿಜಿಹೀರ್ಷಾ ಆದಿತ್ಸಾ ವಾ। "ಅಪ್ರಾಣೋ ಹ್ಯಮನಾಃ ಶುಭ್ರಃ" "ಅಕಾಯಂ" "ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ" ಇತಿ ಬಹುಶ್ರುತೇಃ ಅಶರೀರಸ್ಯ ಬ್ರಹ್ಮಣೋಽಂತಃಕರಣಾದಿ ಧರ್ಮಾಣಾಮಸಂಭವಾತ್ ತಾಭ್ಯಾಂ ನಿರ್ಮುಕ್ತಾ ನಿಸ್ಸಂಗೇ ತ್ಯರ್ಥಃ। ವಿಮುಕ್ತಶ್ಚ "ವಿಮುಚ್ಯತ" ಇತಿ ಶ್ರುತೇಃ।

**೧೫. ಓಂ ಹರ್ಷಿಣ್ಯೈ ನಮಃ।**

ಹರ್ಷಿಣೀ। "ಏಷ ಹ್ಯೇವಾನಂದಯಾತಿ" ಇತಿ ಶ್ರುತೇಃ।

---

೧೪. ಅನಿಷ್ಟಸಾಧನವಸ್ತುವನ್ನು ವರ್ಜಿಸುವುದು, ಇಷ್ಟ ಸಾಧನವಸ್ತುವನ್ನು ಸ್ವೀಕರಿಸುವುದೆಂಬ ಹಾನ–ಉಪಾದಾನಕ್ರಿಯೆಗಳಿಂದ ಅಥವಾ ಆ ಅಭಿಲಾಷೆಯಿಂದ ಶೂನ್ಯಳಾದವಳು. ಅಪ್ರಾಣೋ ಹ್ಯಮನಾಃ ಶುಭ್ರಃ, ಅಕಾಯಮ್, ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ಮುಂತಾದ ಶ್ರುತಿಗಳಿಂದ ಅಶರೀರನಾದ ಬ್ರಹ್ಮವಸ್ತುವಿಗೆ ಮಾನಸ ಧರ್ಮಗಳ ಸಂಪರ್ಕವಿಲ್ಲದ್ದರಿಂದ ನಿರ್ಮುಕ್ತಳೆಂದು ತಾತ್ಪರ್ಯವು. "ವಿಮುಕ್ತಶ್ಚ ವಿಮುಚ್ಯತೇ" ಎಂಬುದು ಸರ್ವಧರ್ಮ ನಿರ್ಮುಕ್ತವಾಗಿರುವ ಬ್ರಹ್ಮಭಾವವನ್ನು ಸೂಚಿಸುವುದು. ಹಾನಂ ಚ + ಉಪಾದಾನಂ ಚ, ತಾಭ್ಯಾಂ ನಿರ್ಮುಕ್ತಾ ಎಂದು ವಿಗ್ರಹವು.

೧೫. ಏಷ ಹ್ಯೇವಾನಂದಯಾತಿ ಎಂಬ ಶ್ರುತಿವಾಕ್ಯದಂತೆ ಆನಂದ ಪರಿ

ಹರ್ಷಯತಿ ಸಂತೋಷಯತೀತಿ ವಾ ।

೧೬. ಓಂ ಹರಿಸೋದರ್ಯೈ ನಮಃ ।

ಹರಿಸೋದರೀ । ಹರಿಣಾ ಕೃಷ್ಣೇನ ಸಮಾನಂ ಏಕಂ ಉದರಂ ಉತ್ ಈಷತ್ ಅರಂ ಭೇದಕಂ ಅವಚ್ಛೇದಕಮಿತ್ಯರ್ಥಃ । ಉಚ್ಚೈರರಂ ಕೂಟೋ ವಾ ಅತ್ಯಲ್ಪಮಿಥ್ಯಾಭೂತ ಮಾಯೋಪಾಧಿಕಚೈತನ್ಯಾವಸ್ಥಾವಿಶೇಷರೂಪಾ । "ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ । ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್" "ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್" ಇತ್ಯಾದಿ ಶ್ರುತಿ ಸ್ಮೃತಿಭ್ಯಾಂ ಈಶ್ವರಸ್ಯ ರೂಪಭೇದವತ್ತ್ವಾವಗಮಾದಿತಿ ಮಂತವ್ಯಮ್ ।

೧೭. ಓಂ ಹಾಹಾಹೂಹೂಮುಖಸ್ತುತ್ಯಾಯೈ ನಮಃ ।

ಹಾಹಾಹೂಹೂಮುಖಸ್ತುತ್ಯಾ । ಹಾಹಾಹೂಹೂನಾಮ

---

ಪೂರ್ಣಳಾಗಿ ಸರ್ವರನ್ನೂ ಸಂತೋಷಪಡಿಸುವವಳು. ಹರ್ಷಯತೀತಿ ಹರ್ಷಿಣೀ ಎಂದು ವಿಗ್ರಹವು.

೧೬. ಕೃಷ್ಣನೊಡನೆ ಅಭಿನ್ನವಾದ ಸ್ವಲ್ಪ ಮಾತ್ರ ಭೇದಕವುಳ್ಳವಳು. ಅಥವಾ ಉದರ ಎಂಬ ಪದಕ್ಕೆ ಅತ್ಯಲ್ಪ ಮಿಥ್ಯಾಸ್ವರೂಪವಾದ ಮಾಯೋಪಾಧಿ ಸಂಪರ್ಕವುಳ್ಳ ಚೈತನ್ಯ ಎಂದು ಅರ್ಥವು. ಅಂತಹ ಸ್ವರೂಪವುಳ್ಳವಳು. "ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್। ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್, ದೇವಾತ್ಮಶಕ್ತಿಂಸ್ವಗುಣೈರ್ನಿಗೂಢಾಮ್" ಎಂಬ ಶ್ರುತಿ ಸ್ಮೃತಿವಚನಗಳಿಂದ ಶಕ್ತಿಭೂತವಾದ ಮಾಯಾ ಮತ್ತು ಈಶ್ವರರಿಗೆ ರೂಪಭೇದವುಂಟೆಂಬುದು ವ್ಯಕ್ತವಾಗಿರುವುದು. ಹರಿಣಾ ಸಮಾನಂ ಏಕಂ ಉತ್ ಅರಂ ಯಸ್ಯಾಃ ಎಂದು ವಿಗ್ರಹವು.

೧೭. ಹಾಹಾ ಹೂಹೂ ಮುಂತಾದ ಗಂಧರ್ವ ಮುಖ್ಯರಿಂದ ಸ್ತುತಿಸಲು

ಕಗಂಧರ್ವೌ ಮುಖ್ಯೌ ಯೇಷಾಂ ಜನಾನಾಂ ತೈಸ್ತಥಾ। ಸ್ತುತ್ಯಾ ಗುಣಿನಿಷ್ಠಗುಣಾಭಿಧಾನಂ ಸ್ತುತಿಃ। ತದಾಶ್ರಯತ್ವೇನ ಪ್ರತಿಪಾದನೀಯೇತ್ಯರ್ಥಃ।

## ೧೮. ಓಂ ಹಾನಿವೃದ್ಧಿವಿವರ್ಜಿತಾಯೈ ನಮಃ।

ಹಾನಿವೃದ್ಧಿವಿವರ್ಜಿತಾ। ಅವಯವೋಪಚಯರೂಪಾ ವೃದ್ಧಿಃ ತದಪಚಯರೂಪಾ ಹಾನಿಃ; ತಾಭ್ಯಾಂ ವರ್ಜಿತಾ। "ನ ಕರ್ಮಣಾ ವರ್ಧತೇ ನೋ ಕನೀಯಾನ್" ಇತಿ ಶ್ರುತೇಃ। ಉಪಲಕ್ಷಣಂ ಷಡ್ಭಾವವಿಕಾರಾಣಾಂ ಶರೀರಧರ್ಮತ್ವೇನ ಕರ್ಮನಿಮಿತ್ತತ್ವಾದೀಶ್ವರೇ ತದಭಾವೇನ ನಿರ್ವಿಕಾರೇತ್ಯರ್ಥಃ।

---

ಯೋಗ್ಯಳಾದವಳು. ಗುಣಿವ್ಯಕ್ತಿಯಲ್ಲಿರುವ ಗುಣಗಳ ಪ್ರಶಂಸೆಯು ಸ್ತೋತ್ರ ರೂಪವಾಗಿದೆ. ಸ್ತುತಿಯಿಂದ ಸತ್ಕರಿಸಲ್ಪಡುವಳಾಗಿರುವಳು. ಹಾಹಾಶ್ಚ ಹೂಹೂಶ್ಚ ತೌ ಮುಖೇ ಯೇಷಾಂ, ತೈಃ ಸ್ತೋತುಂ ಯೋಗ್ಯಾ ಎಂದು ವಿಗ್ರಹವು.

೧೮. ಅವಯವಗಳ ಉಪಚಯವೆಂಬ ವೃದ್ಧಿ ವಿಕಾರ, ಅವುಗಳ ಅಪಚಯವೆಂಬ ಹಾನಿವಿಕಾರಗಳಿಂದ ರಹಿತಳಾದವಳು. "ನ ಕರ್ಮಣಾ ವರ್ಧತೇ ನೋ ಕನೀಯಾನ್" ಎಂಬ ಉಪನಿಷದ್ವಚನದಿಂದ ವೃದ್ಧಿಕ್ಷಯವಿಲ್ಲವೆಂಬುದು ವೇದ್ಯವಾಗುವುದು, ಷಡ್ಭಾವವಿಕಾರಗಳು ಶರೀರಧರ್ಮವಾದುದರಿಂದ ಈಶ್ವರನಿಗೆ ಕರ್ಮನಿಮಿತ್ತವಾದ ಶರೀರವಿಲ್ಲದ್ದರಿಂದ ಜನ್ಮ ಮುಂತಾದ ಯಾವ ಭಾವ ವಿಕಾರಗಳೂ ಇಲ್ಲ, ಎಂದು ಹೇಳಲು ಉಪಲಕ್ಷಣವಾಗಿ ವೃದ್ಧಿ ಹಾನಿಗಳ ರಾಹಿತ್ಯವು ಹೇಳಲ್ಪಟ್ಟಿದೆ. ಹಾನಿಶ್ಚ + ವೃದ್ಧಿಶ್ಚ ತಾಭ್ಯಾಂ ವರ್ಜಿತಾ, ಎಂದು ವಿಗ್ರಹವು.

## ೩೩

**ಹಯ್ಯಂಗವೀನಹೃದಯಾ ಹರಿಗೋಪಾರುಣಾಂಶುಕಾ ।**
**ಲಕಾರಾಖ್ಯಾ ಲತಾಪೂಜ್ಯಾ ಲಯಸ್ಥಿತ್ಯುದ್ಭವೇಶ್ವರೀ ॥**

**೧೯. ಓಂ ಹಯ್ಯಂಗವೀನಹೃದಯಾಯೈ ನಮಃ ।**

**ಹಯ್ಯಂಗವೀನಹೃದಯಾ । ಹಯ್ಯಂಗವೀನವತ್ ನವನೀತ ಸದೃಶವಿರಲಮೃದುದ್ರವಯವಪರಿಣಾಮದ್ರವತ್ವಸಾದೃಶ್ಯ—ಯೋಗಿಹೃದಯಕೃಪಾರಸರೂಪಪರಿಣಾಮವತೀತಿ ಸಾ ತಥಾ। ಹೃದಯಾಭಾವೇಽಪಿ ಸರ್ವಾತ್ಮಕತಯಾ ತದ್ವತ್ತ್ವಮ್। ಈಕ್ಷಣಾದಿವನ್ಮಾಯಾಪರಿಣಾಮರೂಪಾ ದಯಾ ವಾ ಹೃದಯಶಬ್ದೇನ ಉಚ್ಯತೇ । "ಅಪಾಗಮನಾಃ" ಇತಿ ಶ್ರುತ್ಯಾ ಸರ್ವನಿಷೇಧಾತ್ ।**

**೨೦. ಓಂ ಹರಿಗೋಪಾರುಣಾಂಶುಕಾಯೈ ನಮಃ ।**

**ಹರಿಗೋಪಾರುಣಾಂಶುಕಾ । ಹರಿಗೋಪಃ ಇಂದ್ರಗೋಪಃ ।**

---

೧೯. ಬೆಣ್ಣೆಯಲ್ಲಿರುವ ಅವಯವಗಳ ವಿರಲಭಾವವೆಂಬ ಮೃದುತ್ವ, ದ್ರವಪರಿಣಾಮ ಮುಂತಾದ ಸಾದೃಶ್ಯವನ್ನು ಹೊಂದಿದ ಹೃದಯದ ಕೃಪಾರಸ ಪರಿಣಾಮವುಳ್ಳವಳು. ಹೃದಯರೂಪವಾದ ಕರಣವಿಲ್ಲದಿದ್ದರೂ ಸರ್ವಾಂಶಗಳಲ್ಲಿಯೂ ಕೃಪಾರಸವೇ ಮೂರ್ತಿರೂಪವಾಗಿರುವುದು. ಈಕ್ಷಣ, ಸಂಕಲ್ಪಗಳಂತೆ ಮಾಯಾಪರಿಣಾಮರೂಪವಾದ ದಯಾವೃತ್ತಿಯನ್ನು ಹೃದಯಶಬ್ದವು ಬೋಧಿಸುವುದೂ ಸಮಂಜಸವಾಗಿದೆ. ಶರೀರೇಂದ್ರಿಯಗಳು ಪರಮಾತ್ಮನಲ್ಲಿ ಇಲ್ಲವೆಂಬುದಕ್ಕೆ "ಅಪಾಗಮನಾಃ" ಎಂಬ ಶ್ರುತಿಯು ಪ್ರಮಾಣವು. ಹೈಯಂಗವೀನ, ವತ್ + ಹೃದಯಂ ಯಸ್ಯಾಃ ಸಾ ಎಂದು ವಿಗ್ರಹವು.

೨೦. ಆರ್ದ್ರಾ—ಮಘಾನಕ್ಷತ್ರಗಳ ಮಳೆಗಳಲ್ಲಿ ಹುಟ್ಟುವ ಎಂಟುಕಾಲು, ರಕ್ತವರ್ಣ, ಮೃದುವಾದ ದೇಹಗಳಿಂದ ಕೂಡಿದ ಒಂದು ಬಗೆಯ ಕೀಟವನ್ನು

ಆರ್ದ್ರಾಮಘಾನಕ್ಷತ್ರೇ ವರ್ಷಾಸೂದ್ಭವಾಃ ಅಷ್ಟಪಾದಾಃ ರಕ್ತವರ್ಣಾಃ ಮೃದ್ವಂಗಾಃ ಕೀಟವಿಶೇಷಾಃ ತಥಾ ಶೋಣ ಮಂಶುಕಂ ಅಂಬರಂ, ಸ್ವಾರ್ಥೇ ಕಪ್ರತ್ಯಯಃ; ಕಿರಣಾನಿ ವಾ ಯಸ್ಯಾಃ ಸಾ ತಥಾ ।

ಇತಿ ತ್ರಿಶತ್ಯಾಂ ವಿದ್ಯಾಯಾಂ ನವಮಾಕ್ಷರನಾಮವ್ಯಾಖ್ಯಾಯಾಂ
ಹಕಾರವರ್ಣಪ್ರಕಾಶಃ ನವಮಃ।

## ೧. ಓಂ ಲಕಾರಾಖ್ಯಾಯೈ ನಮಃ ।

ಲಕಾರಾಖ್ಯಾ । ಲಕಾರಯುಕ್ತಃ ಮೂಲಮಂತ್ರಃ ಆಖ್ಯಾ ವಾಚಕಶಬ್ದಃ ಯಸ್ಯಾಃ ಸಾ ತಥಾ । ಲಕಾರಸ್ಯ ಶಕ್ರಬೀಜಸ್ಯ ವಾರ್ಥಃ; ಸೇಂದ್ರ ಇತಿ ಶ್ರುತೇಃ । ಲಕಾರಯುಕ್ತಸ್ಯ ಮಾಯಾಬೀಜಸ್ಯ ವಾ ಸ್ತಬ್ಧಮಾಯೇತ್ಯರ್ಥಃ ।

---

ಇಂದ್ರಗೋಪವೆಂದು ಕರೆಯುವರು. ಆ ಕೀಟದಂತೆ ಕೆಂಪಾದ ವಸ್ತ್ರವನ್ನು ಧರಿಸಿದವಳು. ಅಥವಾ ಹಾಗೆ ಕೆಂಪಾದ ಅಂಶು–ಕಿರಣಪುಂಜವುಳ್ಳವಳು. ಹರಿಗೋಪವತ್ + ಅರುಣಂ + ಅಂಶುಕಂ ಯಸ್ಯಾಃ ಸಾ ಅಥವಾ ಅಂಶವ ಏವ ಅಂಶುಕಾಃ ಅರುಣಾ ಅಂಶುಕಾ ಯಸ್ಯಾಃ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮವ್ಯಾಖ್ಯಾನದಲ್ಲಿ ನವಮಪ್ರಕಾಶವು ಸಮಾಪ್ತವು.

೧. ಲಕಾರದಿಂದ ಕೂಡಿದ ದ್ವಿತೀಯಖಂಡವುಳ್ಳ ಮೂಲಮಂತ್ರವು ವಾಚಕವಾಗಿ ಉಳ್ಳವಳು. ಆ ಮಂತ್ರಕ್ಕೆ ವಾಚ್ಯಳು ಎಂದು ತಾತ್ಪರ್ಯವು. ಅಥವಾ ಇಂದ್ರನ ಬೀಜವರ್ಣವಾದ ಲಕಾರಕ್ಕೆ ಅರ್ಥರೂಪಳಾದವಳು. "ಸೇಂದ್ರಃ" ಎಂಬ ಶ್ರುತಿಯು ಇಂದ್ರಾತ್ಮಕತ್ವವನ್ನು ಬೋಧಿಸುತ್ತದೆ. ಅಥವಾ ಮಾಯಾಬೀಜಾಕ್ಷರದ ಅರ್ಥಸ್ವರೂಪಳು. ಸ್ತಬ್ಧವಾದ ಮಾಯಾ ಸ್ವರೂಪಳೆಂದು ತಾತ್ಪರ್ಯವು. ಲಕಾರಃ ಆಖ್ಯಾ ಯಸ್ಯಾಃ, ಲಕಾರಸ್ಯ ಆಖ್ಯಾ ಎಂದು ವಿಗ್ರಹವು,

## ೨- ಓಂ ಲತಾಪೂಜ್ಯಾಯೈ ನಮಃ ।

ಲತಾಪೂಜ್ಯಾ । ಲವಂತಿ ವಿನಮಂತಿ ಅತ್ಯಂತನಮ್ರಾ ಭವಂತೀತಿ ಲತಾಃ ಪರಮಪತಿವ್ರತಾಃ ಅರುಂಧತ್ಯಾದಯಃ ಸ್ತ್ರಿಯಃ ತಾಭಿಃ ಸ್ಥಿರಮಾಂಗಲ್ಯಾಯ ಸ್ವೇಷ್ಟದೇವತಾತ್ವೇನ ಪೂಜ್ಯಾ ಪೂಜನೀಯಾ, ತದುಕ್ತಂ-“ಸಮಾರಾಧ್ಯ ಮಹೇಶಾನೀಂ ಭುಕ್ತಿಂ ಮುಕ್ತಿಂ ಚ ವಿಂದತಿ” ಇತಿ । ಅಥವಾ ಕೇದಾರಾದಿಗೌರೀವಿಶೇಷಮೂರ್ತೌ ಲತಾಭಿಃ ಉಪಲಕ್ಷಣಂ ವನ್ಯಪೂಜೋಪಕರಣೈಃ ಪೂಜ್ಯಾ ಅಲಂಕೃತಾ । ಶಬರೀ ವಾ ವನದುರ್ಗಾ ವೇತಿ ಭಾವಃ ।

## ೩- ಓಂ ಲಯಸ್ಥಿತ್ಯುದ್ಭವೇಶ್ವರ್ಯೈ ನಮಃ ।

ಲಯಸ್ಥಿತ್ಯುದ್ಭವೇಶ್ವರೀ । ವೈಪರೀತ್ಯೇನ ವಿಶೇಷಣಂ ಯೋಜ್ಯಮ್ । ಉದ್ಭವತೀತ್ಯುದ್ಭವಃ ಕಾರ್ಯಾತ್ಮನಾ ಅಭಿವ್ಯಕ್ತಿಃ । ಸ್ಥಿತಿಃ ಜ್ಞಾನವಿಷಯತಾಯೋಗ್ಯಕಾಲಾವಚ್ಛೇದಃ

---

೨. ಅತ್ಯಂತ ಭಕ್ತಿಯಿಂದ ವಿನಮನ (ಬಗ್ಗುವುದು) ಸ್ವಭಾವವುಳ್ಳ ಪತಿವ್ರತೆಯರಾದ ಅರುಂಧತೀ ಮುಂತಾದವರಿಂದ ಸ್ಥಿರವಾದ ಮಾಂಗಲ್ಯ ಲಾಭಕ್ಕೆ ಇಷ್ಟದೇವತಾರೂಪದಿಂದ ಪೂಜ್ಯಳಾಗಿರುವವಳು. “ಸಮಾರಾಧ್ಯ ಮಹೇಶಾನೀಂ ಭುಕ್ತಿಂ ಮುಕ್ತಿಂ ಚ ವಿಂದತಿ” ಎಂಬ ವಚನಾನುಸಾರವಾಗಿ ಭೋಗಪ್ರಾಪ್ತಿಯು ದೇವೀಕೃಪಾಧೀನವೆಂದು ತಿಳಿಯುವುದು. ಅಥವಾ ಕೇದಾರ ಮುಂತಾದ ಗೌರಿಯ ವಿಶೇಷಮೂರ್ತಿಯಲ್ಲಿ ಲತಾ ಮುಂತಾದ ವಿವಿಧ ಪೂಜಾ ಸಾಮಗ್ರಿಯನ್ನು ಅರ್ಪಿಸಿ ಪೂಜ್ಯಳಾದವಳು, ಮತ್ತು ಅಲಂಕರಿಸಲ್ಪಟ್ಟವಳು. ಅಥವಾ ಲತೆಯಿಂದ ಪೂಜ್ಯಳಾದ ಶಬರಮೂರ್ತಿ, ಅಥವಾ ವನದುರ್ಗಾ ಮೂರ್ತಿಯು. ಲತಾಭಿಃ ಪೂಜ್ಯಾ ಎಂದು ವಿಗ್ರಹವಾಕ್ಯವು.

೩. ಕಾರ್ಯರೂಪದಿಂದ ಅಭಿವ್ಯಕ್ತಿಯಾಗುವಿಕೆಯು ಉತ್ಪತ್ತಿಯು, ಹುಟ್ಟಿದ ವಸ್ತುವು ಜ್ಞಾನ (ಅನುಭವ)ಕ್ಕೆ ವಿಷಯವಾಗುತ್ತಲಿರುವುದು. ಸ್ಥಿತಿಯು, ಉತ್ಪನ್ನಕಾರ್ಯವು ಕಾರಣರೂಪವನ್ನು ಮತ್ತೆ ಹೊಂದುವುದು

ಅನುಭವಸತ್ತ್ವಾವತ್ತ್ವಮಿತಿ ಯಾವತ್ । ಲಯಃ ಉತ್ಪನ್ನ ಕಾರ್ಯಸ್ಯ ಕಾರಣಾತ್ಮನಾ ಅವಸ್ಥಿತಿಃ ವಾಚಾರಂಭಣ ಯೋಗ್ಯತೇತ್ಯರ್ಥಃ । ತಾಸಾಂ ಕ್ರಿಯಾಣಾಂ ಅಚೇತನ ಕಾರ್ಯತ್ವಾಯೋಗೇನ ಘಟಾದಿಕಾರ್ಯೇ ಚೇತನಸ್ಯ ನಿಮಿತ್ತತಾದರ್ಶನಾತ್ ಏಕತಟಸ್ಥೇಶ್ವರತ್ವಂ ವಾ ಗೋಪುರಾದೌ ನಾನಾಚೇತನದರ್ಶನಾತ್ತಾದೃಶನಾನೇಶ್ವರತ್ವಂ ವೇತಿ ವಿಶಯೇ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತಿ ಶ್ರುತೌ "ಯತಃ" ಇತ್ಯೇಕವಚನಪಂಚಮ್ಯಾ ನಾನಾತ್ವತಟಸ್ಥತ್ವೇ, "ಜನಿಕರ್ತುಃ ಪ್ರಕೃತಿಃ" ಇತಿ ಸೂತ್ರಮ್। ಜನಿಕರ್ತುಃ ಕಾರ್ಯಸ್ಯ ಪ್ರಕೃತಿರುಪಾದಾನಮುಪಾದಾನಸಂಜ್ಞಾ ಸ್ಯಾತ್। "ಅಪಾದಾನೇ ಪಂಚಮೀ"ಇತಿ ಶಾಸನಾತ್ ಅಭಿನ್ನನಿಮಿತ್ತೋಪಾದಾನತ್ವಮೀಶ್ವರತ್ವಮಿತಿ ಸಿದ್ಧಾಂತಃ। ತಟಸ್ಥಲಕ್ಷಣ

---

ಲಯವು. ಕಾರ್ಯಕ್ಕೆ ಕಾರಣಸ್ವರೂಪವು ಪಾರಮಾರ್ಥಿಕವಾದುದು. ಕಾರ್ಯದ ನಾಮ-ರೂಪಗಳು ವ್ಯವಹಾರ (ವಾಚಾರಂಭಣ) ಮಾತ್ರರೂಪವನ್ನು ಹೊಂದಿವೆ. ಅಂತಹ ಉತ್ಪತ್ತಿ-ಸ್ಥಿತಿ-ಲಯಗಳು ಅಚೇತನದಿಂದ ಹುಟ್ಟುವ ವ್ಯಾಪಾರಗಳಲ್ಲ. ಕಾರ್ಯಸಾಮಾನ್ಯವು ಚೇತನದಿಂದ ಹುಟ್ಟುತ್ತದೆ, ಎಂಬುದು ಘಟಾದಿಕಾರ್ಯ-ಕುಲಾಲ ಮುಂತಾದ ಕಾರಣಗಳ ದೃಷ್ಟಾಂತದಿಂದ ಸ್ಥಿರವಾಗಿದೆ. ಆದರೆ ಚೇತನನಾಗಿರುವ ಒಬ್ಬ ಈಶ್ವರನು ಜಗತ್ತಿನ ಉತ್ಪತ್ತಿ-ಸ್ಥಿತಿಗಳಿಗೆ ಕಾರಣ, ಅಥವಾ ಗೋಪುರ ಮುಂತಾದ ಒಂದೊಂದು ಕಾರ್ಯರಚನೆಯಲ್ಲಿ ಅನೇಕ ಚೇತನವರ್ಗವು ಸೇರಿ ಕಾರಣವಾಗುವಂತೆ ಅನೇಕ ಚೇತನರು ಕಾರಣ ಎಂಬ ಸಂದೇಹವು ಪ್ರಾಪ್ತವಾಗುವುದು. "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬ ಶ್ರುತ್ಯರ್ಥದ ಪರ್ಯಾಲೋಚನೆಯಿಂದ ಆ ಸಂಶಯವು ನಿವಾರಣವಾಗುವುದು. ಯತಃ ಎಂದು ಪಂಚಮೀ ವಿಭಕ್ತಿಯಿಂದ ಕೂಡಿದ ಪದವಿರುವುದು. "ಜನಿಕರ್ತುಃ ಪ್ರಕೃತಿಃ" ಎಂಬ ಸೂತ್ರವು ಉತ್ಪತ್ತಿಯಾಗುವ ಕಾರ್ಯಕ್ಕೆ ಕಾರಣವಾದ ಪ್ರಕೃತಿದ್ರವ್ಯಕ್ಕೆ ಅಪಾದಾನ ಎಂಬ ಸಂಜ್ಞೆಯನ್ನು ವಿಧಿಸುತ್ತಿದೆ. ಅಪಾದಾನ ಎಂಬ ಸಂಜ್ಞೆಯು ಬಂದ ನಂತರ "ಅಪಾದಾನೇ ಪಂಚಮೀ" ಎಂಬ ಸೂತ್ರವನ್ನು ಅನುಸರಿಸಿ ಪಂಚಮೀ ವಿಭಕ್ತಿಯು ಬರುವುದು. ಆದುದರಿಂದ ಜಗತ್ತಿನ

ಮೇತತ್; ಜ್ಞಾಯಮಾನಸ್ಯ ಬ್ರಹ್ಮಣಃ ಲಕ್ಷಣಪ್ರಮಾಣಯೋಃ ಅವಶ್ಯವಾಚ್ಯತ್ವಾದಿತ್ಯಭಿಪ್ರಾಯಃ । ಆದೌ ಲಯಶಬ್ದೋಪಾದಾನೇನ ಅನಾದಿತ್ವಂ ಪ್ರಪಂಚಸ್ಯ ಸೂಚಿತಮ್ । ಜಗತ ಇತಿ ಶಬ್ದಪೂರಣೇನ ನಾಮ ಯೋಜನೀಯಮ್ । ತಥಾ ಚ ಜಗತಃ ಲಯಶ್ಚ ಸ್ಥಿತಿಶ್ಚ ಉದ್ಭವಶ್ಚ ತೇಷಾಮೀಶ್ವರೀ ಕೂಟಸ್ಥಚೈತನ್ಯಮಾತ್ರಸಚ್ಚಿದಾನಂದಾಧಾಯಕತಯಾ ವಿವರ್ತಕಾರಣಮಿತ್ಯರ್ಥಃ ।

---

ಸೃಷ್ಟಿ ಮುಂತಾದ ವ್ಯಾಪಾರಗಳನ್ನು ರಚಿಸುವ ಕಾರಣವಸ್ತುವಿನಲ್ಲಿ ಅಭಿನ್ನ ನಿಮಿತ್ತೋಪಾದಾನತ್ವವು ಸಿದ್ಧಿಸುವುದರಿಂದ ನಾನಾ ಈಶ್ವರವಾದ-ತಟಸ್ಥೇಶ್ವರವಾದಗಳು ನಿರವಕಾಶವಾಗುವುವು. ಈ ನಾಮವ್ಯಾಖ್ಯಾನದಲ್ಲಿ "ಜಗತಃ" ಎಂಬ ಪದವನ್ನು ಅಧ್ಯಾಹಾರ ವಿಟ್ಟುಕೊಳ್ಳಬೇಕು. ಮತ್ತು ಲಯ-ಸ್ಥಿತಿ-ಉದ್ಭವ ಎಂಬುದನ್ನು ವಿಲೋಮಕ್ರಮದಿಂದ ಪಠಿಸಿ ವ್ಯಾಖ್ಯಾನಮಾಡಬೇಕು. ಜಗತ್ತಿನ ಸೃಷ್ಟಿ-ಸ್ಥಿತಿ- ಲಯಗಳಿಗೆ ಅಭಿನ್ನ ನಿಮಿತ್ತೋಪಾದಾನ ಸ್ವರೂಪಳು. ಇದು ತಟಸ್ಥ ಲಕ್ಷಣವು. ಜ್ಞೇಯಬ್ರಹ್ಮ ವಸ್ತುವಿನ ಲಕ್ಷಣಪ್ರಮಾಣಗಳನ್ನು ಹೇಳಬೇಕಾದುದು ಅವಶ್ಯಕವು. ಸೃಷ್ಟಿ-ಸ್ಥಿತಿ-ಲಯಗಳಲ್ಲಿ ಮೊದಲು ಲಯವನ್ನು ಉಲ್ಲೇಖಿಸಿರುವುದರಿಂದ ಜಗತ್ತು ಅನಾದಿಯೆಂದು ಸೂಚಿಸಲ್ಪಡುವುದು. ಸೃಷ್ಟಿ-ಸ್ಥಿತಿ-ಸಂಹಾರ ಕಾರಣತ್ವವೆಂಬ ತಟಸ್ಥ ಲಕ್ಷಣದಿಂದ ಲಕ್ಷಿತಳಾಗಿ ಸಚ್ಚಿದಾನಂದಾತ್ಮಕತ್ವ ಸ್ವರೂಪವನ್ನು ಹೊಂದಿದ ವಿವರ್ತಕಾರಣಳೆಂದು ತಾತ್ಪರ್ಯವು. ಲಯಶ್ಚ + ಸ್ಥಿತಿಶ್ಚ + ಉದ್ಭವಶ್ಚ, ತೇಷಾಮೀಶ್ವರೀ ಎಂದು ವಿಗ್ರಹವು.

೩೫

**ಲಾಸ್ಯದರ್ಶನಸಂತುಷ್ಟಾ ಲಾಭಾಲಾಭವಿವರ್ಜಿತಾ ।**
**ಲಂಘ್ಯೇತರಾಜ್ಞಾ ಲಾವಣ್ಯಶಾಲಿನೀ ಲಘುಸಿದ್ಧಿದಾ ॥**

**೪. ಓಂ ಲಾಸ್ಯದರ್ಶನಸಂತುಷ್ಟಾಯೈ ನಮಃ ।**

ಲಾಸ್ಯದರ್ಶನಸಂತುಷ್ಟಾ । ಯಥಾ ರಾಜಾ ಸಂಪೂರ್ಣಕಾಮಃ ಪ್ರಯೋಜನಮನುದ್ದಿಶ್ಯಾಪಿ ಮೃಗಯಾದಿಲೀಲಾವಿಶೇಷಾನ್ ಪಶ್ಯತಿ ಬಾಲಕಾದಿನೃತ್ಯಂ ವಾ ತಥಾ ಅಜ್ಞಾನಾತ್ ಇಷ್ಟಾ ನಿಷ್ಟಮಿಶ್ರೋದಾಸೀನಪದಾರ್ಥಚತುಷ್ಟಯಾನುಭವಜನ್ಯ-ಹರ್ಷಶೋಕಾದಿಸಂಭವನ್ಮದೋದ್ರೇಕಶೋಕಾತಿರೇಕಹೇತುಕ ವಿಹಿತಾದಿಕರಣಾಕರಣರೂಪಚರಣಾದ್ಯಂಗಪರಿಸ್ಪಂದರೂಪ-ನಾನಾವಿಧಪ್ರಾಣಿಕಾಯನಿಕಾಯಜನ್ಯಲಾಸ್ಯದರ್ಶನೇನ ಅನುದ್ದಿಶ್ಯಾಪಿ ಪ್ರಯೋಜನಂ ಸಂತುಷ್ಟಾ ತತ್ತತ್ಕರ್ಮಾನುಸಾರೇಣ ಫಲಪ್ರಾಪಕೇಶ್ವರತಯಾ ಸರ್ವಸಮಾನತ್ವಾತ್,

---

೪. ಅಜ್ಞಜನರ ಇಷ್ಟ–ಅನಿಷ್ಟ–ಮಿಶ್ರ ಮತ್ತು ಉದಾಸೀನವೆಂಬ ನಾಲ್ಕು ಬಗೆಯ ಪದಾರ್ಥಗಳನ್ನು ಅನುಭವಿಸಿದುದರಿಂದ ಉಂಟಾದ ಹರ್ಷಾತಿರೇಕ–ಶೋಕಾತಿರೇಕಗಳಿಂದ ವಿಹಿತಕರ್ಮತ್ಯಾಗ ನಿಷಿದ್ಧಸೇವನ ಮುಂತಾದ ಕ್ರಿಯಾಸಕ್ತಿಯಿಂದ ಚರಣಾದಿ ಅವಯವಗಳ ಚಲನ ರೂಪವಾದ ನೃತ್ಯವನ್ನು ನೋಡಿ ಸಂತುಷ್ಟಳಾದವಳು. ಸಂಪೂರ್ಣ ಕಾಮನಾದ ರಾಜನು ಬೇರೊಂದು ಪ್ರಯೋಜನ ದೃಷ್ಟಿಯಿಲ್ಲದೆ ಬೇಟೆ ಅಥವಾ ಬಾಲಕರ ನೃತ್ಯ ಮುಂತಾದುದನ್ನು ನೋಡಿ ಆನಂದಿಸುವನು. ಅದರಂತೆ ದೇವಿಯು ಸ್ವವ್ಯಾಪಾರಾಸಕ್ತಿಯಿಂದ ನಡೆಯುವ ಕಾರ್ಯ–ಕರಣ ನೃತ್ಯವನ್ನು ನೋಡಿ ತನಗೆ ಪ್ರಯೋಜನವಿಲ್ಲದಿದ್ದರೂ ಅದರಿಂದ ಸಂತುಷ್ಟಳಾಗಿ ಆಯಾಯ ಪ್ರಾಣಿಗಳಿಗೆ ಕರ್ಮಫಲವನ್ನು ಕೊಡುವಳು. ನಾದತ್ತೇ ಕಸ್ಯ ಚಿತ್ಪಾಪಂ ನ ಚೈವ ಸುಕೃತಂ ವಿಭುಃ– ಎಂಬ ಭಗವದ್ವಚನದಿಂದ ಕರ್ಮಗಳಿಗೆ ಸಾಕ್ಷಿಯಾಗಿದ್ದು ಉಚಿತ ಫಲ ಪ್ರದಾನದಲ್ಲಿ ಈಶ್ವರನು ಸರ್ವಸಾಧಾರಣನೆಂದು ವ್ಯಕ್ತವಾಗುವುದು.

"ನಾದತ್ತೇ ಕಸ್ಯ ಚಿತ್ಪಾಪಂ ನ ಚೈವ ಸುಕೃತಂ ವಿಭುಃ" ಇತಿ ಭಗವದ್ವಚನಾತ್ । ಲಾಸ್ಯಂ ದೇವತಾದಿವಾರವನಿತಾದಿಭಿಃ ಕ್ರಿಯಮಾಣಂ ತಾಲಗೀತಯುಕ್ತಂ ನೃತ್ಯಂ ತದ್ದರ್ಶನೇನ ಸಂತುಷ್ಟಾ । ತದೀಯಫಲಪ್ರದಾನೋನ್ಮುಖಕೃಪಾರಸವತೀ ತ್ಯರ್ಥಃ ।

೫. ಓಂ ಲಾಭಾಲಾಭವಿವರ್ಜಿತಾಯೈ ನಮಃ ।

ಲಾಭಾಲಾಭವಿವರ್ಜಿತಾ । ಅಪ್ರಾಪ್ತಪ್ರಾಪ್ತಿರ್ಲಾಭಃ, ಕೃತೇಽಪಿ ಯತ್ನೇ ತದಪ್ರಾಪ್ತಿರಲಾಭಃ । ತಾಭ್ಯಾಂ ವಿವ ರ್ಜಿತಾ, ಪರ್ಯಾಪ್ತಕಾಮತ್ವೇನ ನಿತ್ಯತೃಪ್ತತ್ವಾತ್ "ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ" ಇತಿ ಭಗವದ್ವಚನಾತ್ ।

---

ಅಥವಾ ದೇವವೇಶ್ಯೆಯರಾದ ಅಪ್ಸರಃಸ್ತ್ರೀಯರ ತಾಲಗೀತಗಳ ಉಪಕರಣ ಗಳೊಂದಿಗೆ ಆಡುವ ನೃತ್ಯವನ್ನು ನೋಡಿ ಆನಂದಿಸುವವಳು. ನೃತ್ಯ ದರ್ಶನ ಪ್ರೀತಿಯಿಂದ ಅವರಿಗೆ ಇಷ್ಟವಾದ ಫಲದಾನದಲ್ಲಿ ಉನ್ಮುಖವಾದ ಕೃಪಾರಸವು ಳ್ಳವಳೆಂದು ತಾತ್ಪರ್ಯವು. ಲಾಸ್ಯಸ್ಯ ದರ್ಶನಂ ತೇನ ಸಂತುಷ್ಟಾ ಎಂದು ವಿಗ್ರಹವು.

೫. ಹೊಂದದಿರುವ ವಸ್ತುವನ್ನು ಹೊಂದುವುದು ಲಾಭವು. ಯತ್ನ ಮಾಡಿದರೂ ಆ ವಸ್ತುವು ಲಭಿಸದಿರುವುದು ಅಲಾಭವು. ಲಾಭ-ಅಲಾಭಗಳು ಅಭಿಸಂಧಿಯುಳ್ಳ ವ್ಯಕ್ತಿಯಲ್ಲಿ ಮಾತ್ರ ಆತ್ಮಲಾಭವನ್ನು ಹೊಂದುವುವು. ದೇವಿಯು ಪರ್ಯಾಪ್ತಕಾಮಳಾಗಿ ನಿತ್ಯತೃಪ್ತಳಾಗಿರುವುದರಿಂದ ಲಾಭಾಲಾಭ ಗಳಿಂದ ವರ್ಜಿತಳಾದವಳು. "ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ" ಎಂಬ ಭಗವದ್ವಚನದಿಂದ ಆಪ್ತಕಾಮತ್ವವು ಸ್ಪಷ್ಟ ವಾಗುವುದು. ಲಾಭಶ್ಚ + ಅಲಾಭಶ್ಚ ತಾಭ್ಯಾಂ ವಿವರ್ಜಿತಾ ಎಂದು ವಿಗ್ರಹವು.

## ೬. ಓಂ ಲಂಘ್ಯೇತರಾಜ್ಞಾಯೈ ನಮಃ ।

ಲಂಘ್ಯೇತರಾಜ್ಞಾ । ಇತರೇಷಾಂ ಜೀವಭ್ರಾಂತಿಕಲ್ಪಿತಾನಾಂ ಗುಣಮೂರ್ತ್ಯಾದೀನಾಂ ಉಪಾಸನಾವಿಧಿರೂಪಾ ವಾ ಕರ್ಮ ವಿಧಿರೂಪಾ ವಾ ಆಜ್ಞಾ ಪ್ರೇರಣಾ ಲಂಘ್ಯಾ ಅವಿಷಯೀಕೃತಾ ಯಯಾ ಸಾ ತಥಾ। ಶುದ್ಧಚೈತನ್ಯಸ್ಯ ವಿಶಿಷ್ಟಕ್ರಿಯಾದ್ಯಾತ್ಮಕತ್ವಾ ಭಾವೇನ ವಿಧ್ಯವಿಷಯತ್ವಾದಿತಿ ಯಾವತ್। ಅಥವಾ ಕಿಂಕರೀತ್ವಾ ಭಾವೇನ ಇತರೇಷಾಂ ದೇವತಾನಾಂ ಆಜ್ಞಾ ಪ್ರೇರಣಾ ಲಂಘ್ಯಾ ಉಪೇಕ್ಷಣೀಯಾ ಯಯಾ ಸಾ ತಥಾ " ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ " ಇತಿ ಶ್ರುತೇಃ, ಈಶ್ವರಸ್ಯ ಸರ್ವನಿಯಂತೃತ್ವೇನ ಸ್ವೇತರಾನಿಯಮ್ಯತ್ವಾದಿತಿ ಜ್ಞಾತವ್ಯಮ್।

## ೭. ಓಂ ಲಾವಣ್ಯಶಾಲಿನ್ಯೈ ನಮಃ ।

ಲಾವಣ್ಯಶಾಲಿನೀ । ಲಾವಣ್ಯಂ ಸೌಂದರ್ಯಂ ಪರಮಾನಂದ ಸ್ವರೂಪತಯಾ ಅತಿಶಯಪ್ರೀತಿವಿಷಯತ್ವಂ ಶಾಲತ ಇತಿ

---

೬. ವಿಷಯೀಕರಿಸದಿರುವ (ಲಕ್ಷ್ಯಮಾಡದಿರುವ) ಜೀವಾತ್ಮರ ಭ್ರಾಂತಿಯಿಂದ ಕಲ್ಪಿಸಲ್ಪಟ್ಟ ಅನೇಕ ಸಗುಣ ಮೂರ್ತಿಗಳ ಉಪಾಸನಾವಿಧಿ ಅಥವಾ ಕರ್ಮವಿಧಿ ಯೆಂಬ ಆಜ್ಞೆಯುಳ್ಳವಳು. ಶುದ್ಧಚೈತನ್ಯವು ವಿಶಿಷ್ಟಕ್ರಿಯಾ ಸ್ವರೂಪವಲ್ಲದುದರಿಂದ ನಿಯೋಗಕ್ಕೆ ವಿಷಯವಲ್ಲ. ಅಥವಾ ಕಿಂಕರಸ್ಥಾನ ದಲ್ಲಿಲ್ಲದ್ದರಿಂದ ಉಪೇಕ್ಷಾರ್ಹವಾದ ಇತರ ದೇವತೆಗಳ ಆಜ್ಞೆಯುಳ್ಳ ವಳು. ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ ಎಂಬ ವಚನಗಳಿಂದ ಈಶ್ವರನು ಸರ್ವನಿಯಾಮಕನಾಗಿರುವುದರಿಂದ ಇತರರಿಗೆ ತಾನು ನಿಯಮ್ಯನಾಗುವುದಿಲ್ಲ. ಇತರೇಷಾಂ + ಆಜ್ಞಾ ಇತರಾಜ್ಞಾ, ಲಂಘ್ಯಾ ಇತರಾಜ್ಞಾ, ಯಯಾ ಸಾ ಎಂದು ವಿಗ್ರಹವು.

೭. ಪರಮಾನಂದಸ್ವರೂಪಳಾದ್ದರಿಂದ ಅತಿಶಯ ಪ್ರೀತಿಗೆ ಪಾತ್ರ ವಾಗುವಿಕೆಯೆಂಬ ನಿರುಪಮ ಸೌಂದರ್ಯದಿಂದ ಪ್ರಕಾಶಿಸುವವಳು. ಅಥವಾ

ತಥಾ, ಸರ್ವಾವಯವಸಾಧಾರಣಸುಂದರಭಾವವತೀತಿ ವಾ ।

ಆ. ಓಂ ಲಘುಸಿದ್ಧಿದಾಯೈ ನಮಃ ।

ಲಘುಸಿದ್ಧಿದಾ। ಲಘುನಾ ಉಪಾಯೇನ ಸಿದ್ಧಿಂ ವಾಂಛಿತಾರ್ಥ ಪ್ರಾಪ್ತಿಂ ದದಾತೀತಿ ತಥಾ । ಲಘುಶಬ್ದಃ ಲಕ್ಷಣಯಾ ಲಘಿಮಾಸಿದ್ಧಿಪರಃ । ತಥಾ ಚ ಲಘಿಮಾದ್ಯಷ್ಟೈಶ್ವರ್ಯಪ್ರ ದೇತಿ ವಾ। ಅಥವಾ ಲಘೂನಾಂ ಅತ್ಯಂತಾಲ್ಪಜ್ಞಾನಭಾಗ್ಯ ಶರೀರರೂಪಚರಣವತಾಮತ್ಯತಿನಿಕೃಷ್ಟಾನಾಂ ತಿರ್ಯಗಾದೀ ನಾಮಪಿ ಸಿದ್ಧಿಂ ಮುಕ್ತಿಯೋಗ್ಯತಾಹೇತುಜ್ಞಾನಾದಿಸಾಧನ ಸಂಪತ್ತಿಂ ತತ್ಕಾರ್ಯಮಹಿಮಾತಿಶಯೋನ್ನೇಯಾಂ ದದಾ ತೀತಿ ಸಾ ತಥಾ ।

---

ಸರ್ವಾಯವಗಳಲ್ಲಿ ಏಕವಿಧವಾದ ಉಜ್ವಲ ಸೌಂದರ್ಯವುಳ್ಳವಳು. ಲಾವಣ್ಯೇನ ಶಾಲತೇ ಇತಿ ಎಂದು ವಿಗ್ರಹವು.

ಆ. ಲಘುವಾದ ಉಪಾಯದಿಂದ ಇಷ್ಟಾರ್ಥ ಸಿದ್ಧಿಯನ್ನು ಕೊಡು ವವಳು. ಅಥವಾ ಲಘಿಮಾ ಎಂಬ ಸಿದ್ಧಿಯನ್ನು ಬೋಧಿಸುವ ಲಘು ಶಬ್ದದ ಸಹಾಯದಿಂದ ಲಘಿಮಾ ಮುಂತಾದ ಅಷ್ಟೈಶ್ವರ್ಯಸಿದ್ಧಿಯನ್ನು ಕೊಡುವ ವಳು. ಅಥವಾ ಅತ್ಯಂತ ಅಲ್ಪ ಜ್ಞಾನ-ಭಾಗ್ಯ ಶರೀರ ಮುಂತಾದ ಉಪಕ ರಣವುಳ್ಳ ಅತಿ ನಿಕೃಷ್ಟರಿಗೆ ಕೂಡ ಆಕಸ್ಮಿಕವಾಗಿ ಉಂಟಾದ ಮಹಿಮಾತಿಶಯ ದಿಂದ ಊಹಿಸಬಹುವಾದ ಮುಕ್ತಿಲಾಭಕ್ಕೆ ಕಾರಣವಾದ ಜ್ಞಾನಾದಿ ಸಾಧನ ಸಂಪತ್ತಿಯನ್ನು ಕೊಡುವವಳು. ಸಿದ್ಧಿಂ ದದಾತೀತಿ ಸಿದ್ಧಿದಾ, ಲಘುನಾ ಸಿದ್ಧಿದಾ, ಅಥವಾ ಲಘೂನಾಂ ಸಿದ್ಧಿದಾ ಎಂದು ವಿಗ್ರಹವು.

೩೬

ಲಾಕ್ಷಾರಸಸವರ್ಣಾಭಾ ಲಕ್ಷ್ಮಣಾಗ್ರಜಪೂಜಿತಾ ।
ಲಭ್ಯೇತರಾ ಲಬ್ಧಭಕ್ತಿಸುಲಭಾ ಲಾಂಗಲಾಯುಧಾ ॥

೯. ಓಂ ಲಾಕ್ಷಾರಸಸವರ್ಣಾಭಾಯೈ ನಮಃ ।

ಲಾಕ್ಷಾರಸಸವರ್ಣಾಭಾ । ಲಾಕ್ಷಾರಸೇನ ಲಾಕ್ಷಾದ್ರವೇಣ ಸಮಾನೋ ವರ್ಣೋ ಯಸ್ಯಾಃ ಸಾ, ತಥಾಭೂತಾ ಶೋಭಾ ಕಾಂತಿರ್ಯಸ್ಯಾಃ ಸಾ ತಥಾ । ಅತಿಪಾಟಲವಿಗ್ರಹಪ್ರಭೇತ್ಯರ್ಥಃ ।

೧೦. ಓಂ ಲಕ್ಷ್ಮಣಾಗ್ರಜಪೂಜಿತಾಯೈ ನಮಃ ।

ಲಕ್ಷ್ಮಣಾಗ್ರಜಪೂಜಿತಾ । ಅಗ್ರೇ ಜಾಯೇತೇ ಇತ್ಯಗ್ರಜೌ ರಾಮಭರತೌ ಲಕ್ಷ್ಮಣಸ್ಯಾಪಿ ಜ್ಯೇಷ್ಠಭೂತರಾಮಾಚಾರಾನುಕಾರಿತ್ವೇನ ಚತುರ್ಭಿರಪಿ ದಾಶರಥಿಭಿಃ ಪೂಜಿತೇತ್ಯರ್ಥಃ ।

---

೯. ಲಾಕ್ಷಾರಸಕ್ಕೆ ಸಮಾನವಾದ ವರ್ಣವುಳ್ಳ ಕಾಂತಿಯುಳ್ಳವಳು. ಅತ್ಯಂತ ಪಾಟಲ ವರ್ಣದ ವಿಗ್ರಹ ಶೋಭೆಯು ಪ್ರಕಾಶಿಸುವುದೆಂದು ತಾತ್ಪರ್ಯವು. ಲಾಕ್ಷಾಯಾಃ ರಸಃ ತೇನ ಸಮಾನಃ ವರ್ಣಃ ಯಸ್ಯಾಃ ಸಾ ತಾದೃಶೀ ಶೋಭಾ ಯಸ್ಯಾಃ ಸಾ ಎಂದು ವಿಗ್ರಹವು.

೧೦. ಲಕ್ಷ್ಮಣನ ಅಗ್ರಜರಾದ ರಾಮ ಭರತ ಮುಂತಾದ ಸಕಲ ದಶರಥ ಪುತ್ರರಿಂದ ಪೂಜಿಸಲ್ಪಟ್ಟವಳು. ಜ್ಯೇಷ್ಠನಾದ ರಾಮನ ಆಚಾರವನ್ನು ಕನಿಷ್ಠರೆಲ್ಲರೂ ಭಕ್ತಿಯಿಂದ ಆಚರಿಸುವರು. ರಾಮನು ಶಿವ ಲಿಂಗವನ್ನು ಪ್ರತಿಷ್ಠೆಮಾಡಿ ಶಿವದಂಪತಿ ಪೂಜಾ ನಿರತನಾಗಿರುವನೆಂದು "ಶಿವಲಿಂಗಪ್ರತಿಷ್ಠಾತಾ" ಮುಂತಾದ ನಾಮದಿಂದ ತಿಳಿಯುವುದು. ಮುಂದೆ ಎಲ್ಲ ಆ ವಂಶದ ಪ್ರಜೆಗಳಿಂದಲೂ ಪೂಜಿಸಲ್ಪಟ್ಟಿರುವಳೆಂಬುದು ವ್ಯಕ್ತವಾಗುತ್ತದೆ. ಅಗ್ರೇ

ರಾಮಸ್ಯ–"ಶಿವಲಿಂಗಪ್ರತಿಷ್ಠಾತಾ"– ಇತಿ ನಾಮವತ್ತ್ವಾನ್ಯ ಥಾನುಪಪತ್ತ್ಯಾ ಶಿವದಂಪತಿಪೂಜಕತ್ವೇನ ತದಿತರೇಷಾಂ ತದ್ವಂಶಸ್ತ್ರೀಪುರುಷಾಣಾಂ ತತ್ಸಿದ್ಧಿರಿತಿ ಧ್ವನಿತೋಽರ್ಥಃ।

## ೧೧. ಓಂ ಲಭ್ಯೇತರಾಯೈ ನಮಃ।

ಲಭ್ಯೇತರಾ। ಲಭ್ಯಾನಿ ಲಬ್ಧವ್ಯಾನಿ ಕರ್ಮೋಪಾಸನಾವಿಶೇಷಾಣಾಂ ಫಲತ್ವೇನ ಸಾಧ್ಯಾನಿ ಭಾವ್ಯಾನೀತ್ಯರ್ಥಃ। ತೇಭ್ಯ ಇತರಾ ವಿಲಕ್ಷಣಾ। "ತತ್ಸತ್ಯಂ ಸ ಆತ್ಮಾ, ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್। ತಮಾತ್ಮಸ್ಥಂ" ಇತಿ "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ" ಇತ್ಯಾದಿಭಿಃ ಶ್ರುತಿಭಿಃ ಆತ್ಮನಃ ನಿತ್ಯಪ್ರಾಪ್ತಸ್ವರೂಪತ್ವೇನ ಪ್ರಾಪ್ತಪ್ರಾಪ್ತವ್ಯರೂಪತಯಾ ಮೋಕ್ಷರೂಪತ್ವೇನ ಚತುರ್ವಿಧಕ್ರಿಯಾಫಲತ್ವಾಭಾವಾದಿತಿ ಮಂತವ್ಯಮ್। ಅಥವಾ ಇತರಾಣಿ ಧರ್ಮಾರ್ಥಕಾಮರೂಪತ್ರಿವರ್ಗರೂಪಾಣಿ ಫಲಾನಿ ಲಬ್ಧವ್ಯಾನಿ ಪ್ರಾಪ್ತವ್ಯಾನಿ ಯಸ್ಯಾಃ ಸಕಾಶಾದಿತಿ ಸಾ ತಥಾ, ಉಕ್ತಶ್ರುತೇಃ।

---

ಜಾಯೇತೇ ಇತ್ಯಗ್ರಜೌ, ಲಕ್ಷ್ಮಣಸ್ಯ ಅಗ್ರಜೌ, ತಾಭ್ಯಾಂ ಪೂಜಿತಾ ಎಂದು ವಿಗ್ರಹವು.

೧೧. ಕರ್ಮ–ಉಪಾಸನಾ ಮುಂತಾದ ಸಾಧನ ಕಲಾಪಗಳಿಂದ ಜನಿಸುವ ಫಲರೂಪವಾದ ಶ್ರೇಯಸ್ಸುಗಳಿಗಿಂತ ವಿಲಕ್ಷಣಳಾದವಳು. ತತ್ ಸತ್ಯಂ ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹುನಾಂ ಯೋ ವಿದಧಾತಿ ಕಾಮಾನ್। ತಮಾತ್ಮಸ್ಥಮ್, ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ ಎಂಬ ಶ್ರುತಿಗಳಿಂದ ನಿತ್ಯಪ್ರಾಪ್ತವಾದ ಆತ್ಮವಸ್ತುವಿನ ಪ್ರಾಪ್ತಿಯು ಮೋಕ್ಷರೂಪವೆಂದು ತಿಳಿಯುವುದು. ಆದ್ದರಿಂದ ಕ್ರಿಯಾನುಷ್ಠಾನದಿಂದ ಜನಿಸುವ ನಾಲ್ಕು ವಿಧದ ಫಲಸ್ವರೂಪಳಾಗಿಲ್ಲ. ಅಥವಾ ಧರ್ಮಾರ್ಥಕಾಮಗಳೆಂಬ ತ್ರಿವರ್ಗ ಪುರುಷಾರ್ಥಗಳ ಪ್ರಾಪ್ತಿಗೆ ಕಾರಣಳಾದವಳು. ಲಭ್ಯೇಭ್ಯಃ ಇತರಾ, ಅಥವಾ ಲಭ್ಯಾನಿ ಇತರಾಣಿ ಯಸ್ಯಾಃ ಸಾ ಎಂದು ವಿಗ್ರಹವು.

## ೧೨. ಓಂ ಲಬ್ಧಭಕ್ತಿಸುಲಭಾಯೈ ನಮಃ ।

ಲಬ್ಧಭಕ್ತಿಸುಲಭಾ । ಭಕ್ತಿಃ ಸಾಮಾನ್ಯವಿಶೇಷಕಾರಣಾ ದ್ವಿವಿಧಾ। ತತ್ರಾದ್ಯಾ ಆರ್ತಜಿಜ್ಞಾಸ್ವರ್ಥಾರ್ಥಿಭಿಃ ಯೈರ್ಲಬ್ಧಾ ತತ್ತತ್ಫಲೋದ್ದೇಶೇನ ಸಮಯವಿಶೇಷೇ ವಿಚ್ಛಿದ್ಯ ವಿಚ್ಛಿದ್ಯ ಪ್ರಾಪ್ತಾ ತೇಷಾಂ ಸುಲಭಾ ತತ್ತತ್ಪ್ರಾರಬ್ಧಾನುಸಾರೇಣ ಫಲದಾನೋನ್ಮುಖಸ್ವಾತ್ಮರೂಪತಯಾ ಸನ್ನಿಹಿತತ್ವಾತ್ । ದ್ವಿತೀಯಾ ಭಕ್ತಿಸ್ತು ಬ್ರಹ್ಮಸಾಕ್ಷಾತ್ಕಾರವತಾ ಪುರುಷೇಣ ಯೇನೈಕಭಕ್ತಿತಯಾ ಲಬ್ಧಾ "ಏಕಭಕ್ತಿರ್ವಿಶಿಷ್ಯತೇ" ಇತಿ ಸ್ಮೃತೇಃ, ತಸ್ಯ ಸುಲಭಾ ಸ್ವಾತ್ಮರೂಪತಯಾ ಸದಾ ಜ್ಞಾಯಮಾನತ್ವಾತ್ । "ಜ್ಞಾನೀ ತ್ವಾತ್ಮೈವ ಮೇ ಮತಮ್" ಇತಿ ಗೀತಾಸು । ಅಥವಾ ಲಬ್ಧಾ ಪ್ರಾಪ್ತಾ ಸತ್ಯಪಿ ಕಂಠಗತಚಾಮೀಕರವತ್ ಲಬ್ಧಭಕ್ತೀನಾಂ ಸುಲಭಾ ಸುಖೇನ ಅನಾಯಾಸೇನ ಕಷ್ಟೇನ ವಿನಾ ಸಾಧ್ಯತಯಾ ಲಾಭಃ

---

೧೨. ಹೊಂದಿದ ಮುಖ್ಯಭಕ್ತಿಯುಳ್ಳ, ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಏಕಭಕ್ತಿ ಯೆನಿಸಿಕೊಂಡಿರುವ ಜ್ಞಾನಿಗೆ ಆತ್ಮರೂಪವಾಗಿ ಅನಾಯಾಸದಿಂದ ಲಭಿಸುವವಳು. ಸಾಮಾನ್ಯ–ವಿಶೇಷ ರೂಪವಾಗಿ ಭಕ್ತಿಯು ಎರಡು ಬಗೆಯಿಂದಿರುವುದು. ಆರ್ತ, ಜಿಜ್ಞಾಸು ಮತ್ತು ಅರ್ಥಾರ್ಥಿಗಳಿಗೆ ಇರುವ ಭಕ್ತಿಯು ಆಯಾಯ ಫಲಕಾಮನೆಯಿಂದ ಆಯಾಯ ದೇವತಾರಾಧನ ಸಮಯದಲ್ಲಿ ವಿಭಕ್ತವಾಗಿ ಹೋಗುವ ಸಾಮಾನ್ಯಭಕ್ತಿಯು, ಅಂತಹ ಭಕ್ತಿಯುಳ್ಳವರಿಗೆ ಪ್ರಾರಬ್ಧ ಕರ್ಮಾನುಸಾರವಾಗಿ ಫಲದಾನದಲ್ಲಿ ಉನ್ಮುಖಳಾಗಿ ಕ್ರಮವಾಗಿ ಸ್ವಾತ್ಮರೂಪದಿಂದ ಸನ್ನಿಹಿತಳಾದವಳು. "ಏಕಭಕ್ತಿರ್ವಿಶಿಷ್ಯತೇ, ಜ್ಞಾನೀ ತ್ವಾತ್ಮೈವ ಮೇ ಮತಮ್" ಎಂಬ ಗೀತಾವಚನಗಳಿಂದ ಜ್ಞಾನಾಭ್ಯಾಸ ತತ್ಪರನಿಂದ ಏಕಭಕ್ತಿ ಪುರುಷನಿಗೆ ಆತ್ಮರೂಪದಿಂದ ಗೋಚರಳಾದವಳೆಂದು ಹೇಳಲ್ಪಟ್ಟಿದೆ. ಅಥವಾ ಪ್ರಾಪ್ತಳಾಗಿದ್ದರೂ ವಿಸ್ಮೃತ ಕಂಠಚಾಮೀಕರ ನ್ಯಾಯದಿಂದ ಭಕ್ತಿಮಾರ್ಗದಿಂದ ಅನಾಯಾಸವಾಗಿ ಲಭಿಸಲು ಯೋಗ್ಯಳಾದವಳು. "ಭಕ್ತ್ಯಾ ಮಾಮಭಿಜಾನಾತಿ" ಎಂಬ ವಚನದಿಂದ ಭಕ್ತಿ ಗಮ್ಯತ್ವವು ಸ್ಪಷ್ಟ

ಪ್ರಾಪ್ತಿರ್ಯಸ್ಯಾಃ ಸಾ ತಥಾ "ಭಕ್ತ್ಯಾ ಮಾಮಭಿಜಾನಾತಿ" ಇತಿ ಸ್ಮೃತೇಃ ।

೧೩. ಓಂ ಲಾಂಗಲಾಯುಧಾಯೈ ನಮಃ ।

ಲಾಂಗಲಾಯುಧಾ । ಶೇಷರೂಪತಯಾ ಹಲಾಯುಧೇತ್ಯರ್ಥಃ । "ಅನಂತಶ್ಚಾಸ್ಮಿ ನಾಗಾನಾಮ್" ಇತಿ ಶ್ರೀ ಭಗವದ್ವಚನಾತ್ ।

---

ವಾಗಿರುವುದು. ಲಬ್ಧಾ ಭಕ್ತಿಃ ಯೇಷಾಂ ತೇ ತೇಷಾಂ ಸುಲಭಾ, ಭಕ್ತ್ಯಾ ಸುಖೇನ ಲಬ್ಧುಂ ಯೋಗ್ಯಾ ಭಕ್ತಿಸುಲಭಾ, ಲಬ್ಧಾ ಚಾಸೌ ಭಕ್ತಿಸುಲಭಾ ಚ ಎಂದು ವಿಗ್ರಹವು.

೧೩. ನೇಗಿಲು ಬಲರಾಮನು ಧರಿಸಿರುವ ಆಯುಧವು. ಬಲರಾಮನು ಆದಿಶೇಷನ ಅವತಾರವು. ನಾಗಗಳಲ್ಲಿ ಅನಂತರೂಪಳಾದ್ದರಿಂದ ದೇವಿಯು ಲಾಂಗಲಾಯುಧವನ್ನು ಧರಿಸಿದವಳು, ಲಾಂಗಲಂ ಆಯುಧಂ ಯಸ್ಯಾಃ ಎಂದು ವಿಗ್ರಹವು.

# ೩೭

## ಲಗ್ನಚಾಮರಹಸ್ತಶ್ರೀಶಾರದಾಪರಿವೀಜಿತಾ ।
## ಲಜ್ಜಾಪದಸಮಾರಾಧ್ಯಾ ಲಂಪಟಾ ಲಕುಲೇಶ್ವರೀ ॥

### ೧೪೪. ಓಂ ಲಗ್ನಚಾಮರಹಸ್ತಶ್ರೀಶಾರದಾಪರಿವೀಜಿತಾಯೈ ನಮಃ ।

ಲಗ್ನಚಾಮರಹಸ್ತಶ್ರೀಶಾರದಾಪರಿವೀಜಿತಾ । ಲಗ್ನೌ ಕರಸಂಬದ್ಧೌ ಧೃತಾವಿತ್ಯರ್ಥಃ । ಲಗ್ನೌ ಚಾಮರೌ ಯಯೋಸ್ತೌ ತಾದೃಶೌ ಹಸ್ತೌ ಯಯೋಸ್ತೇ ಶ್ರೀಶ್ಚ ಮಹಾಲಕ್ಷ್ಮೀಃ ಶಾರದಾ ಚ ತೇ ತಾಭ್ಯಾಂ ವೀಜಿತಾ ಪರಿವೀಜಿತಾ ಅನಾದಿಕಾಲಾದಾರಭ್ಯ ಪರಿಚರ್ಯಯಾ ವೀಜ್ಯಮಾನಾ । ಇತ್ಯರ್ಥಃ ।

### ೧೪೫. ಓಂ ಲಜ್ಜಾಪದಸಮಾರಾಧ್ಯಾಯೈ ನಮಃ ।

ಲಜ್ಜಾಪದಸಮಾರಾಧ್ಯಾ। ಲಜ್ಜಾ ನಾಮ ಅಂತಃಕರಣಧರ್ಮಃ ಜುಗುಪ್ಸಾಹೇತುಃ ಗೂಹನಸಾಧನಮ್, ಉಪಲಕ್ಷಣಂ

---

೧೪೪. ಹಸ್ತಗಳಿಂದ ಚಾಮರಗಳನ್ನು ಧರಿಸಿರುವ ಮಹಾಲಕ್ಷ್ಮೀ ಮತ್ತು ಶಾರದಾ ದೇವಿಯರಿಂದ ಚಾಮರಗಳನ್ನು ಬೀಸುವ ಸೇವೆಯಿಂದ ಸೇವಿಸಲ್ಪಟ್ಟವಳು. ಅನಾದಿ ಕಾಲದಿಂದ ಸೇವಿಸಲ್ಪಡುತ್ತಿರುವಳು ಎಂದು ತಾತ್ಪರ್ಯವು. ಲಗ್ನೌ ಚಾಮರೌ ಯಯೋಸ್ತೌ ತಾದೃಶೌ ಹಸ್ತೌ ಯಯೋಸ್ತೇ ಶ್ರೀಶ್ಚ ಶಾರದಾ ಚ ತೇ ಚ ತೇ ಶ್ರೀ ಶಾರದೇ ಚ, ತಾಭ್ಯಾಂ ಪರಿವೀಜಿತಾ ಎಂದು ವಿಗ್ರಹವು.

೧೪೫. ಜುಗುಪ್ಸೆಗೆ ಕಾರಣವೂ ಮರೆ ಮಾಚಿಕೊಳ್ಳಲು ಸಾಧನವೂ ಆಗಿರುವ ಅಂತಃಕರಣಧರ್ಮವು ಲಜ್ಜೆಯು. ಲಜ್ಜೆ ಮೊದಲಾದ ಅಂತಃಕರಣ ಧರ್ಮಗಳಿಗೆ ಆಸ್ಪದವಾದ ಮನಸ್ಸಿನಲ್ಲಿ ಚಿಂತಿಸಲು ಅರ್ಹಳಾದವಳು. " ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀಃ

ಮನೋಧರ್ಮಾಣಾಂ ತಸ್ಯ ಪದಂ ಆಶ್ರಯಃ, "ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇತತ್ಸರ್ವಂ ಮನ ಏವ" ಇತಿ ಶ್ರುತೇಃ,ತಸ್ಮಿನ್ ಸಮಾರಾಧ್ಯಾ ಚಿಂತನೀಯೇತ್ಯರ್ಥಃ। "ಯ ಆತ್ಮನಿ ತಿಷ್ಠನ್ನಂತರೋ ಯಮಯತಿ" "ಗುಹಾಹಿತಂ ಗಹ್ವರೇಷ್ಠಂ ಪುರಾಣಂ" "ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ" ಇತ್ಯಾದಿ ಶ್ರುತಿಭ್ಯಃ। ಅಥವಾ ಲಜ್ಜಾಪದಂ ಜೀವಚಕ್ರಂ, ತಸ್ಮಿನ್ ತದಧಿಷ್ಠಾನಾನಂದಾಭಿವ್ಯಕ್ತಿಹೇತುತಯಾ ಬಹಿರ್ಯಾಗಕ್ರಮೇಣ ಪೂಜನೀಯೇತ್ಯರ್ಥಃ।

## ೧೬. ಓಂ ಲಂಪಟಾಯೈ ನಮಃ।

ಲಂಪಟಾ। ಲಮಿತಿ ಪೃಥ್ವೀವಾಚಕಬೀಜೇನ ತದುಪಲಕ್ಷಿತಂ ಜಗಲ್ಲಕ್ಷ್ಯತೇ। ಪಟಶಬ್ದೇನ ಆವಾರಕತ್ವಧರ್ಮವತ್ತಯಾ ಅವಿದ್ಯಾ ಲಕ್ಷ್ಯತೇ। ಲಮಃ ಜಗತಃ ಪಟಃ ಕಾರಣೀಭೂತಾ

---

ಇತ್ಯೇತತ್ ಸರ್ವಂ ಮನ ಏವ" ಎಂಬ ಶ್ರುತಿಯು ಕಾಮ ಲಜ್ಜಾದಿಗಳನ್ನು ಮನೋ ಧರ್ಮವೆಂದು ಪ್ರತಿಪಾದಿಸುವುದು. "ಯ ಆತ್ಮನಿ ತಿಷ್ಠನ್ ಅಂತರೋ ಯಮಯತಿ, ಗುಹಾಹಿತಂ ಗಹ್ವರೇಷ್ಠಂ ಪುರಾಣಮ್, ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಃ" ಎಂಬ ಶ್ರುತಿವಚನಗಳು ಮನಸ್ಸು ಎಂಬ ಅಭಿವ್ಯಕ್ತಿಸ್ಥಾನದಲ್ಲಿ ಚಿಂತಿಸಬೇಕೆಂದು ಹೇಳುತ್ತವೆ. ಅಥವಾ ಲಜ್ಜಾ ಪದಕ್ಕೆ ಜೀವಚಕ್ರವೆಂಬ ಅರ್ಥವನ್ನು ಅಂಗೀಕರಿಸಬೇಕು. ಆ ಜೀವಚಕ್ರದ ಅಧಿಷ್ಠಾನವಾದ ಆನಂದಾಭಿವ್ಯಕ್ತಿಗೆ ಕಾರಣಳಾಗಿ ಬಹಿರ್ಯಾಗ ಕ್ರಮದಿಂದ ಪೂಜಿಸಲು ಅರ್ಹಳು, ಲಜ್ಜಾಯಾಃ ಪದಂ ತಸ್ಮಿನ್ ಆರಾಧಯಿತುಂ ಯೋಗ್ಯಾ ಎಂದು ವಿಗ್ರಹವು.

೧೬. "ಲಂ" ಎಂಬುದು ಪೃಥಿವಿಯ ಬೀಜಾಕ್ಷರವು. ಪ್ರಕೃತದಲ್ಲಿ ಆ ವರ್ಣದಿಂದ ಲಕ್ಷಣಾವೃತ್ತಿಯಿಂದ ಜಗತ್ತು ಎಂಬ ಅರ್ಥವನ್ನು ಪರಿಗ್ರಹಿಸಬೇಕು. ಅಂತಹ ಜಗತ್ತಿಗೆ ಆವಾರಕವಾದ ಅವಿದ್ಯೆಯುಳ್ಳವಳು. "ಮಾಯಿನಂ ತು ಮಹೇಶ್ವರಮ್,ಯ ಏಕೋ ಜಾಲವಾನ್" ಎಂಬ ಶ್ರುತಿಗಳು ಮತ್ತು

ಅವಿದ್ಯಾ ಯಸ್ಯಾಃ ಸಾ ತಥಾ । "ಮಾಯಿನಂ ತು ಮಹೇಶ್ವರಂ" "ಯ ಏಕೋ ಜಾಲವಾನ್"ಇತಿ ಶ್ರುತೇಃ। ಅಜ್ಞಾನೇನಾವೃತಂ ಜ್ಞಾನಂ" ಇತಿ ಸ್ಮೃತೇಶ್ಚ । ಅಥವಾ ಲಂಪಟೋ ನಾಮ ತಂದ್ರೀ ಆಲಸ್ಯಂ ಕರ್ಮೋಪಾಸನಾಬಾಹುಲ್ಯೇಽಪಿ ಪ್ರತಿಬಂಧಕಭೂಯಸ್ತ್ವೇ ಶೀಘ್ರತಯಾ ಪರಮೇಶ್ವರಸ್ಯ ಫಲದಾನೋನ್ಮುಖತಾಯಾಂ ರಾಜಾದಿವಚ್ಚಿರವಿಲಂಬಿತಸೇವಾಫಲದಾನವೈಮುಖ್ಯೇ ತದ್ವತ್ತ್ವೋಪಚಾರಾತ್ ಲಂಪಟೋ ಯಸ್ಯಾಃ ಸಾ ತಥಾ। ಅಥವಾ ಲಂಪಟಾದೀನಾಮಂತಃಕರಣಧರ್ಮಾಣಾಮಧ್ಯಾಸವಶೇನ ತದವಚ್ಛಿನ್ನೇ ಚೈತನ್ಯೇ ಸತ್ತ್ವರಜಸ್ತಮಃಕಾರ್ಯಾಣಾಂ ಉಪಲಬ್ಧೇಸ್ತದ್ವತ್ತ್ವಂ ವಾ ।

## ೧೭. ಓಂ ಲಕುಲೇಶ್ವರ್ಯೈ ನಮಃ ।

ಲಕುಲೇಶ್ವರೀ । ಕುಃ ಪೃಥಿವ್ಯುಪಲಕ್ಷಿತಜಗತ್ ಲೀಯತೇ ಅಸ್ಮಿನ್ನಿತಿ ಕುಲಂ ಮಾಯೋಪಾಧಿಕಚೈತನ್ಯಂ ಪ್ರಲಯಾಧಿ

---

"ಅಜ್ಞಾನೇನಾವೃತಂ ಜ್ಞಾನಮ್" ಎಂಬ ಸ್ಮೃತಿಯು ಪರಬ್ರಹ್ಮನ ಮಾಯಾಂಶದಿಂದ ಜಗತ್ತು ಆವೃತವಾಗಿದೆಯೆಂದು ಪ್ರತಿಪಾದಿಸುತ್ತವೆ. ಅಥವಾ ಕರ್ಮ–ಉಪಾಸನಾ ಮುಂತಾದ ಸಾಧನಗಳು ಅನಂತವಾಗಿದ್ದರೂ ಭಕ್ತರಿಗೆ ಪ್ರತಿಬಂಧಕ ದುರಿತಗಳು ಅನಂತವಾಗಿದ್ದರೆ ರಾಜನಿಗೆ ಸೇವಾ ಫಲ ದಾನದಲ್ಲಿ ಆಸಕ್ತಿಯು ವಿಲಂಬಿತವಾಗುತ್ತಿರುವಂತೆ ಕರ್ಮಫಲ ದಾನೌನ್ಮುಖ್ಯ ದಲ್ಲಿ ಆಲಸ್ಯವುಳ್ಳವಳು. ಅಥವಾ ಲಂಪಟ ಮುಂತಾದ ಅಂತಃಕರಣ ಧರ್ಮಗಳ ಮತ್ತು ಸತ್ತ್ವ–ರಜಃ–ತಮೋಗುಣ ಕಾರ್ಯಗಳ ಅಧ್ಯಾಸದಿಂದ ಅಂತಹ ಗುಣವುಳ್ಳವಳು. ಲಂಪಟಃ ಲಮಃ+ ಪಟಃ, ಸೋಽಸ್ಯಾಸ್ತಿ ಎಂದು ವಿಗ್ರಹವು.

೧೭. ಪೃಥಿವಿಯಿಂದ ಉಪಲಕ್ಷಿತವಾದ ಜಗತ್ತಿನ ಲಯಕ್ಕೆ ಅಧಿಷ್ಠಾನವಾದ ನಿರುಪಾಧಿಕ ಚೈತನ್ಯ ಸ್ವರೂಪಳು, ಮತ್ತು ಸರ್ವೇಶ್ವರಿಯು, "ಯತ್ ಪ್ರಯಂತ್ಯಭಿ ಸಂವಿಶಂತಿ" ಎಂಬ ಶ್ರುತಿಯು ಲಯಾಧಿಷ್ಠಾನ ಶುದ್ಧ ಚೈತನ್ಯ

**ಷ್ಠಾನಮ್ । "ಯತ್ಪ್ರಯಂತ್ಯಭಿಸಂವಿಶಂತಿ" ಇತಿ ಶ್ರುತೇಃ ಲೀಯಮಾನಂ ಕುಲಂ ಲಕುಲಂ ನಿರುಪಾಧಿಕಮಿತ್ಯರ್ಥಃ । ತಚ್ಚ ಸಾ ಈಶ್ವರೀ ಚ ಸಾ ತಥಾ । ಅಥವಾ ಲಕುಲಂ ಸ್ಥಾನವಿಶೇಷಃ ಸ್ವಾಧಿಷ್ಠಾನಂ ಮಣಿಪೂರಕಂ ವಾ, ತಸ್ಯೇಶ್ವರೀ, ವಿಷ್ಣುರುದ್ರಾತ್ಮಿಕೇತ್ಯರ್ಥಃ । ಭೂತಸೃಷ್ಟಿಶ್ರುತೌ ಪೃಥಿವ್ಯಾ ಉದಕೇ ತಸ್ಯ ತೇಜಸಿ ತಸ್ಯ ಪರಮಾತ್ಮನಿ ಲಯಶ್ರವಣಾತ್ । "ಸದಾಯತನಾಃ ಸತ್ಪ್ರತಿಷ್ಠಾಃ" ಇತಿ, ತಸ್ಯೇಶ್ವರೀ ವಿಭೂತಿವಿಶೇಷೋ ವಾ ।**

---

ವನ್ನು ತೋರಿಸುತ್ತಿದೆ. ಅಥವಾ ಲಕುಲವೆಂದರೆ ಸ್ವಾಧಿಷ್ಠಾನ, ಅಥವಾ ಮಣಿಪೂರಕವೆಂಬ ಸ್ಥಾನ ವಿಶೇಷವು ಎಂದು ತಿಳಿಯಬೇಕು. ಅದಕ್ಕೆ ಈಶ್ವರಿಯಾದ ವಿಷ್ಣು ರುದ್ರಾತ್ಮಕಳು. ಭೂತ ಸೃಷ್ಟಿಯನ್ನು ಪ್ರತಿಪಾದಿಸುವ ಶ್ರುತಿಯಲ್ಲಿ ಪೃಥಿವಿಗೆ ಜಲದಲ್ಲಿ ಜಲಕ್ಕೆ ತೇಜಸ್ಸಿನಲ್ಲಿ ಮತ್ತು ತೇಜಸ್ಸಿಗೆ ಪರಮಾತ್ಮನಲ್ಲಿ ಲಯವು ಪ್ರತಿಪಾದಿಸಲ್ಪಟ್ಟಿದೆ. "ಸದಾಯತನಾಃ ಸತ್ಪ್ರತಿಷ್ಠಾಃ" ಎಂಬ ಶ್ರುತಿಯು ಚೈತನ್ಯವನ್ನು ಲಯಾಧಿಷ್ಠಾನವೆಂದು ಪ್ರತಿಷ್ಠಾ ರೂಪವೆಂದು ಪ್ರತಿಪಾದಿಸುವುದು, ಅಥವಾ ಸ್ಥಾನ ವಿಶೇಷಕ್ಕೆ ಅಭಿಮಾನಿಯಾದ ವಿಭೂತಿ ವಿಶೇಷ ರೂಪಳು, ಲಂ ಚ ತತ್ ಕುಲಂ ಚ ತಸ್ಯ ಈಶ್ವರೀ ಎಂದು ವಿಗ್ರಹವು.

## ३८

ಲಬ್ಧಮಾನಾ ಲಬ್ಧರಸಾ ಲಬ್ಧಸಂಪತ್ಸಮುನ್ನತಿಃ ।
ಹ್ರೀಂಕಾರಿಣೀ ಹ್ರೀಂಕಾರಾದ್ಯಾ ಹ್ರೀಂಮಧ್ಯಾ ಹ್ರೀಂ
ಶಿಖಾಮಣಿಃ ॥

### ೧೮. ಓಂ ಲಬ್ಧಮಾನಾಯೈ ನಮಃ ।

ಲಬ್ಧಮಾನಾ । ಸರ್ವೈಃ ಪ್ರಾಣಿಭಿಃ ಲಬ್ಧಃ ಮಾನಃ ಅಧ್ಯಸ್ತಾ ಹಂಕಾರಃ । "ಅಭಿಮಾನಾತ್ಮಕಸ್ತದ್ವದಹಂಕಾರಃ ಪ್ರಕೀರ್ತ್ಯತೇ" ಇತಿ ಸ್ಮರಣಾತ್ । ಅಧ್ಯಾಸೇನಾಹಂಕಾರಾಧಿಷ್ಠಾನೇತ್ಯರ್ಥಃ। ಅಥವಾ, "ಮಾನ ಪೂಜಾಯಾಂ" ಇತಿ ಸ್ಮರಣಾತ್ ಯೈರ್ಯೈಃ ಪ್ರಾಣಿಭಿಃ ವಿದ್ಯೈಶ್ವರ್ಯಕುಲಸೌಂದರ್ಯಾತಿಶಯಾದಿವಶಾತ್ ಪೂಜಾ ಲಭ್ಯತೇ ಸುಖಹೇತುಃ ಸಾ ತದಂತರ್ಯಾಮಿಣಾ ಪೂರ್ವಮೇವ ಲಬ್ಧಾ ಪೂಜಾದಿಜನ್ಯೋಪಕಾರಸ್ಯ ಸುಖಾದೇಃ ಸ್ವಸ್ವರೂಪತಯಾ ಲಬ್ಧತ್ವಾತ್ । ಯದ್ವಾ ಮಾನಃ ಪರಿಮಾಣಃ ಅಣುಮಹದ್ದೀರ್ಘಹ್ರಸ್ವಭೇದೇನ ಪ್ರ

---

೧೮. ಸರ್ವ ಪ್ರಾಣಿಗಳಿಂದ ಹೊಂದಲ್ಪಟ್ಟಿರುವ ಅಭಿಮಾನವೆಂಬ ಅಹಂಕಾರಾಧ್ಯಾಸಕ್ಕೆ ಅಧಿಷ್ಠಾನ ರೂಪಳಾದವಳು. "ಅಭಿಮಾನಾತ್ಮಕಕಸ್ತದ್ವದಹಂಕಾರಃ ಪ್ರಕೀರ್ತ್ಯತೇ" ಎಂಬ ವಚನದಿಂದ ಅಭಿಮಾನವು ಅಹಂಕಾರ ರೂಪವೆಂದು ವ್ಯಕ್ತವಾಗುವುದು. ಅಥವಾ ಸರ್ವ ಪ್ರಾಣಿಗಳು ವಿದ್ಯಾ–ಐಶ್ವರ್ಯ–ಕುಲ–ಸೌಂದರ್ಯಾತಿಶಯ, ಮುಂತಾದ ನಿಮಿತ್ತಗಳಿಂದ ಪೂಜೆಯನ್ನು ಅನುಭವಿಸುವ ಮೊದಲು ಅಂತರ್ಯಾಮಿ ರೂಪದಿಂದಲೂ ಪೂಜಾತಿಶಯದಿಂದ ಹುಟ್ಟುವ ಸುಖವು ಸ್ವಸ್ವರೂಪವಾದುದರಿಂದಲೂ ಹೊಂದಲ್ಪಟ್ಟ ಪೂಜಾದಿ ಮರ್ಯಾದೆಗಳುಳ್ಳವಳು. ಮಾನ ಧಾತುವು ಪೂಜಾ ಎಂಬ ಅರ್ಥದಲ್ಲಿ ಪಠಿತವಾಗಿರುವುದು. ಅಥವಾ ಅಣು, ಮಹತ್, ದೀರ್ಘ, ಹ್ರಸ್ವ ವೆಂಬುವು ನಾಲ್ಕು ವಿಧವಾದ ಪರಿಮಾಣಗಳು. ಜಲಸೂರ್ಯಾದಿಗಳಂತೆ ಉಪಾಧಿ ಧರ್ಮಗಳು ಉಪಹಿತ ಸ್ವರೂಪದಲ್ಲಿ ತೋರುವುದು ಸ್ವಭಾವವಾದುದರಿಂದ ಗಜ–ಸ್ತಂಭ

ಸಿದ್ಧಃ। "ಸ ವಾ ಏಷ ಮಹಾನಜ ಆತ್ಮಾ ಮಹಾನ್ ಪ್ರ
ಭುರ್ವೈ ಪುರುಷಃ" "ಅಣೋರಣೀಯಾನ್ ಮಹತೋ
ಮಹೀಯಾನ್" ಇತ್ಯಾದಿ ವೇದವಾಕ್ಯೈರ್ಜಲಸೂರ್ಯಾದಿ
ವದುಪಾಧಿಧರ್ಮಾಣಾಮುಪಹಿತೇ ಗಜ–ಸ್ತಂಭ–ಮತ್ಕುಣ–
ಸರ್ಪಾದೌ ಪ್ರತೀಯಮಾನತ್ವಾತ್। ಲಬ್ಧಃ ಮಾನಃ ಪರಿ
ಮಾಣಃ ಉಪಹಿತತಯಾ ಜಗತಃ ಯಯಾ ಸಾ ತಥಾ।

## ೧೯. ಓಂ ಲಬ್ಧರಸಾಯೈ ನಮಃ।

ಲಬ್ಧರಸಾ। "ರಸೋ ವೈ ಸಃ" ಇತಿ ಶ್ರುತೇಃ ರಸವತ್
ರಸ್ಯತೇ ಸಂಬಧ್ಯತ ಇತಿ ಅತ್ಯಂತಪ್ರೀತಿವಿಷಯಃ ಆನಂದಃ,
ಸಃ ಸ್ವಸ್ವರೂಪತ್ವೇನ ಲಬ್ಧೋ ಯಯಾ ಸಾ ತಥಾ। ಶೃಂಗಾ
ರರಸೋ ವಾ। ತದ್ವ್ಯಂಜಕಮಂಗಲಾಭರಣಪುಷ್ಪಾಲಂಕಾರ
ವತ್ತ್ವಾದಿತಿ ಭಾವಃ। ಶುದ್ಧಸತ್ತ್ವಪ್ರಧಾನಮಾಯೋಪಾಧಿ
ಕತಯಾ "ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ
ಸಾತ್ತ್ವಿಕಪ್ರಿಯಾಃ" ಇತಿ ಗೀತಾವಚನಾತ್, ನೈವೇದ್ಯಾದೌ

---

ಮುಂತಾದ ವ್ಯಕ್ತಿಗಳಲ್ಲಿರುವ ಅಣು–ಮಹತ್–ದೀರ್ಘ–ಹ್ರಸ್ವ ವೆಂಬ ಚತು
ರ್ವಿಧ ಪರಿಮಾಣಗಳು ಉಪಹಿತ ಚೈತನ್ಯದಲ್ಲಿ ತೋರುವುದರಿಂದ ಹೊಂದಲ್ಪಟ್ಟ
ಪರಿಮಾಣವುಳ್ಳವಳು. "ಸ ವಾ ಏಷ ಮಹಾನಜ ಆತ್ಮಾ ಮಹಾನ್ ಪ್ರಭು
ರ್ವೈ ಪುರುಷಃ ಅಣೋರಣೀಯಾನ್ ಮಹತೋ ಮಹೀಯಾನ್" ಇತ್ಯಾದಿ
ವೇದವಾಕ್ಯಗಳಿಂದ ಉಪಾಧಿ ಧರ್ಮಗಳಿಂದ ಉಪಹಿತ ಚೈತನ್ಯವು ನಾನಾ
ವಿಧ ಧರ್ಮಗಳನ್ನು ಹೊಂದುವುದೆಂದು ತಿಳಿಯುವುದು. ಲಬ್ಧಃ ಮಾನಃ
ಯಯಾ ಸಾ ಎಂದು ವಿಗ್ರಹವು.

೧೯. ಆಸ್ವಾದಿಸಲ್ಪಡುವ ಅತ್ಯಂತ ಪ್ರೀತಿ ವಿಷಯವಾದ ಪರಮಾನಂದ
ವನ್ನು ಸ್ವ ಸ್ವರೂಪವಾಗಿ ಹೊಂದಿರುವವಳು. ಅಥವಾ ಹೊಂದಲ್ಪಟ್ಟ ಶೃಂ
ಗಾರರಸ ವ್ಯಂಜಕವಾದ ಮಂಗಲಾಭರಣ–ಪುಷ್ಪಾಲಂಕಾರಗಳ ಧಾರಣದಿಂದ
ಶೃಂಗಾರ ರಸವುಳ್ಳವಳು. ಅಥವಾ ಶುದ್ಧಸತ್ತ್ವ ಪ್ರಧಾನವಾದ ಮಾಯೋಪಾಧಿ

ಕಟ್ವಾಮ್ಲಲವಣಾದೀನಾಂ ದೇವಾದಿವಿಷಯೇ ನಿಷೇಧಾಚ್ಚ, ಪ್ರೀತಿವಿಷಯತ್ವೇನ ಮಧುರರಸೋ ಲಬ್ಧೋ ಯಯೇತಿ ವಾ ತಥಾ ।

## ೨೦. ಓಂ ಲಬ್ಧಸಂಪತ್ಸಮುನ್ನತ್ಯೈ ನಮಃ ।

ಲಬ್ಧಸಂಪತ್ಸಮುನ್ನತಿಃ । ಲಬ್ಧಾಃ ಸ್ವಸ್ವರೂಪತಯಾ ಸ್ವತಃ ಸಿದ್ಧಾಃ ಯಾಃ ಸಂಪದಃ ಸತ್ಯಕಾಮತ್ವಾದಯಃ ಸಚ್ಚಿದಾನಂದಾದಯೋ ವಾ ತಾಭಿಃ ಸಮುನ್ನತಿಃ ಸರ್ವೋತ್ಕೃಷ್ಟತಾ ಯಸ್ಯಾಃ ಸೇತಿ ತಥಾ । ಬ್ರಹ್ಮಣಃ ಮಾಯಾಮಾತ್ರೋಪಾಧಿನಾ ಅಭಿವ್ಯಜ್ಯಮಾನಾಃ ಗುಣಾಃ ಕರ್ಮಾನುದ್ಭೂತತ್ವಾದನಾಕಸ್ಮಿಕಾಃ ಸಂತಃ ಸರ್ವೋತ್ಕೃಷ್ಟಭಾವಂ ಬ್ರಹ್ಮಣಃ ಜ್ಞಾಪಯಂತಿ । "ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಮ್ । ಪತಿಂ ಪತೀನಾಂ ಪರಮಂ ಪುರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಮ್ ॥, ಸತ್ಯಕಾಮಃ ಸತ್ಯಸಂಕಲ್ಪಃ, ಏಷ ಸರ್ವೇಶ್ವರ

---

ಯಿಂದಲೂ ನೈವೇದ್ಯಾದಿ ಪ್ರಸಂಗದಲ್ಲಿ ಕಟು ಆಮ್ಲ-ಮುಂತಾದ ಆಹಾರ ನಿವೇದನವು ನಿಷಿದ್ಧವಾಗಿರುವುದರಿಂದಲೂ ಹೊಂದಲ್ಪಟ್ಟ ಪ್ರೀತಿ ವಿಷಯವಾದ ಮಧುರಾದಿ ರಸವುಳ್ಳವಳು. ಲಬ್ಧಃ + ರಸಃ ಯಯಾ ಸಾ ಎಂದು ವಿಗ್ರಹವು.

೨೦. ಸ್ವಸ್ವರೂಪವಾಗಿ ಸ್ವತಃ ಸಿದ್ಧವಾಗಿರುವ ಸತ್ಯಕಾಮತ್ವ ಅಥವಾ ಸಚ್ಚಿನಾನಂದಾದಿ ಸಂಪತ್ತುಗಳಿಂದುಂಟಾದ ಸರ್ವೋತ್ಕರ್ಷವುಳ್ಳವಳು. ಬ್ರಹ್ಮವಸ್ತುವಿನಲ್ಲಿ ಕರ್ಮಪರವಶತೆಯಿಲ್ಲದೆ ಮಾಯೋಪಾಧಿ ಮಾತ್ರದಿಂದ ಅಭಿವ್ಯಕ್ತಿ ಹೊಂದುವ ಆಕಸ್ಮಿಕವಾದ ಪೂಜ್ಯ ಗುಣಗಳು ಸರ್ವಾಧಿಕ್ಯವನ್ನು ಸೂಚಿಸುತ್ತವೆ. ''ತಮಿಾಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಮ್ । ಪತಿಂ ಪತೀನಾಂ ಪರಮಂ ಪುರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಮ್, ಸತ್ಯಕಾಮಃ ಸತ್ಯ ಸಂಕಲ್ಪಃ, ಏಷ ಸರ್ವೇ

ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ, ಇತಿ, ಗತಿರ್ಭರ್ತಾ ಪ್ರಭುಃ ಸಾಕ್ಷೀ '' ಇತ್ಯಾದಿಶ್ರುತಿಸ್ಮೃತಿ ಶತೇಭ್ಯಃ । '' ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ '' ಇತಿ ಪ್ರಸಿದ್ಧನಿತ್ಯೋತ್ಕರ್ಷವತ್ತ್ವಂ ಬ್ರಹ್ಮಸ್ವರೂಪಮೇವೇತಿ ನಾತ್ರ ವಿಚಾರಣೀಯಂ ಕಿಂಚಿದಸ್ತೀತ್ಯಭಿಪ್ರಾಯಃ ।

ಇತಿ ತ್ರಿಶತ್ಯಾಂ ವಿದ್ಯಾಯಾಂ ದಶಮಾಕ್ಷರನಾಮವ್ಯಾಖ್ಯಾಯಾಂ
ಲಕಾರವರ್ಣಪ್ರಕಾಶಃ ದಶಮಃ

## ೧. ಓಂ ಹ್ರೀಂಕಾರಿಣ್ಯೈ ನಮಃ ।

ಹ್ರೀಂಕಾರಿಣೀ । ಹ್ರೀಂಕಾರಃ ದ್ವಿತೀಯಖಂಡಸಮಾಪ್ತ್ಯವಯವತಯಾ ವಾಚ್ಯವಾಚಕಸಂಬಂಧೇನ ಅಸ್ಯಾ ಅಸ್ತೀತಿ ತಥಾ ।

---

ಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ, ಗತಿರ್ಭರ್ತಾ ಪ್ರಭುಃ ಸಾಕ್ಷೀ'' ಮುಂತಾದ ಶ್ರುತಿ-ಸ್ಮೃತಿ ವಚನಗಳಿಂದ ಪಾರಮ್ಯ, ಸತ್ಯಕಾಮತ್ವ ಸರ್ವೇಶ್ವರತ್ವಾದಿ ಗುಣಗಳ ಅತಿಶಯವು ಬ್ರಹ್ಮವಸ್ತುವಿನಲ್ಲಿದೆಯೆಂಬುದು ವೇದ್ಯವಾಗುವುದು. '' ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ'' ಎಂಬಂತೆ ಈ ನಿತ್ಯೋತ್ಕರ್ಷವು ಬ್ರಹ್ಮನಲ್ಲಿ ಸ್ವಾಭಾವಿಕವಾಗಿ ಅತಿಶಯದಿಂದ ಇರುವುದೆಂದು ತಿಳಿಯಬೇಕು. ಲಬ್ಧಾಶ್ಚ ತಾಃ ಸಂಪದಶ್ಚ, ತಾಭಿಃ + ಸಮುನ್ನತಿಃ ಯಯಾ ಸಾ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ದಶಮ ಪ್ರಕಾಶವು ಸಮಾಪ್ತವು.

೧. ದ್ವಿತೀಯಖಂಡದ ಸಮಾಪ್ತಿ ಅವಯವವಾಗಿ ಸೇರಿದ ಹ್ರೀಂಕಾರವನ್ನು ವಾಚ್ಯ-ವಾಚಕ ಸಂಬಂಧದಿಂದ ಹೊಂದಿರುವವಳು. ಹ್ರೀಂಕಾರಃ ಅಸ್ಯಾ ಅಸ್ತಿ ಎಂದು ವಿಗ್ರಹವು.

## ೨. ಓಂ ಹ್ರೀಂಕಾರಾದ್ಯಾಯೈ ನಮಃ ।

ಹ್ರೀಂಕಾರಾದ್ಯಾ । ಅತ್ರ ಹ್ರೀಂಕಾರಶಬ್ದೇನ ತತ್ಕಾರ್ಯ ಭೂತಾಃ ವೇದಾಃ, ತೇಷಾಮುಪ್ಯರ್ಥತಯಾ ಕಾರಣತಯಾ ವಾ ಆದ್ಯಾ ಆದೌ ಭವಾ ಪೂರ್ವಭಾವೀತ್ಯರ್ಥಃ। ಶಬ್ದಸ್ಯ ಅರ್ಥ ವಿಷಯತ್ವೇನ ಪ್ರವೃತ್ತೇಃ ಶಕ್ತಿಗ್ರಹಾದೌ ಕಾವ್ಯಾದಿಕೃತೌ ಚ ಅರ್ಥಜ್ಞಾನಪೂರ್ವಕಶಬ್ದಪ್ರಯೋಗದರ್ಶನಾದರ್ಥಸ್ಯ ಪೂರ್ವಭಾವಿತ್ವಮುಕ್ತಮಿತಿ ಭಾವಃ ।

## ೩. ಹ್ರೀಂಮಧ್ಯಾಯೈ ನಮಃ ।

ಹ್ರೀಂಮಧ್ಯಾ। ಅಸ್ಯ ಬೀಜಸ್ಯ ಜಗದಭಿನ್ನ ನಿಮಿತ್ತೋಪಾದಾನ ಭೂತಮಾಯಾವಿಶಿಷ್ಟಚೈತನ್ಯವಾಚಕತಯಾ ತತ್ಪ್ರತೀಕತ್ವೇನ ತನ್ನಿಷ್ಠಯಾವದ್ಗುಣವತ್ತ್ವಂ ತದುಪಾಸನಾತಿಶಯಮಹಿಮ್ನಾ-ಭಿವ್ಯಜ್ಯತೇ । ಅನ್ಯಥಾ ಮಂತ್ರಪುರಶ್ಚರ್ಯಾಸ್ವಿಷ್ಟಸಿದ್ಧ್ಯಭಾವ ಪ್ರಸಂಗಃ ಸ್ಯಾತ್ । ಅವ್ಯವಹಿತಪೂರ್ವನಾಮ್ನಾನಭಿವ್ಯಕ್ತ

---

೨. ಹ್ರೀಂಕಾರದ ಕಾರ್ಯಗಳಾದ ವೇದಗಳಿಗೆ ವೇದ ಶಬ್ದಪ್ರತಿಪಾದ್ಯ ಅರ್ಥ ರೂಪದಿಂದಲೂ ಅಥವಾ ವೇದಗಳಿಗೆ ಕಾರಣ ರೂಪದಿಂದಲೂ ಆದಿಯಲ್ಲಿರುವವಳು. ಶಬ್ದವು ಅರ್ಥವನ್ನು ವಿಷಯೀಕರಿಸಿ ಪ್ರವರ್ತಿಸುವುದರಿಂದಲೂ ಶಕ್ತಿಗ್ರಹ, ಕಾವ್ಯಾದಿ ರಚನೆಗಳಲ್ಲಿ ಅರ್ಥಜ್ಞಾನ ಪೂರ್ವಕವಾಗಿ ಶಬ್ದಪ್ರಯೋಗವು ಪ್ರಸಿದ್ಧವಾದುದರಿಂದಲೂ ಅರ್ಥವು ಪೂರ್ವಭಾವಿಯೆಂಬುದು ಸಮ್ಮತವು. ಹ್ರೀಂಕಾರಸ್ಯ + ಆದ್ಯಾ ಎಂದು ವಿಗ್ರಹವು.

೩. ಹ್ರೀಂ ಎಂಬ ಬೀಜಾಕ್ಷರವು ಜಗದಭಿನ್ನ ನಿಮಿತ್ತೋಪಾದಾನವಾದ ಮಾಯಾವಿಶಿಷ್ಟವಾದ ಚೈತನ್ಯಕ್ಕೆ ವಾಚಕವಾಗಿ ಅದರ ಪ್ರತೀಕವಾದುದರಿಂದ ಚೈತನ್ಯದಲ್ಲಿರುವ ಸಕಲ ಗುಣಾಶ್ರಯತ್ವವು ಉಪಾಸ್ಯವಾಗಿರುವುದರಿಂದ ಅಭಿವ್ಯಕ್ತವಾಗುವುದು. ಅಂತಹ ಪೂಜ್ಯ ಗುಣಾಧಾರತ್ವವು ಹ್ರೀಂಕಾರದಲ್ಲಿಲ್ಲ

ಸ್ವರೂಪಸ್ಯಾಪಿ ಶಬ್ದಜಾಲಸ್ಯ ಏತದ್ಬೀಜಮಾತ್ರಾತ್ಮನೈವಾಂ ಕುರಿತಬೀಜಾರ್ಥವತ್ತಯಾ ಪೂರ್ವಭಾವಿತ್ವಮುಕ್ತಮ್ । ಇದಾನೀಮಭಿವ್ಯಕ್ತಾತ್ಮಕಸ್ವಾರ್ಥಕತಯಾ ವಿವರ್ತವಾದ ಮಾಶ್ರಿತ್ಯ ವಾಚಾರಂಭಣಾಕಾರೇಣ ನಾಮರೂಪದ್ವಯವತ್ತ್ವ ಮುಚ್ಯತೇ । ಹ್ರೀಂಕಾರಬೀಜಾರ್ಥಃ ತೇನ ಶಬ್ದೇನ ಲಕ್ಷ್ಯತೇ। ಮಧ್ಯೇ ವ್ಯವಹಾರಕಾಲೇ ಹ್ರೀಂ ಯಸ್ಯಾಃ ಸಾ ತಥಾ । ಘಟಾದಿಷು ವಸ್ತುಷು ಸಚ್ಚಿದಾನಂದಪ್ರತೀತ್ಯಾ ವ್ಯವಹಾರ ಕಾಲೇಽಪಿ ಪ್ರಪಂಚಕಾರಣಂ ಬ್ರಹ್ಮಾನುಸ್ಯೂತತಯಾ ಭಾಸ ಮಾನಂ ಜಗತ್ಕಾರಣಂ ಇತಿ ಸಿದ್ಧಾಂತಃ । ಅನೇನಾಚೇತನ ಪರಿಣಾಮಾರಂಭಾದಿವಾದಾಃ ನಿಷ್ಪ್ರಮಾಣತಯಾ ಯುಕ್ತ್ಯಾ ದ್ಯಾಭಾಸಕತ್ವೇನ ನಿರಸ್ತಾ ವೇದಿತವ್ಯಾಃ ।

---

ದಿದ್ದರೆ ಅದರ ಪುರಶ್ಚರ್ಯೆಯಿಂದ ಇಷ್ಟಾರ್ಥ ಸಿದ್ಧಿಯು ದೊರೆಯಲಾರದು. ಇದರ ಹಿಂದಿನ ನಾಮ ಮಂತ್ರದಿಂದ ಅಭಿವ್ಯಕ್ತಿಯನ್ನು ಹೊಂದದಿರುವ ಶಬ್ದ ಜಾಲವು ಈ ಬೀಜಾಕ್ಷರ ರೂಪದಿಂದ ತೋರುತ್ತಿರುವ ಅರ್ಥಗಳನ್ನು ಗರ್ಭೀಕರಿಸಿ ರುವುದರಿಂದ ನಾಮ ಮಂತ್ರವು ಪೂರ್ವಭಾವಿಯಾಗಿರುವುದು. ಈ ನಾಮ ಮಂತ್ರದಲ್ಲಿ "ವಾಚಾರಂಭಣಂ" ಎಂಬ ನ್ಯಾಯವನ್ನು ಅನುಸರಿಸಿ ವಿವರ್ತ ವಾದ ಸಿದ್ಧಾಂತದಿಂದ ಅಭಿವ್ಯಕ್ತವಾದ ನಾಮ-ರೂಪಗಳೆಂದು ಅರ್ಥ ಸಾಹಿತ್ಯವು ಪ್ರತಿಪಾದಿಸಲ್ಪಟ್ಟಿದೆ. ಹ್ರೀಂ ಶಬ್ದದಿಂದ ಬೀಜಾರ್ಥವನ್ನು ಲಕ್ಷಣಾ ವೃತ್ತಿ ಯಿಂದ ತೆಗೆದುಕೊಳ್ಳಬೇಕು. ಮಧ್ಯೇ ವ್ಯವಹಾರ ಕಾಲೇ ಹ್ರೀಂ ಯಸ್ಯಾಃ ಎಂದು ವಿಗ್ರಹವು. ಘಟಾದಿ ಬಾಹ್ಯ ವಸ್ತುಗಳಲ್ಲಿ ಸಚ್ಚಿದಾನಂದಾಂಶವು ವ್ಯವ ಹಾರ ಕಾಲದಲ್ಲಿ ತೋರುತ್ತಲಿರುವುದರಿಂದ ಪ್ರಪಂಚಕ್ಕೆ ಕಾರಣವಾದ ಬ್ರಹ್ಮ ವಸ್ತುವು ಕಾರ್ಯಜಾಲಗಳಲ್ಲಿ ಸಂಬಂಧಿಸಿರುವ ಕಾರಣವೆಂಬುದು ಸಿದ್ಧಾಂತವು. ಈ ಸಿದ್ಧಾಂತದಿಂದ ಅಚೇತನದಿಂದಾಗುವ ಪರಿಣಾಮವಾದ ಆರಂಭವಾದ ಮೊದಲಾದ ಪ್ರತಿಪಕ್ಷ ಸಿದ್ಧಾಂತಗಳು ಪ್ರಮಾಣಭೂತವಲ್ಲವೆಂದು ತಿಳಿಯು ವುದು.

## ೪. ಓಂ ಹ್ರೀಂಶಿಖಾಮಣಯೇ ನಮಃ।

ಹ್ರೀಂಶಿಖಾಮಣಿಃ । ಲೋಕೇ ಯಥಾ ಚೂಡಾಮಣಿಃ ಸರ್ವಾಂಗರಚಿತಾಭರಣಾಪೇಕ್ಷಯಾ ತದ್ವಿಜಾತೀಯಪ್ರಕಾಶ ಸತ್ತ್ವಾದ್ಯಾಶ್ರಯವಾನ್ ಉತ್ತಮಾಂಗಸ್ಥಾನವಿಶೇಷೇ ಸ್ಥಾಪಿತಃ ಮಹದೈಶ್ವರ್ಯಾದಿ ತದ್ವತಃ ಪುರುಷಸ್ಯ ಜ್ಞಾಪಯತಿ। ತಥಾ ಸರ್ವಶಬ್ದಜಾಲತದ್ವಾಚ್ಯಾರ್ಥಭೂತಚಿಜ್ಜಡಸಂಬಂಧರೂಪ ಪ್ರಪಂಚವಾಚಕಾತಿಸೂಕ್ಷ್ಮಹ್ರೀಂವರ್ಣಾತ್ಮಕಶ್ರೀವಿದ್ಯಾರಾಜ ಬೀಜಸ್ಯ ಸತ್ಯಜ್ಞಾನಾನಂದಾತ್ಮಕಲಕ್ಷ್ಯಾರ್ಥಭೂತಾ ಸತೀ ಹ್ರೀಂಬೀಜಜಾಪಕಾನಾಂ ಸರ್ವಾರ್ಥಪ್ರದಾನೇನ ಪಾರಮ್ಯೈಶ್ವರ್ಯಂ ವ್ಯಂಜಯತೀತಿ ಗುಣಯೋಗಕೃತನಾಮೇದಮ್। ತಥಾ ಚ ಹ್ರೀಮಃ ಶಿಖಾಮಣಿಃ ಪರಮತಾತ್ಪರ್ಯೇಣ ಜ್ಞಾಪಯತೀತ್ಯರ್ಥಃ।

---

೪. ಲೋಕದಲ್ಲಿ ಇತರಾಂಗಗಳಲ್ಲಿ ತೊಟ್ಟಿರುವ ಸಮಸ್ತಾಭರಣಗಳಿಗಿಂತಲೂ ವಿಲಕ್ಷಣವಾದ ಅತಿಶಯ ಪ್ರಕಾಶಾದಿಗಳಿಂದ ಕೂಡಿದ ಶಿಖಾಮಣಿಯು ಶಿರಸ್ಸಿನಲ್ಲಿ ಧರಿಸಲ್ಪಡುವುದೂ, ಮತ್ತು ಧರಿಸಿರುವ ವ್ಯಕ್ತಿಯಲ್ಲಿ ಮಹೈಶ್ವರ್ಯ ಸಮೃದ್ಧಿಯನ್ನು ಸೂಚಿಸುವುದೂ ಆಗಿದೆ. ಅದರಂತೆ ಸಕಲ ಶಬ್ದಜಾಲ ಅದರ ವಾಚ್ಯಾರ್ಥವಾದ ಚಿಜ್ಜಡ ಸಂಬಂಧರೂಪವಾದ ಪ್ರಪಂಚಗಳಿಗೆ ವಾಚಕವಾಗಿರುವ ಶ್ರೀ ವಿದ್ಯಾರಾಜ ಬೀಜಾಕ್ಷರವಾದ ಅತಿಸೂಕ್ಷ್ಮವಾದ ಹ್ರೀಂ ವರ್ಣಕ್ಕೆ ಲಕ್ಷ್ಯಾರ್ಥವಾದ ಸಚ್ಚಿದಾನಂದಾತ್ಮಕಳೂ ಹ್ರೀಂ ಬೀಜವನ್ನು ಜಪಿಸುವವರಿಗೆ ಸಕಲ ಸಂಪತ್ಸಮೃದ್ಧಿಯನ್ನು ಕೊಟ್ಟು ಪರಮೇಶ್ವರತ್ವವನ್ನು ಸೂಚಿಸುವವಳೂ ಆಗಿರುವಳು. ಹ್ರೀಮಃ + ಶಿಖಾಮಣಿಃ ಎಂದು ವಿಗ್ರಹವು.

## ೩೯

ಹ್ರೀಂಕಾರಕುಂಡಾಗ್ನಿಶಿಖಾ ಹ್ರೀಂಕಾರಶಶಿಚಂದ್ರಿಕಾ ।
ಹ್ರೀಂಕಾರಭಾಸ್ಕರರುಚಿರ್ಹ್ರೀಂಕಾರಾಂಭೋದಚಂಚಲಾ

### ೫. ಓಂ ಹ್ರೀಂಕಾರಕುಂಡಾಗ್ನಿಶಿಖಾಯೈ ನಮಃ ।

ಹ್ರೀಂಕಾರಕುಂಡಾಗ್ನಿಶಿಖಾ । ಹ್ರೀಂಕಾರ ಏವ ಕುಂಡಂ ವಾಚ್ಯವಾಚಕಸಂಬಂಧೇನ ಪರಬ್ರಹ್ಮಾವಚ್ಛೇದಕತಯಾ ಆಹವನೀಯಾದಿಸದೃಶಮ್ । ತಸ್ಯಾಗ್ನಿಶಿಖಾ "ಉದ್ದೀಪ್ತೇಽಗ್ನೌ ಜುಹೋತಿ"—ಇತಿ ಪ್ರಮಾಣೇನ "ಆಹವನೀಯೇ ಜುಹೋತಿ" ಇತಿ ವಿಧಿವಾಕ್ಯಾವಗತಹೋಮಾಧಾರತಾಯಾಃ ಕೇವಲಾಹವನೀಯಸ್ಯಾಯೋಗ್ಯತಯಾ ಸಾಗ್ನಿಜ್ವಾಲಸ್ಯ ಹೋಮಾಧಾರತಾಯಾಂ ಜ್ಞಾಯಮಾನಾಯಾಂ ಅದೃಷ್ಟದ್ವಾರಾ ಸ್ವರ್ಗಸಂಬಂಧೇನ ಸಾರ್ಥಕತಯಾ ತಜ್ಜ್ಞಾಪಕವೇದವಾಕ್ಯಸ್ಯಾಪಿ ಪುರುಷಾರ್ಥಸಂಬಂಧಿತ್ವಮಾಹವನೀಯನಿಷ್ಠ ಹೋಮಾಧಿಕರಣದೀ-

---

೫. ಆಹವನೀಯ ಮುಂತಾದ ಅಗ್ನಿ ಕುಂಡದಲ್ಲಿ ಆಹವನೀಯಾದಿ ಅಗ್ನಿಯನ್ನು ಪ್ರಜ್ವಲಿಸಿ ಹೋಮ ಮಾಡುವುದು ಕರ್ಮಠರ ಪ್ರಯೋಗ ವಿಧಾನವು. ಅಗ್ನಿ ಜ್ವಾಲಾ ಶೂನ್ಯವಾದ ಕೇವಲ ಅಗ್ನಿ ಕುಂಡವು ಹೋಮ ಮಾಡಲು ಅರ್ಹವಲ್ಲ. "ಉದ್ದೀಪ್ತೇಽಗ್ನೌ ಜುಹೋತಿ", "ಯದಾಹವನೀಯೇ ಜುಹೋತಿ" ಎಂಬ ವಾಕ್ಯಗಳಿಂದ ಈ ಅಂಶವು ಸ್ಪಷ್ಟವಾಗುವುದು. ಅಗ್ನಿ ಕುಂಡವು ಅಗ್ನಿ ಜ್ವಾಲೆಯ ಮೂಲಕ ಹವಿಸ್ಸಿಗೆ ಆಧಾರವಾಗಿ ಕರ್ಮವನ್ನು ಪೂರ್ತಿಮಾಡಿ ಪುಣ್ಯ ಸಂಪಾದನೆಗೆ ಮತ್ತು ಸ್ವರ್ಗ ಪ್ರಾಪ್ತಿಗೆ ಸಾಧನವಾಗುವುದರಿಂದ ಅಗ್ನಿ ಕುಂಡವು ಶ್ರೇಯಃಸಾಧನವಾಗುವುದು. ಇಂತಹ ಕರ್ಮವನ್ನು ಬೋಧಿಸುವ ವೇದ ವಾಕ್ಯವು ಈ ಪರಂಪರೆಯಿಂದ ಶ್ರೇಯಃ ಸಾಧನವಾಗುವುದು, ಮತ್ತು ಕುಂಡಕ್ಕೆ ಸಾರ್ಥಕ್ಯವನ್ನು ಸಂಪಾದಿಸುವುದು. ಹಾಗೆ "ಮಂತ್ರೈರುಪಾಸೀತ" ಎಂಬ ವಾಕ್ಯದಿಂದ ಉಪಾಸನಾ ಪ್ರಯೋಗದಲ್ಲಿ ಉಪಯೋಗ ಹೊಂದುವ ಮಂತ್ರ

ಸ್ಫಾಗ್ನಿಜ್ವಾಲಾಸ್ವಾಧಾರಭೂತಕುಂಡಸಾರ್ಥಕ್ಯಸಂಪಾದಕೇ-
ವಾಭಾತಿ । ತಥಾ ಸ್ವವಾಚಕಬೀಜಸ್ಯಾಪಿ "ಮಂತ್ರೈರುಪಾ
ಸೀತ" ಇತಿ ವಿಧಿಗತದೇವತೋಪಾಸನಕರಣಾನಾಂ ಮಂತ್ರಾ
ಣಾಮಪಿ ಸ್ವವಾಚಕತಯಾ ಸಾರ್ಥಕ್ಯಸಂಪಾದನಾತ್ತಥೋ
ಚ್ಯತೇ ।

೬. ಓಂ ಹ್ರೀಂಕಾರಶಶಿಚಂದ್ರಿಕಾಯೈ ನಮಃ ।

ಹ್ರೀಂಕಾರಶಶಿಚಂದ್ರಿಕಾ । ಹ್ರೀಂಕಾರ ಏವ ಶಶೀ ಚಂದ್ರಃ
ತಸ್ಯ ಸ್ವರೂಪಾಭೇದಭೂತಪ್ರಕಾಶಚೈತನ್ಯಂ ಚಂದ್ರಿಕಾಪದೇ
ನೋಪನಿಯುತೇ । ಯಥಾ ಚಂದ್ರಸ್ವರೂಪಭೂತಾಮೃತ
ಪ್ರಸಾರಭೂತಾ ಜ್ಯೋತ್ಸ್ನಾ ದೇವಾದಿಸರ್ವಲೋಕಾನಾಂ
ಸಂಜೀವಕತಯೋಪಕರೋತಿ । ತಥಾ ದೃಢತರಭಕ್ತಿಪರವಶ
ಪುರುಷಧೌರೇಯಾದೀನಾಂ ಹ್ರೀಂಕಾರವಾಚ್ಯಾರ್ಥತಯಾ

---

ಗಳಿಗೆ ವಾಚ್ಯಾರ್ಥ ಸ್ವರೂಪಳಾಗಿ ತನ್ಮೂಲಕ ಉಪಾಸನ ಮಾಡಲ್ಪಟ್ಟು ವಿವಿಧೋ
ಪಾಸನ ಫಲಗಳನ್ನು ಕೊಟ್ಟು ಹ್ರೀಂಕಾರಾದಿ ಮಂತ್ರಗಳನ್ನು ಸಾರ್ಥಕ
ಗೊಳಿಸುವಳಾದ್ದರಿಂದ ವಾಚ್ಯ-ವಾಚಕ ಭಾವವೆಂಬ ಸಂಬಂಧದಿಂದ ಪರಬ್ರಹ್ಮ
ವಸ್ತುವಿಗೆ ಅವಚ್ಛೇದಕವಾದ ಹ್ರೀಂಕಾರವೆಂಬ ಕುಂಡಕ್ಕೆ ಅಗ್ನಿ ಶಿಖೆಯಂತೆ
ಇರುವವಳು. ಹ್ರೀಂಕಾರ ಏವ ಕುಂಡಂ, ತಸ್ಯ ಅಗ್ನಿ ಶಿಖಾ ಎಂದು ವಿಗ್ರಹವು.

೬. ಹ್ರೀಂಕಾರವೆಂಬುವ ಚಂದ್ರನ ಚಂದ್ರಿಕೆಯಂತಿರುವ ಸ್ವರೂಪಾಂಶ
ವಾದ ಪ್ರಕಾಶ ಚೈತನ್ಯ ಸ್ವರೂಪಳು; ಸ್ವರೂಪ ಪ್ರಕಾಶ ಚೈತನ್ಯವು ಚಂದ್ರಿಕೆ
ಯಿಂದ ಹೋಲಿಸಲ್ಪಟ್ಟಿದೆ. ಚಂದ್ರಮಂಡಲದ ಸ್ವರೂಪವಾದ ಅಮೃತ ಪ್ರಸ
ರಣ ಶೀಲವುಳ್ಳ ಚಂದ್ರಿಕೆಯು ದೇವಾದಿ ಲೋಕದ ಪ್ರಜೆಗಳನ್ನು ಸಂಜೀವನ
ಗೊಳಿಸಿ ಉಪಕರಿಸುವುದು. ಅದರಂತೆ ತೀವ್ರ ಭಕ್ತಿಯಿಂದ ಕೂಡಿದ ಮಹಾತ್ಮ
ರಿಗೆ ಹ್ರೀಂಕಾರ ವಾಚ್ಯಾರ್ಥ ಸ್ವರೂಪಳಾಗಿ ಹ್ರೀಂಕಾರಾಭಿನ್ನಳೂ ಮತ್ತು ಜಗ
ತ್ತಿಗೆ ವಿವರ್ತಕಾರಣ ರೂಪಳಾದ್ದರಿಂದ ಸಚ್ಚಿದಾನಂದಗಳನ್ನು ಕೊಟ್ಟು ಸಂಜೀ

ತದಭಿನ್ನತ್ವೇಽಪಿ ಜಗದ್ವಿವರ್ತಕಾರಣತಯಾ ಸಚ್ಚಿದಾನಂದಾ ಧಾಯಕತ್ವೇನ ಸಂಜೀವಯತೀತಿ ಭಾವಃ ।

೭. ಓಂ ಹ್ರೀಂಕಾರಭಾಸ್ಕರರುಚಯೇ ನಮಃ ।

ಹ್ರೀಂಕಾರಭಾಸ್ಕರರುಚಿಃ । ಭಾಸಃ ಕಾಂತೀಃ ಕರೋತಿ ಪ್ರಸಾರ ಯತಿ ಲೋಕೋಪಕಾರಾಯೇತಿ ತಥಾ । ಸೂರ್ಯಃ ತಸ್ಯ ರುಚಿಃ ಪ್ರಚಂಡಭಾನುಃ । ಯಥಾ ಲೋಕೇ ಸೂರ್ಯಃ ವರ್ಷಾಸ್ವತಿಗಾಢತರಸ್ರವದುದಕಧಾರಾಸಂವ್ಯಾಪ್ತದಿಗಂತ ರಾಸು ದಿವಾ ವಿದ್ಯಮಾನೋಽಪಿ ಸೂರ್ಯಃ ಸಾಕ್ಷಾದಯ ಮಿತಿ ಚಾಕ್ಷುಷಜ್ಞಾನಗೋಚರೋ ನ ಭವತಿ । ತದಭಾವೇ ಶಿಷ್ಟಾನಾಂ ಭೋಜನಾದಿಸಂಜೀವಕವ್ಯವಹಾರಾಭಾವೇನ ತದುಪಾಯಸಿದ್ಧ್ಯಾ ಪ್ರಸನ್ನಮನಾಂಸಿ ಭವಂತಿ ತಥಾ ಜ್ಞಾನ ಮಾರ್ಗಾನಧಿಕಾರಿಣಾಂ ಮೋಕ್ಷಮಾರ್ಗೋಪಾಯ

---

ವನಗೊಳಿಸುವವಳೂ ಆಗಿರುವಳು. ಹ್ರೀಂಕಾರ ಏವ ಶಶೀ, ತಸ್ಯ ಚಂದ್ರಿಕಾ ಎಂದು ವಿಗ್ರಹವು.

೭. ಹ್ರೀಂಕಾರವೆಂಬ ಸೂರ್ಯನ ತೀಕ್ಷ್ಣ ಕಿರಣಸ್ವರೂಪಳು. ಸೂರ್ಯನು ಲೋಕೋಪಕಾರಕ್ಕೋಸ್ಕರ ತನ್ನ ಕಿರಣಗಳನ್ನು ಲೋಕಗಳಲ್ಲಿ ಬೀರುತ್ತಾನೆ. ಮತ್ತು ದಿಗಂತಗಳನ್ನು ಮುಚ್ಚುವಂತೆ ಮುಸಲಧಾರಾಕಾರ ವಾಗಿ ಮಹಾವೃಷ್ಟಿಯು ಬೀಳುವ ಸಮಯದಲ್ಲಿ ಹಗಲು ಉದಯಿಸಿದ್ದರೂ ಕೂಡ ಪ್ರೇಕ್ಷಕರ ಕಣ್ಣಿಗೆ ಗೋಚರನಾಗುವುದಿಲ್ಲ. ಆಗ ಸೂರ್ಯನು ಇಲ್ಲದಿದ್ದರೆ ಶಿಷ್ಟರ ಪ್ರಾಣಧಾರಕವಾದ ಭೋಜನಾದಿ ವ್ಯವಹಾರಗಳು ಲೋಪಹೊಂದಿ ವಿಷಾದ ಪೂರ್ಣವಾದ ಮನಸ್ಸುಳ್ಳವರಾಗುವರು. ಹಾಗೆಯೇ ಜ್ಞಾನಮಾರ್ಗ ದಲ್ಲಿ ಅನಧಿಕಾರಿಗಳಲ್ಲಿ ಹ್ರೀಂಕಾರವೆಂಬ ದೇವತಾ ಸ್ವರೂಪವನ್ನು ಮೋಕ್ಷ ಸಾಧನವೆಂದು ತಿಳಿಯದಿರುವುದರಿಂದ ಮೋಡದಿಂದ ಸೂರ್ಯನು ಮುಚ್ಚಿ ಹೋಗಿರುವಂತೆ ಅಜ್ಞಾನದಲ್ಲಿ ಮುಳುಗಿರುವರು. ಆಗ ಪೂರ್ವಜನ್ಮದ ಸುಕೃತ ಪರಿಪಾಕದಿಂದ ಲಭಿಸಿದ ಸದ್ಗುರು ಕೃಪಾಕಟಾಕ್ಷ ಪಾತ್ರತೆಯಿಂದ ಪ್ರತಿ

ಭೂತಾನಿದಿತದೇವತಾರೂಪಹ್ರೀಂಕಾರಾಣಾಂ ಜನಾನಾಂ ಬಹುತರಪುಣ್ಯಮಹಿಮ್ನಾ ಮಹಾವಾತೇನೇವ ಮೇಘಾವಲೌ ದೂರೀಕೃತಾಯಾಂ ಚಂಡಭಾನುರಿವ ಸುಖಸಾಧನಂ ಗುರುಕೃಪಾಪಾಂಗಾವಲೋಕನರೂಪದೀಕ್ಷಾವಶೇನ ಪ್ರತಿಬಂಧಕದುರಿತಾಪಗಮೇ ಪರದೇವತಾರೂಪಂ ಹ್ರೀಂಕಾರಃ ಪುರಶ್ಚರ್ಯಯಾ ಸಾಕ್ಷಾದ್ವಾಚ್ಯಾರ್ಥಾಪರೋಕ್ಷಜ್ಞಾನಹೇತುರ್ಭವತಿ। ಚಿರಕಾಲನೈರಂತರ್ಯಭಾವನಾ ಪ್ರಕರ್ಷೇಣ ತಸ್ಮಿನ್ನಭಿಮುಖೇ ಸತಿ ತಲ್ಲಕ್ಷ್ಯಾರ್ಥರೂಪಪರಮಾನಂದ ಚಿತ್ಕಲಾ ಸ್ವಯಮೇವಾಭಿವ್ಯಕ್ತಾ ಸತ್ಯಾನಂದಾನುಭವಾಮೃತೇನ ಸುಖಯತೀತಿ ತಥೋಚ್ಯತೇ ।

೮. ಓಂ ಹ್ರೀಂಕಾರಾಂಭೋದಚಂಚಲಾಯೈ ನಮಃ

ಹ್ರೀಂಕಾರಾಂಭೋದಚಂಚಲಾ । ಅಂಭಾಂಸಿ ಅಮೃತಾನಿ ದದತೀತ್ಯಂಭೋದಾಃ ಹ್ರೀಂಕಾರೋಽಪಿ ಕಾಮವರ್ಷತ್ವೇನ ತೈರುಪಮೀಯತೇ। ತೇಷು ಚಂಚಲಾ ವಿದ್ಯುಲ್ಲತಾ ವಿದ್ಯ

---

ಬಂಧಕವಾದ ಪಾಪ ಜಾಲವು ಗಾಳಿಯ ಹೊಡೆತದಿಂದ ಮೋಡಗಳು ಹಾರಿಹೋದಂತೆ ದೂರವಾಗಲು ಪರದೇವತಾ ಸ್ವರೂಪವಾದ ಹ್ರೀಂಕಾರವು ಸೂರ್ಯನಂತೆ ವಾಚ್ಯಾರ್ಥದ ಅಪರೋಕ್ಷಸಾಕ್ಷಾತ್ಕಾರಕ್ಕೆ ಕಾರಣವಾಗುವುದು. ದೀರ್ಘಕಾಲನೈರಂತರ್ಯ ಭಾವನಾ ಪ್ರಕರ್ಷದಿಂದ ಪರದೇವತಾ ರೂಪವು ಅಭಿಮುಖವಾಗಲು ಲಕ್ಷ್ಯಾರ್ಥವಾದ ಪರಮಾನಂದರೂಪವಾದ ಚೈತನ್ಯ ಕಲೆಯು ಅಭಿವ್ಯಕ್ತವಾಗಿ ಆನಂದಪ್ರದವಾಗುವುದು. ಹ್ರೀಂಕಾರ ಏವ ಭಾಸ್ಕರಃ ತಸ್ಯ ರುಚಿರಿವ ರುಚಿಃ ಎಂದು ವಿಗ್ರಹವು.

೮. ಹ್ರೀಂಕಾರವೆಂಬ ಮೋಡಗಳಲ್ಲಿ ಮಿಂಚಿನಂತೆ ಇರುವವಳು. ಮೋಡಗಳು ಅಮೃತ ರೂಪವಾದ ವೃಷ್ಟಿಯನ್ನು ಸುರಿಸುವುವು. ಹಾಗೆ ಹ್ರೀಂಕಾರವು ಕಾಮ ವೃಷ್ಟಿಯನ್ನು ಸುರಿಸುವುದು. ಮೋಡಗಳಲ್ಲಿ ಅಭಿನ್ನಪ್ರಕಾಶ ರೂಪವಾಗಿ ಮಿಂಚುಗಳು ಹೊಳೆಯುತ್ತಲಿದ್ದು ಮಳೆಯ ನೀರನ್ನು ಕೊಟ್ಟು ಸಸ್ಯಾದಿ

ತದಭಿನ್ನತ್ವೇಽಪಿ ಜಗದ್ವಿವರ್ತಕಾರಣತಯಾ ಸಚ್ಚಿದಾನಂದಾ ಧಾಯಕತ್ವೇನ ಸಂಜೀವಯತೀತಿ ಭಾವಃ ।

೭. ಓಂ ಹ್ರೀಂಕಾರಭಾಸ್ಕರರುಚಯೇ ನಮಃ ।

ಹ್ರೀಂಕಾರಭಾಸ್ಕರರುಚಿಃ । ಭಾಸಃ ಕಾಂತೀಃ ಕರೋತಿ ಪ್ರಸಾರ ಯತಿ ಲೋಕೋಪಕಾರಾಯೇತಿ ತಥಾ । ಸೂರ್ಯಃ ತಸ್ಯ ರುಚಿಃ ಪ್ರಚಂಡಭಾನುಃ । ಯಥಾ ಲೋಕೇ ಸೂರ್ಯಃ ವರ್ಷಾಸ್ವತಿಗಾಢತರಸ್ರವದುದಕಧಾರಾಸಂವ್ಯಾಪ್ತದಿಗಂತ ರಾಸು ದಿವಾ ವಿದ್ಯಮಾನೋಽಪಿ ಸೂರ್ಯಃ ಸಾಕ್ಷಾದಯ ಮಿತಿ ಚಾಕ್ಷುಷಜ್ಞಾನಗೋಚರೋ ನ ಭವತಿ । ತದಭಾವೇ ಶಿಷ್ಟಾನಾಂ ಭೋಜನಾದಿಸಂಜೀವಕವ್ಯವಹಾರಾಭಾವೇನ ತದುಪಾಯಸಿದ್ಧ್ಯಾ ಪ್ರಸನ್ನಮನಾಂಸಿ ಭವಂತಿ ತಥಾ ಜ್ಞಾನ ಮಾರ್ಗಾನಧಿಕಾರಿಣಾಂ ಮೋಕ್ಷಮಾರ್ಗೋಪಾಯ

---

ವನಗೊಳಿಸುವವಳೂ ಆಗಿರುವಳು. ಹ್ರೀಂಕಾರ ಏವ ಶಶೀ, ತಸ್ಯ ಚಂದ್ರಿಕಾ ಎಂದು ವಿಗ್ರಹವು.

೭. ಹ್ರೀಂಕಾರವೆಂಬ ಸೂರ್ಯನ ತೀಕ್ಷ್ಣ ಕಿರಣಸ್ವರೂಪಳು. ಸೂರ್ಯನು ಲೋಕೋಪಕಾರಕ್ಕೋಸ್ಕರ ತನ್ನ ಕಿರಣಗಳನ್ನು ಲೋಕಗಳಲ್ಲಿ ಬೀರುತ್ತಾನೆ. ಮತ್ತು ದಿಗಂತಗಳನ್ನು ಮುಚ್ಚುವಂತೆ ಮುಸಲಧಾರಾಕಾರ ವಾಗಿ ಮಹಾವೃಷ್ಟಿಯು ಬೀಳುವ ಸಮಯದಲ್ಲಿ ಹಗಲು ಉದಯಿಸಿದ್ದರೂ ಕೂಡ ಪ್ರೇಕ್ಷಕರ ಕಣ್ಣಿಗೆ ಗೋಚರನಾಗುವುದಿಲ್ಲ. ಆಗ ಸೂರ್ಯನು ಇಲ್ಲದಿದ್ದರೆ ಶಿಷ್ಟರ ಪ್ರಾಣಧಾರಕವಾದ ಭೋಜನಾದಿ ವ್ಯವಹಾರಗಳು ಲೋಪಹೊಂದಿ ವಿಷಾದ ಪೂರ್ಣವಾದ ಮನಸ್ಸುಳ್ಳವರಾಗುವರು. ಹಾಗೆಯೇ ಜ್ಞಾನಮಾರ್ಗ ದಲ್ಲಿ ಅನಧಿಕಾರಿಗಳಲ್ಲಿ ಹ್ರೀಂಕಾರವೆಂಬ ದೇವತಾ ಸ್ವರೂಪವನ್ನು ಮೋಕ್ಷ ಸಾಧನವೆಂದು ತಿಳಿಯದಿರುವುದರಿಂದ ಮೋಡದಿಂದ ಸೂರ್ಯನು ಮುಚ್ಚಿ ಹೋಗಿರುವಂತೆ ಅಜ್ಞಾನದಲ್ಲಿ ಮುಳುಗಿರುವರು. ಆಗ ಪೂರ್ವಜನ್ಮದ ಸುಕೃತ ಪರಿಪಾಕದಿಂದ ಲಭಿಸಿದ ಸದ್ಗುರು ಕೃಪಾಕಟಾಕ್ಷ ಪಾತ್ರತೆಯಿಂದ ಪ್ರತಿ

ಭೂತಾನಿದಿತದೇವತಾರೂಪಹ್ರೀಂಕಾರಾಣಾಂ ಜನಾನಾಂ ಬಹುತರಪುಣ್ಯಮಹಿಮ್ನಾ ಮಹಾವಾತೇನೇವ ಮೇಘಾವಲೌ ದೂರೀಕೃತಾಯಾಂ ಚಂಡಭಾನುರಿವ ಸುಖಸಾಧನಂ ಗುರುಕೃಪಾಪಾಂಗಾವಲೋಕನರೂಪದೀಕ್ಷಾವಶೇನ ಪ್ರತಿಬಂಧಕದುರಿತಾಪಗಮೇ ಪರದೇವತಾರೂಪಂ ಹ್ರೀಂಕಾರಃ ಪುರಶ್ಚರ್ಯಯಾ ಸಾಕ್ಷಾದ್ವಾಚ್ಯಾರ್ಥಾಪರೋಕ್ಷಜ್ಞಾನಹೇತುರ್ಭವತಿ। ಚಿರಕಾಲನೈರಂತರ್ಯಭಾವನಾ ಪ್ರಕರ್ಷೇಣ ತಸ್ಮಿನ್ನಭಿಮುಖೇ ಸತಿ ತಲ್ಲಕ್ಷ್ಯಾರ್ಥರೂಪಪರಮಾನಂದಚಿತ್ಕಲಾ ಸ್ವಯಮೇವಾಭಿವ್ಯಕ್ತಾ ಸತ್ಯಾನಂದಾನುಭವಾನ್ಯತೇನ ಸುಖಯತೀತಿ ತಥೋಚ್ಯತೇ।

೮. ಓಂ ಹ್ರೀಂಕಾರಾಂಭೋದಚಂಚಲಾಯೈ ನಮಃ

ಹ್ರೀಂಕಾರಾಂಭೋದಚಂಚಲಾ। ಅಂಭಾಂಸಿ ಅಮೃತಾನಿ ದದತೀತ್ಯಂಭೋದಾಃ ಹ್ರೀಂಕಾರೋಽಪಿ ಕಾಮವರ್ಷತ್ವೇನ ತೈರುಪಮೀಯತೇ। ತೇಷು ಚಂಚಲಾ ವಿದ್ಯುಲ್ಲತಾ ವಿದ್ಯ

---

ಬಂಧಕವಾದ ಪಾಪ ಜಾಲವು ಗಾಳಿಯ ಹೊಡೆತದಿಂದ ಮೋಡಗಳು ಹಾರಿ ಹೋದಂತೆ ದೂರವಾಗಲು ಪರದೇವತಾ ಸ್ವರೂಪವಾದ ಹ್ರೀಂಕಾರವು ಸೂರ್ಯನಂತೆ ವಾಚ್ಯಾರ್ಥದ ಅಪರೋಕ್ಷಸಾಕ್ಷಾತ್ಕಾರಕ್ಕೆ ಕಾರಣವಾಗುವುದು. ದೀರ್ಘಕಾಲನೈರಂತರ್ಯ ಭಾವನಾ ಪ್ರಕರ್ಷದಿಂದ ಪರದೇವತಾ ರೂಪವು ಅಭಿಮುಖವಾಗಲು ಲಕ್ಷ್ಯಾರ್ಥವಾದ ಪರಮಾನಂದರೂಪವಾದ ಚೈತನ್ಯ ಕಲೆಯು ಅಭಿವ್ಯಕ್ತವಾಗಿ ಆನಂದಪ್ರದವಾಗುವುದು. ಹ್ರೀಂಕಾರ ಏವ ಭಾಸ್ಕರಃ ತಸ್ಯ ರುಚಿರಿವ ರುಚಿಃ ಎಂದು ವಿಗ್ರಹವು.

೮. ಹ್ರೀಂಕಾರವೆಂಬ ಮೋಡಗಳಲ್ಲಿ ಮಿಂಚಿನಂತೆ ಇರುವವಳು. ಮೋಡಗಳು ಅಮೃತ ರೂಪವಾದ ವೃಷ್ಟಿಯನ್ನು ಸುರಿಸುವುವು. ಹಾಗೆ ಹ್ರೀಂಕಾರವು ಕಾಮ ವೃಷ್ಟಿಯನ್ನು ಸುರಿಸುವುದು. ಮೋಡಗಳಲ್ಲಿ ಅಭಿನ್ನಪ್ರಕಾಶ ರೂಪವಾಗಿ ಮಿಂಚುಗಳು ಹೊಳೆಯುತ್ತಲಿದ್ದು ಮಳೆಯ ನೀರನ್ನು ಕೊಟ್ಟು ಸಸ್ಯಾದಿ

ಮಾನಾ ತದಭಿನ್ನಪ್ರಕಾಶಮಾನಾ ಸತೀ ವರ್ಷೋದಕದ್ವಾರಾ ಸಸ್ಯಾದ್ಯುತ್ಪಾದಕತ್ವಂ ಯಥಾ ವ್ಯನಕ್ತಿ ತಥಾ ಹ್ರೀಂಕಾರ ವಾಚ್ಯತಯಾ ತದಭಿನ್ನಾಪಿ ತತ್ಸ್ವರೂಪವಿಚಾರಣಾಯಾಂ ಶುದ್ಧಲಕ್ಷ್ಯಾರ್ಥಸ್ವರೂಪಾ ಸತ್ಯಪಿ ಅನಿರ್ವಚನೀಯಸ್ವವಾಚ ಕಮಂತ್ರಪ್ರಕಾಶಿತದೇವತಾತ್ವೇನ ಸ್ವಾಭೀಷ್ಟಪುರುಷಾರ್ಥ ಪ್ರಾಪ್ತಿಹೇತುಭೂತೇತ್ಯಭಿಸಂಧಿಃ ।

---

ಗಳ ಅಭಿವೃದ್ಧಿಗೆ ಮೋಡಗಳು ಪರಮ ಸಹಾಯಕಗಳೆಂದು ಪ್ರಕಟಪಡಿಸುವುವು. ಅದರಂತೆ ಪರದೇವತೆಯು ಹ್ರೀಂಕಾರವಾಚ್ಯಳಾಗಿ ಸ್ವರೂಪ ವಿಮರ್ಶದಿಂದ ಲಕ್ಷ್ಯಾರ್ಥ ಸ್ವರೂಪಳೆಂದು ತಿಳಿಯಲ್ಪಟ್ಟವಳಾದರೂ ಉಪಾಸಕ ಜನರಿಗೆ ವಾಚಕ ಮಂತ್ರದಿಂದ ಪ್ರಕಾಶ್ಯವಾದ ಅನಿರ್ವಚನೀಯ ದೇವತಾ ಸ್ವರೂಪ ಳಾಗಿ ಇಷ್ಟ ಪ್ರಾಪ್ತಿಗೆ ಕಾರಣಳೆಂದು ತಾತ್ಪರ್ಯವು. ಅಂಭಾಂಸಿ ದದ ತೀತ್ಯಂಭೋದಾಃ, ಹ್ರೀಂಕಾರಃ ಅಂಭೋದಾ ಇವ ತೇಷು ಚಂಚಲೇವ ಚಂಚಲಾ ಎಂದು ವಿಗ್ರಹವು.

## ೪೦

ಹ್ರೀಂಕಾರಕಂದಾಂಕುರಿಕಾ ಹ್ರೀಂಕಾರೈಕಪರಾಯಣಾ ।
ಹ್ರೀಂಕಾರದೀರ್ಘಿಕಾಹಂಸೀ ಹ್ರೀಂಕಾರೋದ್ಯಾನಕೇಕಿನೀ ॥

೯. ಓಂ ಹ್ರೀಂಕಾರಕಂದಾಂಕುರಿಕಾಯೈ ನಮಃ ।

ಹ್ರೀಂಕಾರಕಂದಾಂಕುರಿಕಾ । ಹ್ರೀಂಕಾರ ಏವ ಕಂದಂ ದೃಢತರಬೀಜಭಾವಃ ತಸ್ಯ ಅಂಕುರಿಕಾ ಆದಿಪ್ರಸವಃ ನೂತನಾಭಿವ್ಯಕ್ತಿರಿತ್ಯರ್ಥಃ । ಯಥಾ ಲೋಕೇ ಅಂಕುರಾದಿಕಂ ಕಂದಾದಿನಿಷ್ಠೋತ್ಪಾದಕಶಕ್ತಿಮನಭಿಭೂಯೈವ ಸ್ವಯಂ ಸ್ಕಂಧ-ಶಾಖಾಪತ್ರ-ಪುಷ್ಪ-ಫಲಾದ್ಯಾತ್ಮನಾ ಯಥಾ ವಿವರ್ತಮಾನಂ ತತ್ಸಾಮರ್ಥ್ಯಪ್ರಕಟನಕಾರಣಂ ಭವತಿ, ತಥಾ ಹ್ರೀಂಕಾರಸ್ಯ ವೇದೈಕದೇಶತ್ವೇನ ಇತರಪ್ರಮಾಣಾನಪೇಕ್ಷತಯಾ ಸ್ವವಾಚ್ಯಾರ್ಥಜ್ಞಾಪನೇನ ಸ್ವತಃ ಪ್ರಾಮಾಣ್ಯೇ ಸ್ಥಿತೇಽಪಿ ತಜ್ಜನ್ಯಜ್ಞಾನವಿಷಯತಾವಚ್ಛೇದಕಧರ್ಮರೂಪನಾನಾಪ್ರಕಾರಜಗತ್ಪರಿಣಾ

---

೯. ಹ್ರೀಂಕಾರವೆಂಬ ದೃಢಬೀಜರೂಪವಾದ ಗಡ್ಡೆಯು ನೂತನವಾಗಿ ಅಭಿವ್ಯಕ್ತಿ ಹೊಂದಿದ ಮೊದಲನೆಯ ಮೊಳಕೆಯಂತಿರುವವಳು. ಲೋಕದಲ್ಲಿ ಪ್ರಥಮಾಂಕುರವು ಕಂದದಲ್ಲಿರುವ ಶಕ್ತಿಯನ್ನು ತಡೆ ಮಾಡದೆ ತಿರುಳು, ರೆಂಬೆ, ಎಲೆ, ಹೂ, ಮತ್ತು ಹಣ್ಣು ಮುಂತಾದ ಅನೇಕ ರೂಪಗಳಿಂದ ಬೀಜಶಕ್ತಿಯನ್ನು ಹೇಗೆ ಪ್ರಕಟ ಮಾಡುವುದೋ ಹಾಗೆಯೇ ವೇದದ ಏಕ ದೇಶವಾಗಿ ಇತರ ಪ್ರಮಾಣಗಳ ಅಪೇಕ್ಷೆಯಿಲ್ಲದಿರುವ ಹ್ರೀಂಕಾರವು ತನ್ನ ವಾಚ್ಯಾರ್ಥವನ್ನು ಪ್ರಕಟಿಸಿ ಅಲ್ಲಿರುವ ನಾನಾವಿಧ ಜಗತ್ಪರಿಣಾಮಹೇತುತ್ವವನ್ನು ಸೂಚಿಸುವುದು, ಅಂತಹ ಜಗತ್ಪರಿಣಾಮವು ಜ್ಞಾನ ವಿಷಯತೆಯಲ್ಲಿ ಅವಚ್ಛೇದಕವಾಗಿರುವುದು. ಮತ್ತು ಅಂತಹ ಜಗತ್ಕಾರಣತ್ವ ಸಂಪಾದಕವು ಅಘಟಿತ ಘಟನಾಚತುರವಾದ ಮಾಯೆಯು. ಆ ಮಾಯಾವಶದಿಂದ ಪರ

ಮಹೇತುತ್ವಸಾಧಕಾಘಟಿತಘಟನಾಪಟೀಯಸೀಮಾಯೋಪಾ ಧಿಕತ್ವೇನ ತದರ್ಥದ್ವಯರೂಪಾ ಸತೀ ತನ್ಮಾತ್ರಪ್ರಮಾಣಮೇ ದ್ಯೇತ್ಯರ್ಥಃ ।

## ೧೦. ಓಂ ಹ್ರೀಂಕಾರೈಕಪರಾಯಣಾಯೈ ನಮಃ ।

ಹ್ರೀಂಕಾರೈಕಪರಾಯಣಾ । ಹ್ರೀಂಕಾರ ಏವ ಏಕಂ ಅನಿತರ ಸಾಧಾರಣಂ ಚತುರ್ವಿಧಪುರುಷಾರ್ಥಸಾಧಕತಯಾ ಪರಂ ಅಯನಂ ಜ್ಞಾಪಕಂ ಪ್ರಮಾಣಂ ಯಸ್ಯಾಃ ಸಾ ತಥಾ । ಅಸ್ಯ ಬೀಜಸ್ಯ ವಾಚ್ಯಾರ್ಥೋ ಮಾಯಾ, ಸಾ ನಿರಧಿಷ್ಠಾನಾ ನ ಸಿದ್ಧ್ಯತೀತಿ ತದಾಶ್ರಯತ್ವವಿಷಯತ್ವಾಭ್ಯಾಂ ತದ್ರಹಿತಂ ತೇನ ಜ್ಞಾಪ್ಯತ ಇತಿ ಭಾವಃ।

## ೧೧. ಓಂ ಹ್ರೀಂಕಾರದೀರ್ಘಿಕಾಹಂಸ್ಯೈ ನಮಃ ।

ಹ್ರೀಂಕಾರದೀರ್ಘಿಕಾಹಂಸೀ । ಹ್ರೀಂಕಾರ ಏವ ದೀರ್ಘಿಕಾ ರಾಜೋದ್ಯಾನವನಕ್ರೀಡಾವಾಪೀ । ಸಂಸಾರಕಾನನಸಂಚಾರಿ

---

ದೇವತೆಯು ಹ್ರೀಂಕಾರದ ವಾಚ್ಯಾರ್ಥ ಲಕ್ಷ್ಯಾರ್ಥವೆಂಬ ಅರ್ಥದ್ವಯ ರೂಪಳಾಗಿರುವಳು. ಹ್ರೀಂಕಾರ ಏವ ಕಂದಃ, ತಸ್ಯ ಅಂಕುರಿಕಾ ಎಂದು ವಿಗ್ರಹವು.

೧೦. ಇತರ ಸಾಧಾರಣವಲ್ಲದಂತೆ ಚತುರ್ವಿಧ ಪುರುಷಾರ್ಥಗಳಿಗೆ ಸಾಧಕ ವೆಂದು ತಿಳಿಸುವ ಹ್ರೀಂಕಾರವೆಂಬ ಜ್ಞಾಪಕ ಪ್ರಮಾಣವುಳ್ಳವಳು. ಹ್ರೀಂಕಾರ ವೆಂಬ ಬೀಜಕ್ಕೆ ಮಾಯೆಯು ವಾಚ್ಯಾರ್ಥವು. ಆ ಮಾಯೆಯು ವಿಷಯ ಅಧಿಷ್ಠಾನಗಳಿಲ್ಲದೇ ಸಿದ್ಧಿಸಲಾರದು. ಆದುದರಿಂದ ಆಶ್ರಯ ವಿಷಯಭಾವ ದಿಂದ ವಾಸ್ತವಿಕ ಸಂಬಂಧ ಶೂನ್ಯವಾದ ಬ್ರಹ್ಮ ವಸ್ತುವು ಸೂಚಿಸಲ್ಪಡು ತ್ತದೆ. ಹ್ರೀಂಕಾರ ಏವ ಏಕಂ ಪರಂ ಅಯನಂ ಯಸ್ಯಾಃ ಎಂದು ವಿಗ್ರಹವು.

೧೧. ಹ್ರೀಂಕಾರವೆಂಬ ರಾಜೋದ್ಯಾನವನದಲ್ಲಿರುವ ಕ್ರೀಡಾವಾಪಿಯಲ್ಲಿ ಹಂಸ ಪಕ್ಷಿಯಂತೆ ಇರುವವಳು. ಸಂಸಾರಾರಣ್ಯದಲ್ಲಿ ಸಂಚರಿಸಿ ಶ್ರಾಂತರಾದ

ಲೋಕವಿಶ್ರಾಂತಿಕಾರಣತ್ವೇನ ಹ್ರೀಂಕಾರಃ ತಯೋಪಮೀ ಯತೇ । "ಆರಾಮಮಸ್ಯ ಪಶ್ಯಂತಿ ನ ತಂ ಪಶ್ಯತಿ ಕಶ್ಚನ" ಇತಿ ಶ್ರುತೇಃ। ಆ ಸಮಂತಾತ್ ರಮತಿ ಅಸ್ಮಿನ್ನಿತಿ ಆರಾಮಃ, ಅಥವಾ ಜಗತ್ । ತತ್ರೋಪಾಸನಾದಿನಾ ಪರಮಾನಂದ ಪ್ರಾಪಕತಯಾ ವಾ ಹ್ರೀಂಕಾರಃ ಉಪಮೀಯತೇ। ತಸ್ಮಿನ್ ಹಂಸೀ ಸ್ತ್ರೀಹಂಸಃ। ಯಥಾ ಲೋಕೇ ಸಾರಾಸಾರವಿವೇಕಿ ಹಂಸ್ಯಾ ಆಧಾರಸುವರ್ಣಕಮಲಾದಿಮತೀ ವಾಪಿಕಾ ಮಹಾ ರಾಜಸಂಬಂಧಿನೀ ವಿಜ್ಞಾಪ್ಯತೇ, ತದ್ವದ್ವಾಚ್ಯಾರ್ಥರೂಪ ತಯಾ ಪ್ರಕಾಶಮಾನಾ ಸತೀ ಸ್ವಸಂಬಂಧಿಬೀಜಸ್ಯ ಸುಖೋ ತ್ಪಾದಕತ್ವಮೋಕ್ಷಹೇತುತ್ವಂ ದ್ಯೋತಯತೀತ್ಯಭಿಪ್ರಾಯಃ।

೧೨. ಓಂ ಹ್ರೀಂಕಾರೋದ್ಯಾನಕೇಕಿನ್ಯೈ ನಮಃ ।

ಹ್ರೀಂಕಾರೋದ್ಯಾನಕೇಕಿನೀ। ಹ್ರೀಂಕಾರ ಏವ ಉದ್ಯಾನ

---

ಭಕ್ತ ಜನರಿಗೆ ವಿಶ್ರಾಂತಿ ಸುಖವನ್ನು ಕೊಡುವ ಹ್ರೀಂಕಾರವನ್ನು ಕ್ರೀಡಾ ವಾಪಿಯೊಡನೆ ಹೋಲಿಸಿದೆ. "ಆರಾಮ ಮಸ್ಯ ಪಶ್ಯಂತಿ ನ ತಂ ಪಶ್ಯತಿ ಕ ಶ್ಚನ" ಎಂಬ ಶ್ರುತಿಯು ಹ್ರೀಂಕಾರವನ್ನು ಕ್ರೀಡೋದ್ಯಾನ ರೂಪದಿಂದ ವಿಶ್ರಾಂತಿ ಸುಖ ಸಾಧನವೆಂದು ವರ್ಣಿಸುತ್ತಿದೆ. ಅಥವಾ ಆ ಸಮಂತಾತ್ ರಮಂತ್ಯಸ್ಮಿನ್ನಿತಿ ಆರಾಮಃ ಎಂಬ ವ್ಯುತ್ಪತ್ತಿಯಿಂದ ಆರಾಮ ಪದಕ್ಕೆ ಜಗತ್ತು ಅರ್ಥವಾಗುವುದು. ಹ್ರೀಂಕಾರವು ಉಪಾಸನಾ ಮೂಲಕ ಪರಮಾ ನಂದಪ್ರದವಾದ್ದರಿಂದ ಉದ್ಯಾನದಿಂದ ಹೋಲಿಸಲ್ಪಟ್ಟಿದೆ. ಅಂತಹ ಕ್ರೀಡಾ ವಾಪಿಯಲ್ಲಿ ಹಂಸ ಪಕ್ಷಿಗೆ ಆಧಾರವಾಗಿರುವುದು. ಹಂಸ ಪಕ್ಷಿಯು ಮಹಾ ರಾಜ ಸಂಪತ್ತಿಯನ್ನು ಸೂಚಿಸುತ್ತಿದೆ. ಹಂಸಪಕ್ಷಿಯಂತೆ ಸಾರಾಸಾರ ವಿವೇಕವುಳ್ಳ ವಾಚ್ಯಾರ್ಥ ರೂಪದಿಂದ ಪ್ರಕಾಶಿಸುವ ಪರದೇವತೆಯು ತನಗೆ ಸಂಬಂಧಿಯಾದ ಬೀಜಾಕ್ಷರದಲ್ಲಿರುವ ಸುಖೋತ್ಪಾದಕತ್ವ ಮೋಕ್ಷ ಕಾರಣತ್ವ ಧರ್ಮಗಳನ್ನು ಸೂಚಿಸುವುದು. ಹ್ರೀಂಕಾರ ಏವ ದೀರ್ಘಿಕಾ, ತಸ್ಯಾಂ ಹಂಸೀ ಎಂದು ವಿಗ್ರಹವು.

೧೨. ನಾನಾ ವಿಧವಾದ ಉಪಾಸನಾ ಫಲಗಳನ್ನು ನೀಡುವುದರಿಂದ

ವತ್ ಫಲಾನುಭಾವಕತ್ವಾತ್ತಥೋಚ್ಯತೇ ತಸ್ಯ ಕೇಕಿನೀ ಮಯೂರೀ। ಯಥಾ ಲೋಕೇ ಬಹುಷು ಪಕ್ಷಿಷು ಆರಣ್ಯಕೇಷು ಸತ್ಸ್ವಪಿ ತಸ್ಯಾಃ ರೂಪಧ್ವನಿಭ್ಯಾಂ ಸುಖತಯಾ ದರ್ಶನ ಶ್ರವಣಾದಿಜನ್ಯಪ್ರಮೋದಸಾಧಕತಯಾ ಉದ್ಯಾನಾಲಂಕರಿಷ್ಣುತ್ವಂ ತಥಾ ಹ್ರೀಂಕಾರರೂಪದೇವತಾಧ್ವನೇಃ ಸಚ್ಚಿದಾನಂದರೂಪತದ್ವಾಚ್ಯಾರ್ಥಸ್ಯ ಚ ಪರಮಪುರುಷಾರ್ಥಸಾಧಕತ್ವೇನ ಅವಿಶಿಷ್ಟತ್ವೇಽಪಿ ಬ್ರಹ್ಮ-ವಿಷ್ಣು-ರುದ್ರಾದಿಮೂರ್ತಿಷು ಉದ್ಯಾನತರುವಲ್ಲೀಕಕ್ಷ ಗುಲ್ಮಾದಿವದುತ್ತಮನೀಚ ದೇವತಿ-ರ್ಯಙ್ಮನುಷ್ಯಾದಿಷು ಚ ಮಯೂರೀವ ಸ್ವೇಚ್ಛಯಾ ಸರ್ವವ್ಯಾಪಕತ್ವೇನ ತದಾತ್ಮರೂಪತಯಾ ಶರೀರೇಂದ್ರಿಯಪ್ರಾಣಾದ್ಯಾಧಾರಪರಮಪ್ರೇಮಾಸ್ಪದ ಪರಮಾನಂದರೂಪ ಪ್ರತ್ಯ-ಗ್ಗೋಚರಾಹಂವೃತ್ತಿವ್ಯಾಪ್ಯತಯೈತದ್ಬೀಜಪ್ರಕಾಶ್ಯಾ ಭವತೀತ್ಯರ್ಥಃ ।

---

ಉದ್ಯಾನವನದಂತಿರುವ ಹ್ರೀಂಕಾರದಲ್ಲಿ ನವಿಲಿನಂತೆ ಇರುವವಳು, ಲೋಕದಲ್ಲಿ ವನಚರಪಕ್ಷಿಗಳು ಗಣನಾತೀತವಾಗಿದ್ದರೂ ನವಿಲು ಸೌಂದರ್ಯ-ಧ್ವನಿಗಳೆಂಬ ಉತ್ತಮ ಗುಣಗಳಿಂದ ದರ್ಶನ ಶ್ರವಣಾನಂದಗಳನ್ನು ಕೊಟ್ಟು ಉದ್ಯಾನಕ್ಕೆ ಅಲಂಕಾರ ಪ್ರಾಯವಾಗಿರುವುದು. ಅದರಂತೆ ವಾಚಕ, ವರ್ಣಧ್ವನಿ, ವಾಚ್ಯಾರ್ಥವಾದ ಸುಂದರ ಸ್ವರೂಪಗಳನ್ನು ಒಳಗೊಂಡಿರುವ ಹ್ರೀಂಕಾರ ದೇವತೆಯು ಉದ್ಯಾನದಲ್ಲಿರುವ ಇತರ ವೃಕ್ಷ ಗುಲ್ಮಾದಿ ಸ್ಥಾನದಲ್ಲಿ ಉತ್ತಮ ನೀಚ ಭಾವದಿಂದ ಇರುವ ದೇವ, ತಿರ್ಯಙ್, ಮನುಷ್ಯ ಮುಂತಾದವರಲ್ಲಿಯೂ ಪರಮ ಪುರುಷಾರ್ಥ ಸಾಧಕರೆಂದೆನಿಸಿರುವ ಬ್ರಹ್ಮಾದಿ ಮೂರ್ತಿಗಳಲ್ಲಿಯೂ ಅವಿಶಿಷ್ಟಳಾಗಿದ್ದರೂ ಕೂಡ ಸ್ವಸಂಕಲ್ಪ ಮಾತ್ರದಿಂದ ಸರ್ವ ಪ್ರಾಣಿಗಳಲ್ಲಿ ಆತ್ಮ ರೂಪದಿಂದ ವ್ಯಾಪಿಸಿ ಶರೀರ ಇಂದ್ರಿಯ ಪ್ರಾಣ ಮುಂತಾದುವುಗಳಿಗೆ ಆಧಾರ ಪ್ರಾಯಳೂ ಪರಮ ಪ್ರೇಮ ಗೋಚರವಾದ ಆನಂದ ರೂಪಳೂ ಪ್ರತ್ಯಗ್ವಸ್ತುವನ್ನು ವಿಷಯೀಕರಿಸಿದ ಅಹಂ ಎಂಬ ವೃತ್ತಿ ವಿಷಯಳೂ ಆಗಿ ಈ ಬೀಜಾಕ್ಷರದಿಂದ ಪ್ರಕಾಶ್ಯಳಾಗುವಳು, ಹ್ರೀಂಕಾರ ಏವ ಉದ್ಯಾನಂ ತತ್ರ ಕೇಕಿನೀ ಎಂದು ವಿಗ್ರಹವು.

## ೪೧

**ಹ್ರೀಂಕಾರಾರಣ್ಯಹರಿಣೀ ಹ್ರೀಂಕಾರಾವಾಲವಲ್ಲರೀ।
ಹ್ರೀಂಕಾರಪಂಜರಶುಕೀ ಹ್ರೀಂಕಾರಾಂಗಣದೀಪಿಕಾ ॥**

**೧೩. ಓಂ ಹ್ರೀಂಕಾರಾರಣ್ಯಹರಿಣ್ಯೈ ನಮಃ ।**

**ಹ್ರೀಂಕಾರಾರಣ್ಯಹರಿಣೀ। ಹ್ರೀಂಕಾರವಾಚ್ಯಾರ್ಥೈಕದೇಶಭೂತ ಮಾಯಾವಿದ್ಯಾ-ತತ್ಕಾರ್ಯಾಣಾಂ ಬಂಧರೂಪತಯಾ ಗಹನೇ ವ್ಯಾಘ್ರಾದೀನಾಮಿವ ಭಯಹೇತೂನಾಂ ಸದ್ಭಾವೇನ ದುಷ್ಪ್ರವೇಶತ್ವರೂಪಧರ್ಮಸಾಮ್ಯೇನ ಹ್ರೀಂಕಾರಸ್ಯ ಅರಣ್ಯೋಪಮಿತತ್ವಮ್ । ತಥಾ ಚ ಅರಣ್ಯಮಿವ ಹ್ರೀಂಕಾರಃ ಇತಿ ಸರ್ವತ್ರೋಪಮಾನೋತ್ತರಪದಸಮಾಸಃ । ತತ್ರೈವಂ ಸತಿ ಯಥಾರಣ್ಯಗತಪುರುಷಸ್ಯ ಶೀಘ್ರಂ ದೃಷ್ಟಿಪಥಂ ಗತಾ ಹರಿಣೀ ಏಣೀ ವ್ಯಾಘ್ರಾದ್ಯಭಾವನಿಶ್ಚಯೇನ ತದಧಿಗಮ**

---

೧೩. ಹ್ರೀಂಕಾರದ ವಾಚ್ಯಾರ್ಥದ ಒಂದು ಅವಯವದಲ್ಲಿ ಮಾಯಾ-ಅವಿದ್ಯಾ-ತತ್ಕಾರ್ಯಗಳು ಸೇರಿವೆ. ಅವುಗಳೆಲ್ಲವೂ ದುಃಖ ಕಾರಣವಾದ್ದರಿಂದ ಬಂಧನಕ್ಕೆ ಕಾರಣಗಳು, ವ್ಯಾಘ್ರ ಮುಂತಾದ ಭಯಕಾರಣ ಪ್ರಾಣಿಗಳಿಂದ ಅರಣ್ಯವು ಸುಖ ಪ್ರವೇಶಕ್ಕೆ ಅನುಚಿತವಾಗಿರುವಂತೆ ಹ್ರೀಂಕಾರವು ಬಂಧ ಕಾರಣಗಳ ಸಂಪರ್ಕದಿಂದ ದುಷ್ಪ್ರವೇಶವಾಗಿದೆ. ಅದರಿಂದ ಅರಣ್ಯಕ್ಕೆ ಹೋಲಿಸಿದೆ. ಉತ್ತರ ಪದಾರ್ಥದ ಹೋಲಿಕೆಯು ಪೂರ್ವ ಪದಾರ್ಥದಲ್ಲಿ ಬರುವಂತೆ ಇಲ್ಲಿರುವ ಎಲ್ಲ ಸಮಾಸ ಪದಗಳಲ್ಲಿಯೂ ಉಪಮಾನೋತ್ತರ ಪದ ಕರ್ಮಧಾರಯವೆಂಬ ಸಮಾಸವನ್ನು ಮಾಡಬೇಕು. ಧೀರ ಪುರುಷನು ಅರಣ್ಯ ಪ್ರವೇಶಕ್ಕೆ ಯತ್ನಿಸಿದಾಗ ಮೊದಲು ಕಣ್ಣಿಗೆ ಕಂಡ ಹೆಣ್ಣು ಜಿಂಕೆಯು ವ್ಯಾಘ್ರಾದಿ ದುಷ್ಟ ಪ್ರಾಣಿಗಳ ಅಭಾವವನ್ನು ಸ್ಥಿರಪಡಿಸಿ ಅರಣ್ಯ ಪ್ರವೇಶ ಲಭ್ಯವಾದ ಫಲಪ್ರಾಪ್ತಿಗೆ ಸಾಧನವಾಗುವುದು. ಅದರಂತೆ ದೇವಿಯು ನಿರಂತರ ಭಕ್ತಿ ಯೋಗದಲ್ಲಿ ತತ್ಪರರಾದ ಮಾನವರಿಗೆ ಉಪಾಸನಾ ಪರಿಪಾಕದ ಮಹಿಮೆಯಿಂದ ಸಾಕ್ಷಾತ್ಕಾರ ವಿಷಯಳಾಗಿ ಅಜ್ಞಾನವನ್ನು ಧ್ವಂಸ ಮಾಡುವ

ಫಲಪ್ರಾಪ್ತಿಸಾಧನತಾಮನವಗಮಯತಿ ಧೀರಪುರುಷಸ್ಯ ತಥಾ ನಿರಂತರ ಭಕ್ತಿಭಜನಪರಪ್ರಾಣಿಲೋಕಸ್ಯ ಉಪಾಸನಾಪರಿಪಾಕಮಹಿಮ್ನಾ ಅಪರೋಕ್ಷೀಕೃತಾಜ್ಞಾನನಿವೃತ್ತಿಪೂರ್ವಕಂ ಭಯಾಪಕರಣೇನಾನಂದಂ ಪ್ರಾಪಯತೀತಿ ತಯೋಃಪಮಿತೇತಿ ಭಾವಃ। "ತಮೇವ ವಿದಿತ್ವಾಽತಿಮೃತ್ಯುಮೇತಿ" ಇತಿ ಶ್ರುತೇಃ।

## ೧೪. ಓಂ ಹ್ರೀಂಕಾರಾಲವಲ್ಲರ್ಯೈ ನಮಃ।

ಹ್ರೀಂಕಾರಾವಾಲವ[illegible]ರೀ । ಹ್ರೀಂಕಾರಮಂತ್ರವಾಚಕತಾನಿರೂಪಿತವಾಚ್ಯತಾನಾಮಕಸಂಬಂಧಾವಚ್ಛಿನ್ನ ಪರದೇವತಾಸ್ವರೂಪತ್ವೇನ ತದುಪಾಸನಾವಿಷಯಫಲದಾನಸಮರ್ಥಾ ಸತೀ ಆವಾಲಮಾತ್ರಪ್ರರೋಹದ್ವಿವೃದ್ಧವಲ್ಲರ್ಯೋಃಪಮೀಯತೇ।

---

ಮೂಲಕ ಭಯ ಕಾರಣ ವಸ್ತುಗಳನ್ನು ದೂರಮಾಡಿ ಆನಂದವನ್ನು ಕೊಡುವಳು. ಈ ದೃಷ್ಟಿಯಿಂದ ದೇವಿಗೆ ಹೆಣ್ಣು ಜಿಂಕೆಯ ಉಪಮಾನವು ವರ್ಣಿಸಲ್ಪಟ್ಟದೆ. ದೇವೀ ರೂಪವಾದ ಬ್ರಹ್ಮ ಸಾಕ್ಷಾತ್ಕಾರವು ಭಯಕಾರಣವನ್ನು ನಾಶಮಾಡುವುದು ಎಂಬ ವಿಷಯವನ್ನು '' ತಮೇವ ವಿದಿತ್ವಾತಿಮೃತ್ಯುಮೇತಿ'' ಎಂಬ ಶ್ರುತಿಯು ಹೇಳುತ್ತಿದೆ. ಹ್ರೀಂಕಾರಃ ಅರಣ್ಯಮಿವ, ತತ್ರ ಹರಿಣೀವ, ಎಂದು ವಿಗ್ರಹವು.

೧೪. ಹ್ರೀಂಕಾರವೆಂಬ ಮಂತ್ರವು ಪರದೇವತೆಗೆ ವಾಚಕವು. ಇದಕ್ಕೆ ದೇವತೆಯು ವಾಚ್ಯಳು. ಆದ್ದರಿಂದ ದೇವತೆಯಲ್ಲಿ ನಾಮ ಮಂತ್ರದ ವಾಚ್ಯತಾ ಸಂಬಂಧವು ಇರುವುದು, ಹೀಗೆ ಮಂತ್ರ ಸಂಬಂಧವನ್ನು ಹೊಂದಿ ಪರದೇವತೆಯು ಆಯಾಯ ಉಪಾಸನೆಯ ಫಲದಾನಕ್ಕೆ ಸಮರ್ಥಳಾಗುವಳು, ಪಾತಿಯಲ್ಲಿ ಹುಟ್ಟಿ ಬೆಳೆದ ಲತೆಯು ಪಾತಿಯ ಸಂಬಂಧದಿಂದ ಕೂಡಿ ಫಲದಾನೋನ್ಮುಖವಾಗುವುದು. ಆದ್ದರಿಂದ ಹ್ರೀಂಕಾರವು ಪಾತಿಯ ಸಾಮ್ಯವನ್ನೂ ದೇವಿಯು ಲತೆಯ ಸಾಮ್ಯವನ್ನೂ ಹೊಂದಿಕೊಂಡಿರುವರು. ಆದ್ದರಿಂದ ದೇವಿಗೆ

ತಥಾ ಚ ತತ್ಸಂಬಂಧಿತಯಾ ಹ್ರೀಂಕಾರಃ ಜಪಾದಿನಾ ಆ ವಾಲ ಇವ ಸರ್ವದಾ ಸಂರಕ್ಷಣೀಯ ಇತಿ ತಾತ್ಪರ್ಯಾರ್ಥಃ ಪರಿನಿಷ್ಪನ್ನ ಇತಿ ಯಾವತ್ ।

## ೧೫. ಓಂ ಹ್ರೀಂಕಾರಪಂಜರಶುಕ್ಯೈ ನಮಃ ।

ಹ್ರೀಂಕಾರಪಂಜರಶುಕೀ । ಮಂದಾಧಿಕಾರಿಣಾಮಪಿ ಉಪಾಸನಾಕಾರಣಸಾಧಾರಣಪಾರ್ವತೀಪ್ರತೀಕತಯಾ ಹ್ರೀಂಕಾರಸ್ಯ ಬಾಲಕಾದಿಲಾಲನವಿಷಯತ್ವಧರ್ಮಪುರಸ್ಕಾರೇಣ ಪಂಜರೋಪಮಾ । ತಥಾ ಚ ತತ್ರತ್ಯಶುಕೀವ ಸಂಲಾಪಾದಿನಾ ಮನುಷ್ಯಾದಿಚಿತ್ತರಂಜಿನೀ । ಏವಂ ತತ್ತದದೃಷ್ಟಾನುಸಾರೇಣ ಫಲದಾತ್ರೀ ಸತೀ ತಯೋಪಮಿತೇತಿ ದ್ರಷ್ಟವ್ಯಮ್ । ಹ್ರೀಂಕಾರಃ ಪಂಜರಮಿವ ತಸ್ಯ ಶುಕೀ ತತ್ಸಾರ್ಥಕ್ಯಕಾರಿಣೀತ್ಯಭಿಪ್ರಾಯಃ ।

---

ಸಂಬದ್ಧವಾದ ಹ್ರೀಂಕಾರವನ್ನು ಲತೆಯ ಫಲಾರ್ಥಿಗಳು ಅದರ ಸಂಬಂಧವನ್ನು ಹೊಂದಿದ ಪಾತಿಯನ್ನು ರಕ್ಷಿಸಿದಂತೆ ಜಪ-ಧ್ಯಾನಾದಿಗಳಿಂದ ಯಾವಾಗಲೂ ರಕ್ಷಿಸಬೇಕೆಂದು ತಾತ್ಪರ್ಯವು. ಹ್ರೀಂಕಾರಃ ಆವಾಲಮಿವ, ತತ್ರ ವಲ್ಲರೀವ, ಎಂದು ವಿಗ್ರಹವು.

೧೫. ಬಾಲಕರು ಪಂಜರವನ್ನು ನೋಡಿ ಸಮೀಪಕ್ಕೆ ಹೋಗಿ ಲಾಲನಾದಿಗಳನ್ನು ಮಾಡುವರು. ಅದರಂತೆ ಮಂದಾಧಿಕಾರಿಗಳು ಹ್ರೀಂಕಾರವೆಂಬ ಪ್ರತೀಕದಲ್ಲಿ ಪಾರ್ವತೀ ದೇವಿಯ ಉಪಾಸನೆಯನ್ನು ಮಾಡುವುದರಿಂದ ಹ್ರೀಂಕಾರವನ್ನು ಲಾಲಿಸಿದಂತೆ ಆಗುವುದು. ಇದರಿಂದ ಹ್ರೀಂಕಾರಕ್ಕೆ ಪಂಜರದ ಸಾಮ್ಯವು, ಪಂಜರದಲ್ಲಿ ಬಂಧಿತವಾದ ಗಿಣಿಯು ಮಧುರ ವಚನಾದಿಗಳಿಂದ ಮನುಷ್ಯಾದಿಗಳ ಚಿತ್ತವನ್ನು ರಂಜನಮಾಡುವಂತೆ ಹ್ರೀಂಕಾರ ಪ್ರತೀಕದಲ್ಲಿ ನೆಲೆಸಿದ ದೇವಿಯು ಆಯಾಯ ಉಪಾಸಕರ ಪುಣ್ಯ ಪರಿಪಾಕಾನುಗುಣವಾಗಿ ಫಲವನ್ನು ಕೊಟ್ಟು ಚಿತ್ತವನ್ನು ರಂಜನ ಮಾಡುವಳು, ಆದ್ದರಿಂದ ದೇವಿಗೆ ಗಿಣಿಯ ಹೋಲಿಕೆಯು ಸಂಗತವಾಗಿದೆ. ಪಂಜರದಂತಿರುವ ಹ್ರೀಂಕಾರವನ್ನು ಸಾರ್ಥಕ ಮಾಡಿರುವವಳು ಎಂದು ತಾತ್ಪರ್ಯವು. ಹ್ರೀಂಕಾರಃ ಪಂಜರಮಿವ ತತ್ರ ಶುಕೀವ ಎಂದು ವಿಗ್ರಹವು.

## ೧೬. ಓಂ ಹ್ರೀಂಕಾರಾಂಗಣದೀಪಿಕಾಯೈ ನಮಃ ।

**ಹ್ರೀಂಕಾರಾಂಗಣದೀಪಿಕಾ । ಅಂಗಣವತ್ ಸರ್ವಸಾಧಾರಣ ವಿಶ್ರಾಂತಿಸ್ಥಾನತಯಾ ಹ್ರೀಂಕಾರಸ್ಯ ತದುಪಮಾ ತಸ್ಯ ದೀಪಿಕಾ। ಯಥಾಂಗಣಾರೋಪಿತದೀಪಃ ಬಾಹ್ಯಾಂಭ್ಯಂತರ ವಸ್ತುಜಾತಂ ಪ್ರಕಾಶಯನ್ ತತ್ರತ್ಯಲೋಕಾನಾಮಂಧಕಾರಾದಿನಿವರ್ತನಪೂರ್ವಕಮಭೀಷ್ಟವ್ಯವಹಾರಹೇತುತಯಾ ಸರ್ವಾನ್ ಶ್ಲಾಘಯತಿ ಸ್ವಯಮಪಿ ತೈಃ ಸಂರಕ್ಷ್ಯತೇ, ತಥಾ ಹ್ರೀಂಕಾರಬೀಜಾರ್ಥಶ್ರವಣ-ಮನನ-ನಿದಿಧ್ಯಾಸನ-ನಿರಂತರಾಭ್ಯಾಸಾದಪರೋಕ್ಷೀಕೃತಸ್ವಯಂಪ್ರಕಾಶಾನಂದರೂಪಾ ಸತೀ ಸ್ವಸೇವಕಾನ್ ಸರ್ವೋತ್ಕರ್ಷಯತೀತಿ ತದುಪಸಿತಾ ಸತೀ ತಥೋಚ್ಯತೇ ।**

---

೧೬. ಅಂಗಣವು ಸರ್ವ ಸಾಧಾರಣವಾದ ವಿಶ್ರಾಂತಿ ಸ್ಥಾನವು. ಹ್ರೀಂಕಾರವು ಸಕಲಾಧಿಕಾರಿಗಳಿಗೆ ಉಪಾಸನಾ ವಿಷಯವಾಗುವುದು. ಆದುದರಿಂದ ಹ್ರೀಂಕಾರಕ್ಕೆ ಅಂಗಣ ಸಾಮ್ಯವು ವರ್ಣಿಸಲ್ಪಟ್ಟಿದೆ. ಅಂಗಣದಲ್ಲಿನ ದೀಪವು ಹೊರಗೆ ಒಳಗೆ ಇರುವ ಪದಾರ್ಥಗಳನ್ನು ಪ್ರಭೆಯಿಂದ ವ್ಯಕ್ತಪಡಿಸಿ ಅಲ್ಲಿದ್ದ ಜನರ ಅಂಧಕಾರವನ್ನು ನಿವೃತ್ತಿ ಮಾಡುವುದರ ಮೂಲಕ ಇಷ್ಟವಾದ ವ್ಯವಹಾರವನ್ನು ನಡೆಸಿ ಜನರನ್ನು ಕೃತಾರ್ಥರನ್ನೂ ಪ್ರಶಂಸಾ ಪಾತ್ರರನ್ನೂ ಮಾಡುವುದು. ಮತ್ತು ತಾನು ಈ ಪ್ರಯೋಜನ ಲಾಭಕ್ಕೋಸ್ಕರ ಅವರಿಂದ ರಕ್ಷಿಸಲ್ಪಡುವುದು. ಅದರಂತೆ ಹ್ರೀಂಕಾರ ಮಂತ್ರ ಬೀಜದಲ್ಲಿ ಶ್ರವಣ-ಮನನ ನಿದಿಧ್ಯಾಸನಗಳನ್ನು ನಿರಂತರವಾಗಿ ಅಭ್ಯಾಸಮಾಡಿ ಸಾಕ್ಷಾತ್ಕಾರ ಹೊಂದಿದ ಜನರಿಗೆ ದೇವಿಯು ಸ್ವಪ್ರಕಾಶಾನಂದ ರೂಪದಿಂದ ಪ್ರತ್ಯಕ್ಷಳಾಗಿ ಸ್ವಭಕ್ತರನ್ನು ಸರ್ವೋತ್ತಮರನ್ನಾಗಿ ಮಾಡುವಳು. ಆದ್ದರಿಂದ ಅಂಗಣದಂತಿರುವ ಹ್ರೀಂಕಾರದಲ್ಲಿ ದೀಪದಂತೆ ಭಾಸಿಸುವವಳು, ಹ್ರೀಂಕಾರಃ ಅಂಗಣಮಿವ ತತ್ರ ದೀಪ ಇವ ಎಂದು ವಿಗ್ರಹವು.

## ೪೨

**ಹ್ರೀಂಕಾರಕಂದರಾಸಿಂಹೀ ಹ್ರೀಂಕಾರಾಂಭೋಜಭೃಂಗಿಕಾ ।**
**ಹ್ರೀಂಕಾರಸುಮನೋಮಾಧ್ವೀ ಹ್ರೀಂಕಾರತರುಮಂಜರೀ ॥**

### ೧೭. ಓಂ ಹ್ರೀಂಕಾರಕಂದರಾಸಿಂಹ್ಯೈ ನಮಃ ।

**ಹ್ರೀಂಕಾರಕಂದರಾಸಿಂಹೀ । ಪರ್ವತಶಿಖರಾಗ್ರವರ್ತಿಗುಹಾ ಕಂದರಾ ದರೀತ್ಯರ್ಥಃ । ವೇದಮೌಲಿಪಠಿತಹ್ರೀಂಕಾರಸ್ಯ ಗ್ರಾಮ್ಯವಿಷಯಲಿಪ್ಸುಪ್ರಾಣಿಪ್ರವೇಶಯೋಗ್ಯತಾವಿಕಲತಯಾ ಕಂದರೋಪಮಾ । ತತ್ರ ಯಥಾ ಸಿಂಹೀ ಸ್ವೇತರಕ್ಷುದ್ರಮೃಗ ಪ್ರವೇಶಭಯಹೇತುಸಟಾದಿಸ್ವಾಸ್ಯಚಿಹ್ನಾನುಮಿತಾ ತಸ್ಯಾಃ ಸ್ವಾಶ್ರಯಮಾತ್ರತಾಂ ಧೀರಸ್ಯ ತತ್ಪರಿಸರನಖನಿರ್ಘಾತಮು ಕ್ತಾಫಲಾದಿಪ್ರಾಪ್ತಿಂ ಚ ನಯತಿ । ತಥಾ ಮಂದಭಕ್ತಿತಂದ್ರೀ ಬುಭುಕ್ಷಾದಿ ಕಲುಷಿತ ಪರಿಚ್ಛಿನ್ನಾಭಿಮಾನದೇವತಾಂತರ ಪ್ರತಿ**

---

೧೭. ಪರ್ವತದ ಶಿಖರಾಗ್ರದಲ್ಲಿರುವ ಗುಹೆಯು ಕಂದರಾ ಶಬ್ದದ ಅರ್ಥವು. ವೇದ ಶಿರೋಭಾಗ (ವೇದಾಂತ) ದಲ್ಲಿ ಹೇಳಿರುವ ಹ್ರೀಂಕಾರವು ಗ್ರಾಮ್ಯವಾದ ವಿಷಯ ಭೋಗದಲ್ಲಿ ಆಶೆಯನ್ನು ಇಟ್ಟಿರುವ ಪ್ರಾಣಿಗಳ ಪ್ರವೇಶಕ್ಕೆ ಯೋಗ್ಯವಾಗಿಲ್ಲ. ಕಂದರೆಯು ಸಾಮಾನ್ಯ ಪ್ರಾಣಿಗಳಿಗೆ ಪ್ರವೇಶ ಯೋಗ್ಯವಾಗಿಲ್ಲ. ಆದ್ದರಿಂದ ಕಂದರೆಯ ಹೋಲಿಕೆಯನ್ನು ಹ್ರೀಂಕಾರಕ್ಕೆ ವರ್ಣಿಸಿದೆ. ಕಂದರಾವಾಸಿಯಾದ ಸಿಂಹವು ಇತರ ಕ್ಷುದ್ರ ಮೃಗ ಪ್ರವೇಶವನ್ನು ತಡೆಯುವಂತೆ ಭಯ ಕಾರಣವಾದ ತನ್ನ ಸಟಾದಿ ಚಿಹ್ನವನ್ನು ತೋರಿಸುತ್ತ ಪ್ರಾಣಿ ಸಾಮಾನ್ಯವನ್ನು ನಿಷೇಧಿಸಿ ತಾನು ಮಾತ್ರ ಅಲ್ಲಿ ವಾಸಿಸುವುದು. ನಿರ್ಲಕ್ಷ್ಯವಾಗಿ ಬಂದ ಧೀರ ಪುರುಷನಿಗೆ ಗಜ ಕುಂಭಗಳನ್ನು ನಖದಿಂದ ಭೇದಿಸಿದಾಗ ಚಲ್ಲಿರುವ ಮುತ್ತು ಮುಂತಾದ ಭಾಗ್ಯ ಸಮೃದ್ಧಿಯನ್ನು ಕೊಡುವುದು. ಮಂದ ಭಕ್ತಿಯುಳ್ಳ, ಆಲಸ್ಯ, ಹಸಿವು ಮುಂತಾದ ದೋಷಗಳಿಗೆ ವಶರಾದ ಜನರು ಪರಿಚ್ಛಿನ್ನಾಭಿಮಾನದಿಂದ ದೇವತಾಂತರವನ್ನು ಪ್ರತಿಪಾದಿಸುವ ಬೀಜಾಕ್ಷರದಲ್ಲಿ ರಮಿಸುವುದರಿಂದ ದೇವಿಯು ಅವರಿಗೆ ಕಂದರೆಯಂತಿ

ಸಾದಕಬೀಜತಯಾ ಸ್ವದೇವತೈಕ್ಯಭಾವಂ ಕಾಮಿತಾರ್ಥಂ ಚ ಪ್ರಾಪಯತೀತಿ ಸಿಹ್ಮ್ಯುಪಮಿತಾ ಸತೀ ತಥೋಚ್ಯತೇ ।

೧೮. ಓಂ ಹ್ರೀಂಕಾರಾಂಭೋಜಭೃಂಗಿಕಾಯೈ ನಮಃ ।

ಹ್ರೀಂಕಾರಾಂಭೋಜಭೃಂಗಿಕಾ । ಹ್ರೀಂಕಾರಸ್ಯ ಅಷ್ಟೈಶ್ವರ್ಯಾತ್ಮಕಪುರುಷಾರ್ಥಸಾಧಕನಾನಾಶಕ್ತಿಮತ್ತಯಾ ನಾನಾಪ್ರಕಾರವರ್ಣಾಂತರಘಟಿತತ್ವೇನ ಪರಾಗಪರಿಮಲಾದಿಮತ್ಕಮಲೋಪಮಿತತ್ವಮಿತಿ ಯೋಜನೀಯಮ್। ಕಮಲೇ ಯಥಾ ಮಧುಮಾತ್ರಸಾರಗ್ರಾಹಿಣೀ ಭೃಂಗೀ ರಮತೇ ಸರ್ವಪುಷ್ಪರಸಮಧುಪಾನಸ್ವಾಭಾವ್ಯೇನ ಸರ್ವಸಮಾಪಿ ಮಧ್ವಾಧಿಕ್ಯವಿವಿದಿಷಯಾ ಪ್ರಭೂತಮಧುವತ್ತ್ವೇನ ಚ ತಸ್ಮಿನ್ನೇವ ವಿಶಿಷ್ಯಾಸಕ್ತಿಮತೀ, ತಥಾ ಸರ್ವಮಂತ್ರಬೀಜವಾಚ್ಯದೇವತಾತ್ಮನಾ ಸರ್ವಾನುಗತಾಪಿ ಹ್ರೀಂಕಾರಸ್ಯ ವಿಶಿಷ್ಟಗುಣವತ್ತ್ವೇನ ಸರ್ವೋ

---

ರುವ ಹ್ರೀಂಕಾರ ಪ್ರವೇಶವನ್ನು ತಡೆದು ಧೀರ ಭಾವದಿಂದ ಬಂದ ಉಪಾಸಕನಿಗೆ ಸರ್ವದೇವತೈಕ್ಯವನ್ನೂ ಕಾಮಿತಾರ್ಥ ಪ್ರಾಪ್ತಿಯನ್ನೂ ಅನುಗ್ರಹಿಸುವಳು. ಆದ್ದರಿಂದ ಸಿಹ್ಮದಂತೆ ಇರುವವಳು. ಹ್ರೀಂಕಾರಃ ಕಂದರೇವ, ತತ್ರ ಸಿಹ್ಮೀವ, ಎಂದು ವಿಗ್ರಹವು.

೧೮. ಕಮಲದಂತಿರುವ ಹ್ರೀಂ ಎಂಬ ಬೀಜಾಕ್ಷರದಲ್ಲಿ ದುಂಬಿಯಂತಿರುವವಳು. ಹ್ರೀಂಕಾರದಲ್ಲಿ ಅಷ್ಟೈಶ್ವರ್ಯ ರೂಪವಾದ ನಾನಾ ವಿಧ ಪುರುಷಾರ್ಥಗಳನ್ನು ಸಿದ್ಧಿಸಿಕೊಡುವ ಅನೇಕ ಶಕ್ತಿಗಳೂ, ಅನೇಕವಿಧವಾದ ವರ್ಣಗಳಿಂದ ಕೂಡಿದ ತತ್ತ್ವಗಳೂ, ಇರುವುದರಿಂದ ಹ್ರೀಂಕಾರವನ್ನು ಪರಾಗ. ಪರಿಮಲ ಮುಂತಾದ ಅನೇಕ ಗುಣಗಳಿಂದ ಕೂಡಿದ ಕಮಲಪುಷ್ಪದೊಡನೆ ಹೋಲಿಸಿದೆ. ದುಂಬಿಯು ಕಮಲದಲ್ಲಿ ಮಧುವೆಂಬ ಸಾರಾಂಶವನ್ನು ಮಾತ್ರ ಗ್ರಹಿಸುತ್ತ ರಮಿಸುವುದು. ಮತ್ತು ಸಮಸ್ತ ಜಾತಿಯ ಪುಷ್ಪರಸ ಮಧುಪಾನದ ಸ್ವಭಾವದಿಂದ ಸಕಲ ಪುಷ್ಪಗಳಿಗೆ ಸಾಧಾರಣವಾಗಿದ್ದರೂ ಅಧಿಕವಾದ ಮಧು ರಸದ ಲಾಭವನ್ನು ಆಶಿಸಿ ಅಧಿಕ ಮಧುರಸಕ್ಕೆ ಪಾತ್ರವಾದ ಕಮಲದಲ್ಲಿ ವಿಶೇಷವಾದ ಆಸಕ್ತಿಯನ್ನಿಟ್ಟುಕೊಂಡಿರುವುದು. ಅದರಂತೆ

ಪಾದಾನಸಗುಣಬ್ರಹ್ಮಪ್ರತಿಪಾದಕತಯಾ ತದೀಯಸ್ವರೂಪ ತಟಸ್ಥಲಕ್ಷಣವತ್ತ್ವೇನ ತದಭಿನ್ನಸ್ವರೂಪತಯಾ ಸರ್ವಶಬ್ದ ಜಾಲಪ್ರಕೃತಿತ್ವೇನ ಚ ರೂಢ್ಯಾ ಲಕ್ಷಣಯಾ ವಾ ತತ್ಸಂ ಬಂಧಿನೀ ಸತೀ ತದುಪಾಸಕಾನಾಂ ತದಧಿಷ್ಠಾನತಯಾ ಚ ತೈರ್ಲಕ್ಷ್ಯತ ಇತಿ ಭೃಂಗ್ಯುಪಮಯಾ ವರ್ಣಿತೇತಿ ತಾತ್ಪ ರ್ಯಮ್ ।

೧೯. ಓಂ ಹ್ರೀಂಕಾರಸುಮನೋಮಾಧ್ವ್ಯೈ ನಮಃ ।

ಹ್ರೀಂಕಾರಸುಮನೋಮಾಧ್ವೀ । ಹ್ರೀಂಕಾರಸ್ಯ ವಾಂಛಿತಫಲ ಪ್ರದಾನಸಾಧಕತಯಾ ಸುಮನಃಸಾದೃಶ್ಯಮ್ । ಅಥವಾ ಪುಷ್ಪಾಣಿ ವ್ಯವಹಾರಸಮಯೇ ಬಹುಸಾವಧಾನತಯಾ ವ್ಯ ವಹರ್ತವ್ಯಾನಿ, ಪರಮಮಾರ್ದವಾಧಿಕರಣತ್ತ್ವೇನ ಬಹುಮಾ ನ್ಯತ್ವಾತ್, ತಥಾ ಹ್ರೀಂಕಾರೋಽಪ್ಯುಪಾಸನವೇಲಾಯಾಂ ಪರಬ್ರಹ್ಮವಾಚಕತ್ವೇನ ಪ್ರಯತ್ನಪೂರ್ವಕಮೇಕಾಗ್ರಮನ

---

ದೇವಿಯು ಸರ್ವ ಮಂತ್ರಗಳ ಬೀಜಾಕ್ಷರಗಳಿಂದ ವಾಚ್ಯಳಾಗಿರುವುದರಿಂದ ಸರ್ವ ಮಂತ್ರಗಳಲ್ಲಿ ಅನುಗತಳಾಗಿದ್ದರೂ ಹ್ರೀಂಕಾರದಲ್ಲಿ ವಿಶೇಷ ಗುಣಗಳಿರುವುದ ರಿಂದಲೂ, ಸಕಲ ಜಗದುಪಾದಾನವಾದ ಸಗುಣ ಬ್ರಹ್ಮಪ್ರತಿಪಾದಕವಾದ್ದ ರಿಂದಲೂ ಬ್ರಹ್ಮವಸ್ತುವಿನ ಸ್ವರೂಪ ತಟಸ್ಥ ಲಕ್ಷಣಗಳ ಸಂಬಂಧದಿಂದ ಬ್ರಹ್ಮವಸ್ತುವಿಗೆ ಅಭಿನ್ನವಾಗಿರುವುದರಿಂದಲೂ ಮತ್ತು ಸಮಸ್ತ ಶಬ್ದಜಾಲಕ್ಕೆ ಪ್ರಕೃತಿರೂಪಳಾದ್ದರಿಂದಲೂ ರೂಢಿ ಅಥವಾ ಲಕ್ಷಣಾವೃತ್ತಿಗಳಿಂದ ಹ್ರೀಂಕಾರ ದಲ್ಲಿ ಸಂಬದ್ಧಳಾಗಿ ಹ್ರೀಂಕಾರೋಪಾಸಕರಿಗೆ ಆ ಬೀಜಾಕ್ಷರದಲ್ಲಿ ಸಾಕ್ಷಾ ತ್ಕಾರ ಪಾತ್ರಳಾಗುವಳು. ಆದ್ದರಿಂದ ದೇವಿಯನ್ನು ದುಂಬಿಯ ಉಪಮಾನ ದಿಂದ ವರ್ಣಿಸಿದೆ. ಹ್ರೀಂಕಾರಃ ಅಂಭೋಜಮಿವ ತತ್ರ ಭೃಂಗೀವ ಎಂದು ವಿಗ್ರಹವು.

೧೯. ಪುಷ್ಪ ಸಮಾನವಾದ ಹ್ರೀಂಕಾರದಲ್ಲಿ ಮಧುರಸ ಸಮಾನಳಾಗಿರುವ ವಳು. ಹ್ರೀಂಕಾರದಲ್ಲಿ ಇಷ್ಟಾರ್ಥವೆಂಬ ಫಲವನ್ನು ಅನುಗ್ರಹಿಸುವ ಶಕ್ತಿಯಿರು ವುದರಿಂದ ಪುಷ್ಪ ಸಾಮ್ಯವು ಅನ್ವಯಿಸುವುದು. ಅಥವಾ ಅತ್ಯಂತ ಮೃದುವಾದ ಪುಷ್ಪಗಳನ್ನು ಉಪಯೋಗಿಸುವ ಸಮಯದಲ್ಲಿ ಅದಕ್ಕೆ ಚ್ಯುತಿ ಬರದಂತೆ

ಸಾ ದೇವತಾಭಿನ್ನತ್ವೇನ ಧ್ಯಾತವ್ಯ ಇತಿ ನಿಯಮಸಂಪಾದ
ನಾರ್ಥಂ ಪುಷ್ಪೋಪಮಮಿತಿ ವಿಭಾವನೀಯಮ್ । ತಥಾ ಚ
ವಾಯ್ವಾದಿನಾ ಶುಷ್ಕಾಣಿ ಪುಷ್ಪಾಣಿ ನಿರ್ಗಂಧತ್ವೇನ ಫಲಾ
ನ್ಯಜನಯಿತ್ವಾ ಪರಿಪತಂತಿ ಫಲಜನಕಶಕ್ತೇರಭಾವೇನ; ತದಿತ
ರಾಣಿ ತು ತದ್ವತ್ತ್ವೇನ ತಜ್ಜನಕಾನಿ ಲೋಕೇ ದೃಷ್ಟಾನಿ ।
ಪುಷ್ಪರಸಶ್ಚ ಪೃಥಿವೀಕಾರಣಭೂತೋದಕತನ್ಮಾತ್ರಸ್ವರೂಪ
ಮಧುರರಸಾತ್ಮಕತ್ವಾತ್ ಪುಷ್ಪಾಣಾಂ ಫಲಜನಕಶಕ್ತಿಜ್ಞಾಪ
ಕೋ ಭವತಿ; ತಥಾ ಹ್ರೀಂಕಾರಸ್ಯಾಪಿ ಸರ್ವಜನಕತಾಶಕ್ತ್ಯಾ
ಧಾಯಕತದಧಿಷ್ಠಾನಸಚ್ಚಿದಾನಂದಪರಬ್ರಹ್ಮಸ್ವರೂಪಾ ಸತೀ
ತನ್ಮಾತ್ರಪ್ರಾಪ್ತ್ಯಾ ಯಥೋಕ್ತಫಲಹೇತುತಯಾ ತದರ್ಥ

---

ಬಹುವಾಗಿ ಸನ್ಮಾನಿಸಿ ಸಾವಧಾನತೆಯಿಂದ ನೋಡಿಕೊಳ್ಳಬೇಕು. ಹಾಗೆ ಉಪಾಸನೆಯ ಸಮಯದಲ್ಲಿ ಪರಬ್ರಹ್ಮವಾಚಕವಾದ ಹ್ರೀಂಕಾರದಲ್ಲಿ ಪ್ರಯತ್ನ ಪುರ್ವಕವಾಗಿ ಏಕಾಗ್ರ ಚಿತ್ತದಿಂದ ದೇವತ್ವೈಕ್ಯಭಾವನೆಯನ್ನಿಟ್ಟು ಧ್ಯಾನಿಸಬೇಕು. ಈ ವಿಧವಾಗಿ ಪ್ರಯತ್ನಾಧಿಕ್ಯದಿಂದ ನಿಯಮವನ್ನು ಪ್ರದರ್ಶಿಸಲು ಹ್ರೀಂಕಾರವನ್ನು ಪುಷ್ಪದ ಹೋಲಿಕೆಯಿಂದ ವರ್ಣಿಸಿದೆ. ಪುಷ್ಪಗಳಲ್ಲಿ ಒಣಗಿದ ಪುಷ್ಪಗಳು ವಾಯುವಿನಿಂದ ನೀರಸವೂ ನಿರ್ಗಂಧವೂ ಆಗಿ ಫಲವನ್ನು ಹುಟ್ಟಿಸುವ ಶಕ್ತಿಯನ್ನು ಕಳೆದುಕೊಂಡು ನೆಲದಲ್ಲಿ ಬಿದ್ದು ನಾಶವಾಗುವುವು. ಸರಸ ಪುಷ್ಪಗಳು ಫಲಜನಕ ಶಕ್ತಿಯಿರುವುದರಿಂದ ಫಲದ ಉತ್ಪತ್ತಿಗೆ ಕಾರಣವಾಗುವುವು. ಇದು ಪ್ರತ್ಯಕ್ಷವಾಗಿ ಕಂಡಿದೆ. ಪುಷ್ಪದಲ್ಲಿರುವ ರಸವು ಪೃಥಿವೀ ಭೂತಕ್ಕೆ ಕಾರಣವಾದ ಜಲತನ್ಮಾತ್ರ ರೂಪವಾದ ಮಧುರರಸ ರೂಪವಾದುದು. ಆದ್ದರಿಂದ ಅದು ಫಲಜನಕ ಶಕ್ತಿಗೆ ಸೂಚಕವಾದುದು. ಅಂತಹ ಮಧುರಸದಂತೆ ದೇವಿಯು ಹ್ರೀಂಕಾರದಲ್ಲಿ ಸರ್ವ ಪುರುಷಾರ್ಥ ಫಲಜನಕತಾ ಶಕ್ತಿಯನ್ನು ಕೊಡುವಳಾದುದರಿಂದಲೂ, ಹ್ರೀಂಕಾರಾಧಿಷ್ಠಾನವಾದ ಸಚ್ಚಿದಾನಂದಾತ್ಮಕ ಪರಬ್ರಹ್ಮರೂಪದಿಂದ ಇರುವುದರಿಂದಲೂ, ಮಂತ್ರಪ್ರಾಪ್ತಿಯಿಂದ ಅಂತಹ ಅನಂತ ಫಲಗಳು ಲಭಿಸುವುದರಿಂದಲೂ, ಹ್ರೀಂಕಾರದಲ್ಲಿರುವಳು. ಆದುದರಿಂದ ದೇವಿಗೆ ಮಾಧ್ವೀಸಾಮ್ಯವು ಉಪಪನ್ನವಾಗುವುದೆಂದು ವಿವೇ

**ರೂಪೇಣ ತದ್ವ್ಯತ್ತಿರ್ಭವತೀತಿ ಮಾಧ್ವೀಸಮಾನಧರ್ಮವತ್ತ್ವಮಸ್ಯಾ ಉಪಪದ್ಯತ ಇತಿ ವಿವೇಚನೀಯಮಿತಿ ಯಾವತ್ ।**

**೨೦. ಓಂ ಹ್ರೀಂಕಾರತರುಮಂಜರ್ಯೈ ನಮಃ ।**

**ಹ್ರೀಂಕಾರತರುಮಂಜರೀ। ಫಲಾರ್ಥಿನಃ ಸ್ವಾರೂಢಾನ್ ಜನಾನ್ ಪತನಾದಿಭ್ಯಃ ಪ್ರತಿಬಂಧಕೇಭ್ಯಸ್ತಾರಯತಿ ಪಾರಂ ಪ್ರಾಪಯತಿ ಫಲಲಾಭೇನ ಸಂತೋಷಯತೀತಿ ತರುಃ । ಹ್ರೀಂಕಾರಸ್ಯ ಕಲ್ಪಾದಿತರುರ್ದೃಷ್ಟಾಂತೀಕೃತಃ । ಪ್ರೇಕ್ಷಾವತಾಂ ಸಂವಾದಿಪ್ರವೃತ್ತಿಜನಕತ್ವೇನ ಶಾಖೋಪಶಾಖಾಗ್ರಗತಾ ಪುಷ್ಪಮಂಜರೀ ಫಲಕಾರಣಯೋಗ್ಯತಾಂ ಜ್ಞಾಪಯತೀತಿ ಪುರುಷಾರ್ಥಾರ್ಥಿನಾಂ ಅಸಂಶಯಪ್ರವರ್ತಕತ್ವೇನ ಪ್ರತ್ಯಕ್ಸ್ವರೂಪಾ ಸತೀ ಗುರೂಪದಿಷ್ಟಮಂತ್ರದೇವತಾತ್ಮಕತಯಾ ಮಂತ್ರೋಪಾಸನಾಯಾಮಭಿಮುಖೀಕರಣೇನ ಪುರುಷಾರ್ಥಾನ್ ಪ್ರಾಪ**

---

ಚಿಸಿ ತಿಳಿದುಕೊಳ್ಳಬೇಕು. ಹ್ರೀಂಕಾರಃ ಸುಮನಾಂಸೀವ ತತ್ರ ಮಾಧ್ವೀವ ಎಂದು ವಿಗ್ರಹವು.

೨೦. ವೃಕ್ಷದಂತಿರುವ ಹ್ರೀಂಕಾರದಲ್ಲಿ ಪುಷ್ಪಮಂಜರಿಯಂತೆ ಇರುವವಳು, ಫಲಾರ್ಥಿಗಳಾಗಿ ಮರವನ್ನು ಏರಿದ ಜನರನ್ನು ಪತನಾದಿ ರೂಪವಾದ ಪ್ರತಿಬಂಧಕದಿಂದ ತಾರಣ ಮಾಡಿ ಪಾರವನ್ನು ಮುಟ್ಟಿಸುವುದರಿಂದಲೂ ಫಲಪ್ರದಾನದಿಂದ ಸಂತೋಷ ಪಡಿಸುವುದರಿಂದಲೂ ವೃಕ್ಷವನ್ನು ತರು ಎಂದು ಕರೆಯುವರು. ಅವುಗಳಲ್ಲಿ ಉತ್ತಮವಾದ ಕಲ್ಪ ವೃಕ್ಷವು ಹ್ರೀಂಕಾರಕ್ಕೆ ದೃಷ್ಟಾಂತವು, ಶಾಖೋಪ ಶಾಖೆಗಳಲ್ಲಿ ಬಿಟ್ಟಿರುವ ಪುಷ್ಪ ಮಂಜರಿಯು ಪ್ರೇಕ್ಷಕರಿಗೆ ಸಫಲ ಪ್ರವೃತ್ತಿಯನ್ನು ಹುಟ್ಟಿಸಿ ಫಲೋತ್ಪತ್ತಿ ಕಾರಣತಾ ಪ್ರತ್ಯಯವನ್ನು ಹುಟ್ಟಿಸುವುದು. ದೇವಿಯು ಪುರುಷಾರ್ಥವನ್ನು ಅಪೇಕ್ಷಿಸುವ ಭಕ್ತ ಜನರಿಗೆ ನಿಸ್ಸಂಶಯವಾಗಿ ಹ್ರೀಂಮಂತ್ರ ಜಪಾದಿಗಳಲ್ಲಿ ಪ್ರವೃತ್ತಿಯನ್ನು ಉಂಟುಮಾಡುವಳು. ಮತ್ತು ಪ್ರತ್ಯೇಕ ಸ್ವರೂಪಳೂ ಗುರೂಪದಿಷ್ಟ ಮಂತ್ರ ದೇವತಾತ್ಮಕಳೂ ಆಗಿ ಭಕ್ತರನ್ನು ಉಪಾಸನೆಯಲ್ಲಿ ಅಭಿಮುಖಮಾಡಿ

ಯತೀತಿ ಮಂಜರೀಸಾದೃಶ್ಯಂ ಪ್ರಾಪ್ತಂ ಪರದೇವತಯಾ ಇತಿ ವಿವೇಚನೀಯಮ್ ।

ಇತಿ ತ್ರಿಶತ್ಯಾಂ ವಿದ್ಯಾಯಾಂ ಏಕಾದಶಾಕ್ಷರನಾಮವ್ಯಾಖ್ಯಾಯಾಂ
ಹ್ರೀಂಕಾರವರ್ಣಪ್ರಕಾಶಃ ಏಕಾದಶಃ ।

---

ಪುರುಷಾರ್ಥಗಳನ್ನು ದೊರಕಿಸುವಳು. ಆದ್ದರಿಂದ ದೇವತೆಗೆ ಪುಷ್ಪಮಂಜರೀ ಸಾಮ್ಯವು ವರ್ಣಿಸಲ್ಪಟ್ಟಿರುವುದು. ಹ್ರೀಂಕಾರಃ ತರುರಿವ ತತ್ರ ಮಂಜರೀವ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ಏಕಾದಶ ಪ್ರಕಾಶವು ಸಮಾಪ್ತವು.



೪೩

ಸಕಾರಾಖ್ಯಾ ಸಮರಸಾ ಸಕಲಾಗಮಸಂಸ್ತುತಾ ।
ಸರ್ವವೇದಾಂತತಾತ್ಪರ್ಯಭೂಮಿಃ ಸದಸದಾಶ್ರಯಾ ॥

೧. ಓಂ ಸಕಾರಾಖ್ಯಾಯೈ ನಮಃ ।

ಸಕಾರಾಖ್ಯಾ । ಸಕಾರಯುಕ್ತಾ ಶ್ರೀವಿದ್ಯಾನಾಮಿಕಾ ಆಖ್ಯಾ ವಾಚಕಶಬ್ದಃ ಯಸ್ಯಾಃ ಸಾ ತಥಾ ।

೨. ಓಂ ಸಮರಸಾಯೈ ನಮಃ ।

ಸಮರಸಾ । ಸಮಃ ಏಕಃ ರಸಃ ಮಧುರಾದಿರಸವದ್ಗುಡಪಿಂಡಾದೌ ಏಕರೂಪೇಣ ಕಾರ್ಯೇ ವ್ಯವಸ್ಥಿತೇತ್ಯರ್ಥಃ । ಅಥವಾ ಸಂಸಾರದಶಾಯಾಂ ಸರ್ವಜ್ಞತ್ವಕಿಂಚಿಜ್ಜ್ಞತ್ವಾದಿ ವಿಶೇಷಣಭೇದೇನ ಭಿನ್ನರಸವತ್ ಭಿನ್ನಸ್ವಭಾವವತ್ ಪ್ರತೀಯಮಾನಯೋ ರೀಶ್ವರಜೀವಯೋರ್ವೇದಾಂತ ಶ್ರವಣಾದಿನಾ ಜನ್ಯಾಖಂಡಾಕಾರವೃತ್ತಿವ್ಯಾಪ್ತ್ಯಾ "ಅಹಂ ಬ್ರಹ್ಮಾಸ್ಮಿ"

---

೧. ಸಕಾರದಿಂದ ಕೂಡಿದ ಶ್ರೀ ವಿದ್ಯೆ ಎಂಬ ವಾಚಕ ಸಂಜ್ಞೆಯುಳ್ಳವಳು. ಸಕಾರಃ ಆಖ್ಯಾ ಯಸ್ಯಾಃ ಎಂದು ವಿಗ್ರಹವು.

೨. ಸಮವಾದ ರಸವುಳ್ಳವಳು. ಮಧುರಾದಿ ರಸವು ಗುಡಾದಿ ಘನ ವಸ್ತುಗಳಲ್ಲಿರುವಂತೆ ಸಕಲ ಕಾರ್ಯವಸ್ತುಗಳಲ್ಲಿ ಏಕ ರೂಪದಿಂದ ಇರುವವಳು ಎಂದು ತಾತ್ಪರ್ಯವು. ಅಥವಾ ಅಭಿನ್ನವಾದ ಬ್ರಹ್ಮ ಚೈತನ್ಯ ರೂಪವುಳ್ಳವಳು. ಸಂಸಾರದಶೆಯಲ್ಲಿ ಸರ್ವಜ್ಞತ್ವ–ಕಿಂಚಿಜ್ಜ್ಞತ್ವ ಮುಂತಾದ ನಾನಾ ವಿಶೇಷಣಗಳ ಭೇದದಿಂದ ಜೀವ-ಈಶ್ವರರು ಭಿನ್ನ ಸ್ವರೂಪದಿಂದ ತೋರುವರು. ವೇದಾಂತ ಮಹಾ ವಾಕ್ಯ ಶ್ರವಣ– ಮುಂತಾದ ಉಪಾಯಗಳಿಂದ ಹುಟ್ಟಿದ ಅಖಂಡಾಕಾರ ವೃತ್ತಿ ಸ್ಫುರಣದಿಂದ ಅಹಂ ಬ್ರಹ್ಮಾಸ್ಮಿ ಎಂದು ಅಭೇದಾನುಭವ ದಶೆ

ಇತ್ಯಭೇದಾನುಭವದಶಾಯಾಮೇಕರೂಪತಯಾ ಸಾಕ್ಷಾತ್ಕ್ರಿಯತೇ ಇತಿ ಸಾ ತಥೋಚ್ಯತೇ । "ರಸೋ ವೈ ಸಃ" ಇತಿ ಶ್ರುತೇಃ । ರಸಶಬ್ದಾರ್ಥಃ ಪರಬ್ರಹ್ಮ ಸಮಃ ಅಭಿನ್ನಂ ಯಸ್ಯಾಃ ಸಾ ತಥಾ । ತೈತ್ತಿರೀಯೋಪನಿಷತ್ಪ್ರಸಿದ್ಧೇತ್ಯರ್ಥಃ ।

೩. ಓಂ ಸಕಲಾಗಮಸಂಸ್ತುತಾಯೈ ನಮಃ ।

ಸಕಲಾಗಮಸಂಸ್ತುತಾ । ಆ ಸಮಂತಾತ್ ಗಮಯಂತೀತಿ ಆಗಮಾಃ, ಸಕಲಪದಾರ್ಥಗೋಚರಸವಿಕಲ್ಪಕಪ್ರಮಾಜನಕ ವೇದಾ ಇತ್ಯರ್ಥಃ । ಸಕಲೈರನ್ಯೂನಾನತಿರಿಕ್ತೇತಿಹಾಸಪುರಾಣಸಹಿತಯಾವದಂಗೋಪಾಂಗರಹಸ್ಯಾದಿಯೋಗಿತ್ವಂ ಸಕಲ ಶಬ್ದಾರ್ಥಃ । ತೈಃ ಸಂಸ್ತುತಾ ಸಮ್ಯಕ್ ನಾತಃ ಪರಂ ಕಿಂಚಿದಸ್ತೀತಿ ನಿಶ್ಚಯಪೂರ್ವಕಂ ಸ್ತುತಾ ಗುಣಿನಿಷ್ಠಗುಣಾಭಿಧಾನ

---

ಯಲ್ಲಿ ಏಕರೂಪವಾಗಿ ಸಾಕ್ಷಾತ್ಕರಿಸಲ್ಪಡುವವಳು. ಆದ್ದರಿಂದ ಸಮರಸಳೆಂದು ವರ್ಣಿಸಲ್ಪಟ್ಟಿರುವಳು. "ರಸೋ ವೈ ಸಃ" ಎಂಬ ಶ್ರುತಿಯನ್ನು ಅನುಸರಿಸಿ ರಸಶಬ್ದಕ್ಕೆ ಬ್ರಹ್ಮವಸ್ತುವು ಅರ್ಥವಾಗುವುದು. ಸಮಃ ರಸಃ ಯಸ್ಯಾಃ ಸಾ ಎಂದು ವಿಗ್ರಹವು.

೩. ಸಕಲ ಆಗಮಗಳಿಂದ ಸ್ತುತಿಸಲ್ಪಟ್ಟವಳು, ಸರ್ವಾರ್ಥಗಳನ್ನು ವ್ಯಾಪಿಸಿ ತಿಳಿಸುವುವು ಎಂಬ ಅಭಿಪ್ರಾಯದಿಂದ ವೇದಗಳು ಆಗಮವೆಂದು ಎನಿಸಿರುವುವು. ಅವು ಸಕಲ ಪದಾರ್ಥಗಳ ವಿಷಯದಲ್ಲಿ ಸವಿಕಲ್ಪಕ ಜ್ಞಾನವನ್ನು ಹುಟ್ಟಿಸುವುವು. ನ್ಯೂನಾತಿರೇಕವಿಲ್ಲದಂತೆ ಇತಿಹಾಸ-ಪುರಾಣ-ಅಂಗೋಪಾಂಗ ರಹಸ್ಯ ಮುಂತಾದ ಗ್ರಂಥಗಳ ಸಾಹಿತ್ಯದಿಂದ ಸಕಲಾಗಮಗಳೆಂದು ಸಕಲ ವಿಶೇಷಣದಿಂದ ಲಭ್ಯವಾಗುವ ಅರ್ಥವು. ಅಂತಹ ಸಕಲಾಗಮಗಳಿಂದ ಇದಕ್ಕಿಂತ ಹೆಚ್ಚಿನ ತತ್ವವಿಲ್ಲವೆಂದು ಚನ್ನಾಗಿ ನಿಶ್ಚಯ ಪೂರ್ವಕವಾಗಿ ಸ್ತುತಿಸಲ್ಪಡುವಳು. ಗುಣಶಾಲಿಯಾದ ವಸ್ತುವಿನಲ್ಲಿರುವ ಗುಣಗಳ ಪ್ರಶಂಸೆಯು ಸ್ತುತಿಯು. ಇಂತಹ ಆಗಮರಚಿತವಾದ ಸ್ತುತಿಗೆ ದೇವಿಯು ವಿಷಯಳಾಗುವುದ

**ವಿಷಯುತಯಾ ತದುಪಜೀವಕೇತ್ಯರ್ಥಃ । ಸರ್ವಾರ್ಥಪ್ರಕಾಶಕವೇದಾನಾಂ ಸರ್ವಜ್ಞತ್ವೇನೈದಂಪರ್ಯೇಣ ತದೀಯಸ್ತುತಿವಿಷಯುತಯಾ ಶುದ್ಧಚೈತನ್ಯಾತ್ಮಕತಯಾ ಮೋಕ್ಷಕಾರಣೀಭೂತಜ್ಞಾನಸ್ವರೂಪತ್ವೇನ ಜಿಜ್ಞಾಸ್ಯೇತಿ ಧ್ವನಿತೋಽರ್ಥಃ ।**

೪. ಓಂ ಸರ್ವವೇದಾಂತತಾತ್ಪರ್ಯಭೂಮಯೇ ನಮಃ ।

**ಸರ್ವವೇದಾಂತತಾತ್ಪರ್ಯಭೂಮಿಃ । ವೇದಾನಾಮಂತಃ ಅವಸಾನಂ ತತ್ತ್ವಮಸ್ಯಾದಿಮಹಾವಾಕ್ಯಾನಿ, ತೇಷಾಂ ತಾತ್ಪರ್ಯಂ ಸಮನ್ವಯಃ ಸಾಮಾನಾಧಿಕರಣ್ಯಮಿತ್ಯರ್ಥಃ । ತಸ್ಯ ಭೂಮಿಃ ವಿಷಯಃ ಜ್ಞಾಪ್ಯಮಿತಿ ಯಾವತ್ । 'ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ' ಇತಿ ವಚ**

---

ರಿಂದ ಆಗಮಗಳಿಗೆ ಉಪಜೀವಕಳಾಗುವಳು, ಸರ್ವಾರ್ಥಗಳನ್ನು ಪ್ರಕಾಶಪಡಿಸುವ ವೇದಗಳು ತಾತ್ಪರ್ಯದಿಂದ ಸರ್ವಜ್ಞತ್ವಾದಿಗುಣ ಪೂರ್ಣವಾಗಿ ಸ್ತುತಿ ವಿಷಯವಾಗುವ ಶುದ್ಧ ಚೈತನ್ಯ ಸ್ವರೂಪಳಾಗಿ ಮೋಕ್ಷಕ್ಕೆ ಕಾರಣವಾದ ತತ್ತ್ವಜ್ಞಾನ ರೂಪದಿಂದ ಜಿಜ್ಞಾಸ್ಯಳಾದವಳು ಎಂದು ಇದರಿಂದ ವ್ಯಂಗ್ಯವಾಗುವುದು. ಸಕಲಾಶ್ಚ ತೇ ಆಗಮಾಶ್ಚ, ತೈಃ ಸಂಸ್ತುತಾ ಎಂದು ವಿಗ್ರಹವು.

೪. ಸಮಸ್ತವೇದಾಂತ ಸಮನ್ವಯಕ್ಕೆ ವಿಷಯಳಾದವಳು. ವೇದಗಳ ಕಡೆಯಲ್ಲಿ ಬರುವ ಉಪನಿಷತ್ತುಗಳು ವೇದಾಂತಗಳು. ಅಲ್ಲಿರುವ "ತತ್ತ್ವಮಸಿ" ಮುಂತಾದ ಮಹಾವಾಕ್ಯಗಳ ಏಕಾರ್ಥಸಮನ್ವಯ ರೂಪವಾದ ತಾತ್ಪರ್ಯಕ್ಕೆ ದೇವಿಯು ವಿಷಯಳಾದವಳು. ಸರ್ವವೇದಾಂತಗಳು ಸಮನ್ವಯದೃಷ್ಟಿಯಿಂದ ದೇವಿಯನ್ನು ನಿರೂಪಿಸುತ್ತಿವೆ. ವೇದಾಂತವಾಕ್ಯಗಳ ತಾತ್ಪರ್ಯವನ್ನು ನಿರ್ಣಯಿಸಲು ಉಪಕ್ರಮ–ಉಪಸಂಹಾರ, ಅಭ್ಯಾಸ, ಅಪೂರ್ವತ್ವ, ಫಲ, ಅರ್ಥವಾದ ಮತ್ತು ಉಪಪತ್ತಿ ಎಂಬ ಆರು ಲಿಂಗಗಳು ಕಾರಣಗಳಾಗಿವೆ. ಇವು "ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವಾತಾ ಫಲಮ್ । ಅರ್ಥವಾದೋ

ನೋಕ್ತತಾತ್ಪರ್ಯನಿರ್ಣಾಯಕಪ್ರಮಾಣ ಬಲೇನಾತೀಂದ್ರಿಯ ಧರ್ಮಾದಿಗೋಚರವಾಕ್ಯವತ್ ಸರ್ವೇಷಾಂ ವೇದಾಂತಾನಾಮುಪಾಸನಾಜ್ಞಾನವಿಧಿಂ ವಿನಾ ಕರ್ಮಶೇಷತಯಾ ಅಜ್ಞಾತಜ್ಞಾಪಕತ್ವೇನ ಶಂಸನಾದೇವ ಶಾಸ್ತ್ರಶಬ್ದವಾಚ್ಯಾನಾಮದ್ವೈತೇ ಬ್ರಹ್ಮಣಿ ಗತಿಸಾಮಾನ್ಯೇನ ಕರ್ಮೋಪಾಸನಾಕಾಂಡದ್ವಯಾರ್ಥೋಪಕಾರ್ಯತ್ವೇನ ಮೋಕ್ಷಹೇತುಜ್ಞಾನಜನಕತ್ವೇನ ಪರ್ಯವಸಾನಮಿತಿ ತಾತ್ಪರ್ಯವಿಷಯತಾ ಅಖಂಡಚೈತನ್ಯಸ್ಯೇತಿ ಸಿದ್ಧಾಂತಾರ್ಥ ಇತ್ಯಭಿಸಂಧಿಃ। 'ಸಾಮಾನಾಧಿಕರಣ್ಯಂ ಚ ವಿಶೇಷಣವಿಶೇಷ್ಯತಾ। ಲಕ್ಷ್ಯಲಕ್ಷಣಭಾವಶ್ಚ ಪದಾರ್ಥಪ್ರತ್ಯಗಾತ್ಮನಾಮ್'' ಇತಿ ನ್ಯಾಯೇನ ಸಂಬಂಧತ್ರಯೇಣಾಖಂಡಾರ್ಥಂ ವೇದಾಂತಾಃ ಬೋಧಯಂತೀತಿ "ತತ್ತು ಸಮನ್ವಯಾತ್'' ಇತ್ಯಧಿಕರಣೇ ಪ್ರತಿಷ್ಠಾಪಿತಮಿತಿ ಅಲಮತಿವಿಸ್ತರೇಣ।

---

ಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ'' ಎಂಬ ವಚನದಲ್ಲಿ ಪಠಿತಗಳಾಗಿವೆ. ಧರ್ಮಾದಿಗಳನ್ನು ವಿಧಿಸುವ ಕರ್ಮಕಾಂಡ ವಾಕ್ಯಗಳು ಈ ಲಿಂಗಗಳ ಸಹಾಯುಗಮ್ಯವಾದ ತಾತ್ಪರ್ಯದಿಂದ ಸ್ವಾರ್ಥವನ್ನು ಬೋಧಿಸುವಂತೆ ವೇದಾಂತ ಪ್ರಮಾಣವು ಉಪಾಸನೆಯನ್ನು ವಿಧಿಸದೆ ಕರ್ಮಶೇಷವಲ್ಲದ ಅಜ್ಞಾತ ಆತ್ಮತತ್ತ್ವವನ್ನು ಬೋಧಿಸುವುದೆಂಬ ಶಂಸನದಿಂದ ಶಾಸ್ತ್ರ ವೆನಿಸಿರುವುದು. ಇಂತಹ ಶಾಸ್ತ್ರವು ಗತಿಸಾಮಾನ್ಯದಿಂದ ಅದ್ವೈತಬ್ರಹ್ಮತತ್ತ್ವದಲ್ಲಿ ಸಮನ್ವಯ ರೂಪವಾದ ತಾತ್ಪರ್ಯವನ್ನಿಟ್ಟು ಕರ್ಮ-ಉಪಾಸನಾ ಕಾಂಡಗಳಿಗೆ ಉಪಕಾರ್ಯವಾದ ಮತ್ತು ಮೋಕ್ಷ ಕಾರಣವಾದ ಜ್ಞಾನವನ್ನು ಉಂಟುಮಾಡಿ ಕೃತಕೃತ್ಯವಾಗುವುದು. ಆದುದರಿಂದ ಅಖಂಡಚೈತನ್ಯರೂಪಳಾದ ದೇವಿಯು ಸರ್ವವೇದಾಂತ ತಾತ್ಪರ್ಯ ವಿಷಯಳೆಂದು ತಾತ್ಪರ್ಯವು. ಸಾಮಾನಾಧಿಕರಣ್ಯಂಚ ವಿಶೇಷಣ ವಿಶೇಷ್ಯತಾ । ಲಕ್ಷ್ಯಲಕ್ಷಣಭಾವಶ್ಚ ಪದಾರ್ಥ ಪ್ರತ್ಯಗಾತ್ಮನಾಮ್, ಎಂಬ ವಚನೋಕ್ತ ನ್ಯಾಯದಿಂದ ಸರ್ವವೇದಾಂತಗಳು ಪದಾರ್ಥಗಳ ಸಾಮಾನಾಧಿಕರಣ್ಯ, ವಿಶೇಷ್ಯವಿಶೇಷಣಭಾವ, ಮತ್ತು ಲಕ್ಷ್ಯಲಕ್ಷಣಭಾವವೆಂಬ ಮೂರು ಸಂಬಂಧಗಳ ಮೂಲಕವಾಗಿ ಅಖಂಡಾರ್ಥವನ್ನು ಬೋಧಿಸುತ್ತಿವೆ. ಎಂಬುದು "ತತ್ತು ಸಮನ್ವಯಾತ್'' ಎಂಬ ವ್ಯಾಸಸೂತ್ರದಲ್ಲಿ ವಿವರಿಸಲ್ಪಟ್ಟಿದೆ. ಸರ್ವೇ ಚ ತೇ ವೇದಾಂತಾಶ್ಚ, ತೇಷಾಂ ತಾತ್ಪರ್ಯಸ್ಯ ಭೂಮಿಃ ಎಂದು ವಿಗ್ರಹವು.

## ೫. ಓಂ ಸದಸದಾಶ್ರಯಾಯೈ ನಮಃ ।

**ಸದಸದಾಶ್ರಯಾ । ಅಪರೋಕ್ಷತಯಾ ಸನ್ನಿತಿ ಪ್ರತೀತಿವಿಷಯತಯಾ ವ್ಯವಹ್ರಿಯಮಾಣಂ ಸತ್ಕಾರ್ಯಂ ರೂಪಾದಿಮತ್ತಯಾ ವ್ಯಾವಹಾರಿಕಸತ್ತಾಶ್ರಯಂ ಪೃಥಿವ್ಯಪ್ತೇಜೋಭೂತತ್ರಯಂ ಸದಿತ್ಯುಚ್ಯತೇ । ಅಸತ್ ಸದ್ಭಿನ್ನತಯಾ ಪರೋಕ್ಷಜ್ಞಾನಗೋಚರಂ ವಾಯ್ವಾಕಾಶಾದಿ ತತ್ಕಾರ್ಯಂ ಚ ರೂಪಾದಿಭಿನ್ನಗುಣಾಶ್ರಯಮುಚ್ಯತ ಇತ್ಯರ್ಥಃ । ತಯೋರಾಶ್ರಯಾ ಉಪಾದಾನತ್ವೇನ ತದಧಿಷ್ಠಾನಭೂತೇತ್ಯರ್ಥಃ। ಆರೋಪಿತಸ್ಯಾಧಿಷ್ಠಾನಸತ್ತಾತಿರಿಕ್ತಸತ್ತಾಶೂನ್ಯತಯಾ ಸತ್ತಾಸ್ಫೂರ್ತಿಪ್ರದತ್ವೇನ ಸರ್ವದಾ ತದನುಸ್ಯೂತೇತಿ ಧ್ಯೇಯಮ್ ।**

---

೫. ಸತ್ ಮತ್ತು ಅಸತ್ ವಸ್ತುಗಳಿಗೆ ಆಶ್ರಯಳು. ಸತ್ ಎಂಬ ಪ್ರತೀತಿಗೆ ವಿಷಯವಾಗಿ ಪ್ರತ್ಯಕ್ಷವೆಂದು ವ್ಯವಹರಿಸಲ್ಪಡುವುದೂ, ಕಾರ್ಯರೂಪವೂ, ರೂಪಾದಿಗುಣಗಳಿಗೆ ಆಧಾರವಾಗಿ ವ್ಯಾವಹಾರಿಕಸತ್ತಾಶ್ರಯವೂ ಆದ ಪೃಥವಿ ಜಲ ತೇಜೋರೂಪವಾದ ಭೂತತ್ರಯವು ಸತ್ ಎನ್ನಲ್ಪಡುವುದು. ಆದಕ್ಕೆ ಭಿನ್ನವೂ ಪರೋಕ್ಷ ಜ್ಞಾನಕ್ಕೆ ಗೋಚರವೂ ರೂಪಾದಿ ಭಿನ್ನ ಗುಣಗಳಿಗೆ ಆಧಾರವೆಂದು ವ್ಯವಹರಿಸಲ್ಪಡುವುದೂ ಆದ ವಾಯು, ಆಕಾಶಗಳೆಂಬ ಭೂತದ್ವಯವು ಅಸತ್ ಎಂದು ಕರೆಯಲ್ಪಡುವುದು. ದೇವಿಯು ಸತ್–ಅಸತ್ ವಸ್ತುಗಳಿಗೆ ಉಪಾದಾನಕಾರಣಳಾದ್ದರಿಂದ ಅಧಿಷ್ಠಾನ ರೂಪಳಾಗಿರುವಳು, ಆರೋಪಿತ ವಸ್ತುಗಳಿಗೆ ಅಧಿಷ್ಠಾನ ಸತ್ತಾತಿರಿಕ್ತವಾಗಿ ಸತ್ತಾಧರ್ಮವಿಲ್ಲದಿರುವುದರಿಂದ ಸತ್ತಾಸ್ಫೂರ್ತಿಪ್ರದಳಾಗಿ ಸರ್ವವಸ್ತುಗಳಲ್ಲಿ ಸರ್ವಕಾಲದಲ್ಲಿ ಅನುಸ್ಯೂತಳಾಗಿರುವಳೆಂದು ತಾತ್ಪರ್ಯವು. ಸಚ್ಚ ಅಸಚ್ಚ ಸದಸತೀ, ತಯೋಃ ಆಶ್ರಯಾ ಎಂದು ವಿಗ್ರಹವು.

೪೪

ಸಕಲಾ ಸಚ್ಚಿದಾನಂದಾ ಸಾಧ್ಯಾ ಸದ್ಗತಿದಾಯಿನೀ ।
ಸನಕಾದಿಮುನಿಧ್ಯೇಯಾ ಸದಾಶಿವಕುಟುಂಬಿನೀ ॥

೬. ಓಂ ಸಕಲಾಯೈ ನಮಃ ।

ಸಕಲಾ । ಆರೋಪಿತಕಲಾಭಿಃ ಉಪಾಸನಾರ್ಥಂ ಕಲ್ಪಿತಾಭಿಃ ಜಾಬಾಲಿನಾ ಸತ್ಯಕಾಮಂ ಪ್ರತ್ಯುಕ್ತಷೋಡಶಕಲಾಯುಕ್ತ ಪುರುಷೋಪಾಸನಪ್ರತಿಪಾದಕಛಾಂದೋಗ್ಯವಚನರೀತ್ಯಾ ಕಲಾಶಬ್ದಿತಾವಯವೈಃ ಸಹ ವರ್ತತ ಇತಿ ಸಾ ತಥಾ । ಚತುಃಷಷ್ಟಿಚಂದ್ರಕಲಾಭ್ಯಾಂ ವಾ ಸಹಿತಾ । ಅಥವಾ ಕಲಾಶಬ್ದಃ ಸುಖಾದಿಕಾಂತಿವಚನಃ ತಯಾ ಸಹಿತೇತಿ ವಾ ।

---

೬. ಕಲೆಗಳಿಂದ ಕೂಡಿರುವವಳು. ಜಾಬಾಲಿಯು ಸತ್ಯಕಾಮುನನ್ನು ಕುರಿತು ಉಪದೇಶಿಸಿದ ಷೋಡಶ ಕಲಾ ಯುಕ್ತಪುರುಷೋಪಾಸನವನ್ನು ಪ್ರತಿಪಾದಿಸುವ ಛಾಂದೋಗ್ಯ ಉಪನಿಷದ್ವಚನದ ರೀತಿಯಿಂದ ಕಲಾ ಶಬ್ದದಿಂದ ಪ್ರತಿಪಾದಿಸಲ್ಪಟ್ಟ ಉಪಾಸನೆಗೋಸ್ಕರ ಕಲ್ಪಿತವಾದ ಅವಯುವಗಳಿಂದ ದೇವಿಯು ಕೂಡಿರುವಳು, ಅಥವಾ ಚತುಷ್ಷಷ್ಟಿ ಕಲೆಗಳಿಂದ ಮತ್ತು ಚಂದ್ರನ ಕಲೆಯಿಂದ ಕೂಡಿರುವುದರಿಂದ ಸಕಲಾರೂಪಳು, ಅಥವಾ ಸುಖಾದಿ ಕಾಂತಿ ರೂಪವಾದ ಅರ್ಥವನ್ನು ಕಲಾ ಶಬ್ದವು ಬೋಧಿಸುವುದು. ಅದರಿಂದ ಕೂಡಿದವಳು ಎಂದು ತಾತ್ಪರ್ಯವು. ಕಲಾಭಿಃ ಕಲಯಾ ವಾ ಸಹಿತಾ ಸಕಲಾ ಎಂದು ವಿಗ್ರಹವು.

## ೭. ಓಂ ಸಚ್ಚಿದಾನಂದಾಯೈ ನಮಃ ।

ಸಚ್ಚಿದಾನಂದಾ । ಸಚ್ಚಾಸೌ ಚಿಚ್ಚ ಸಚ್ಚಿತ್ ಸಚ್ಚಿಚ್ಚಾಸಾವಾನಂದಶ್ಚ, ಕಾಲತ್ರಯಾಬಾಧ್ಯತ್ವಂ ಸತ್ತ್ವಂ, ಸ್ವೇತರಪ್ರಕಾಶಾಪ್ರಕಾಶ್ಯತ್ವಂ ಚಿತ್ತ್ವಂ,ಪರಮಪ್ರೇಮಾಸ್ಪದತ್ವಮಾನಂದತ್ವಂ, "ಸತ್ಯಂ ಜ್ಞಾನಮನಂತಮ್", "ವಿಜ್ಞಾನಮಾನಂದಮ್", "ಸದೇವ ಸೋಮ್ಯೇದಮಗ್ರ ಆಸೀತ್","ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ""ಆನಂದೋ ಬ್ರಹ್ಮೇತಿ ವ್ಯಜಾನಾತ್", "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ" ಇತ್ಯಾದಿ ಶ್ರುತಿಭ್ಯಃ । ತೇ ಸ್ವರೂಪಂ ಯಸ್ಯಾಃ ಸಾ ತಥೋಕ್ತಾ । ವೇದಾಂತಶಾಸ್ತ್ರೋಕ್ತಬ್ರಹ್ಮಸ್ವರೂಪಲಕ್ಷಣಲಕ್ಷಿತೇತ್ಯರ್ಥಃ ।

## ೮. ಓಂ ಸಾಧ್ಯಾಯೈ ನಮಃ ।

ಸಾಧ್ಯಾ । ಕರ್ಮೋಪಾಸನಾದಿಭಿಃ ಮಹಾವಾಕ್ಯಶ್ರವಣಜನ್ಯ

---

೭. ಸತ್– ಚಿತ್– ಆನಂದಗಳ ರೂಪವುಳ್ಳವಳು. ಕಾಲತ್ರಯದಲ್ಲಿ ಬಾಧವಿಲ್ಲದಿರುವುದು ಸತ್ತ್ವವು. ಸ್ವೇತರಪ್ರಕಾಶದಿಂದ ಪ್ರಕಾಶ್ಯವಾಗದೆ ಸ್ವಯಂ ಪ್ರಕಾಶರೂಪವು ಚಿತ್ತ್ವವು. ಪರಮ ಪ್ರೇಮಾಸ್ಪದತ್ವವು. ಆನಂದತ್ವವು. ಸಚ್ಚಿದಾನಂದಗಳು ಈ ರೂಪವಾದುವುಗಳೆಂದು "ಸತ್ಯಂ ಜ್ಞಾನಮನಂತಂ ಬ್ರಹ್ಮ, ವಿಜ್ಞಾನಮಾನಂದಂ ಬ್ರಹ್ಮ, ಸದೇವ ಸೋಮ್ಯೇದಮಗ್ರ ಆಸೀತ್, ಪ್ರಜ್ಞಾ ಪ್ರತಿಷ್ಠಾ, ಪ್ರಜ್ಞಾನಂ ಬ್ರಹ್ಮ, ಆನಂದೋ ಬ್ರಹ್ಮೇತಿ ವ್ಯಜಾನಾತ್, ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ" ಮುಂತಾದ ಅನೇಕ ಶ್ರುತಿವಚನಗಳಲ್ಲಿ ವಿವರಿಸಲಟ್ಟಿವೆ. ಅಂತಹ ಸ್ವರೂಪಗಳು ದೇವಿಯಲ್ಲಿರುವುದರಿಂದ ವೇದಾಂತಶಾಸ್ತ್ರದಲ್ಲಿ ಹೇಳಿದ ಸ್ವರೂಪಲಕ್ಷಣದಿಂದ ಕೂಡಿರುವಳು. ಸಚ್ಚಾಸೌ, ಚಿಚ್ಚ ಸಾ ಚ ಸಾ ಆನಂದಶ್ಚ ಎಂದು ವಿಗ್ರಹವು.

೮. ಸಾಧಿಸಲು ಅರ್ಹಳಾದವಳು. ಕರ್ಮ–ಉಪಾಸನೆಗಳ ಅನುಷ್ಠಾನದಿಂದ ಚಿತ್ತಶುದ್ಧಿಯುಳ್ಳವನೂ ಸಾಧನ ಚತುಷ್ಟಯ ಸಂಪತ್ತಿಯುಳ್ಳವನೂ ಆದ

ಬ್ರಹ್ಮವಿದ್ಯಾತ್ವೇನ ಸಾಧನಚತುಷ್ಟಯಸಂಪನ್ನಾಧಿಕಾರಿಣಾ ಅಪರೋಕ್ಷತಯಾ ಸಾಧಿತುಂ ಪ್ರಾಪ್ತುಮರ್ಹಾ, ಫಲಸ್ವರೂಪತ್ವಾದಿತ್ಯರ್ಥಃ। ಸಾಧ್ವೀತಿ ವಾ ಪಾಠೇ ಸಾಧೋಃ ಸ್ತ್ರೀ ಸತ್ತ್ವಗುಣಸಂಪನ್ನತ್ವಾತ್ಸಾಧುಃ । ಸಕಲವಿದ್ಯಾಪಾರಗತ್ವೇ ಸತಿ ಸದಾಚಾರಸಂಪನ್ನಃ ದೈವೀಸಂಪತ್ತಿಮಾನಿತ್ಯರ್ಥಃ। ತದೇಕನಿಷ್ಠಾ ಪರಮಪತಿವ್ರತಾ ಸತೀ ಸ್ತ್ರೀಣಾಂ ಪಾತಿವ್ರತ್ಯಸಂಪ್ರದಾಯಪ್ರವರ್ತಕೇತಿ ಯಾವತ್ ।

## ೯. ಓಂ ಸದ್ಗತಿದಾಯಿನ್ಯೈ ನಮಃ ।

ಸದ್ಗತಿದಾಯಿನೀ । ಸಮೀಚೀನಾ ಪುನರಾವೃತ್ತಿರಹಿತಾ ಸುಖಮಾತ್ರರೂಪಾ ಗತಿಃ, ಗಮ್ಯತೇ ಜ್ಞಾಯತೇ ಪ್ರಾಪ್ಯತ ಇತಿ ವಾ ಗತಿಃ । ಯತ್ ಜ್ಞಾಯತೇ ತದೇವ ಗತಿಃ, ತದನ್ಯಸ್ಯಾಜ್ಞಾತತ್ವಾತ್ ಗತಿತ್ವಾನುಪಪತ್ತೇಃ। ಜ್ಞಾತೇ ಫಲೇ ಇಚ್ಛಯಾ ತತ್ಸಾಧನೇಷು ಪುರುಷಃ ಪ್ರವರ್ತತೇ,ನತ್ವಜ್ಞಾತಫಲಸಾಧನೇ ಇತ್ಯನ್ವಯವ್ಯತಿರೇಕಾಭ್ಯಾಂ "ಬ್ರಹ್ಮವಿದಾಪ್ನೋತಿ ಪರಮ್,

---

ಅಧಿಕಾರಿಯಿಂದ ಮಹಾವಾಕ್ಯ ಶ್ರವಣದಿಂದ ಹುಟ್ಟಿದ ಬ್ರಹ್ಮವಿದ್ಯಾರೂಪವಾದ ಫಲಸ್ವರೂಪಳಾಗಿ ಪ್ರತ್ಯಕ್ಷವಾಗಿ ಸಾಧಿಸಲು ಅರ್ಹಳು ಎಂದು ತಾತ್ಪರ್ಯವು. ಸಾಧ್ವೀ ಎಂಬ ಪಾಠಾಂತರದಲ್ಲಿ ಸಾಧುವಿನ ಸ್ತ್ರೀ ಎಂದು ಅರ್ಥವು. ಸಕಲವಿದ್ಯಾಪಾರಂಗತನೂ ಸದಾಚಾರಸಂಪನ್ನನೂ ದೈವೀಸಂಪತ್ತಿಯುಳ್ಳವನೂ ಮತ್ತು ಸತ್ತ್ವಗುಣ ಸಂಪನ್ನನೂ ಸಾಧುವು, ಅಂತಹ ಸಾಧುವಿನಲ್ಲಿ ಪರಮ ಪತಿವ್ರತಾ ರೂಪದಿಂದ ಇದ್ದು ಸ್ತ್ರೀಯರ ಪಾತಿವ್ರತ್ಯ ವ್ರತ ಸಂಪ್ರದಾಯಕ್ಕೆ ಪ್ರವರ್ತಕಳಾಗುವಳು. ಸಾಧಿತುಂ ಯೋಗ್ಯಾ ಸಾಧ್ಯಾ ಎಂದು ವಿಗ್ರಹವು.

೯. ಸದ್ಗತಿಯನ್ನು ಕೊಡುವವಳು. ಗಮ್ಯತೇ, ಜ್ಞಾಯತೇ ಪ್ರಾಪ್ಯತೇ ಎಂಬ ವ್ಯುತ್ಪತ್ತಿಯಿಂದ ಗತಿಶಬ್ದವು ಪುನರಾವೃತ್ತಿರಹಿತವಾದ ಸುಖಮಾತ್ರರೂಪವಾದ ಗತಿಯನ್ನು ಬೋಧಿಸುವುದು. ಅಜ್ಞಾತವಾದ ಸುಖಾದಿಗಳು ಗತಿಯಾಗಲಾರದಾದುದರಿಂದ ಜ್ಞಾನಾಸ್ಪದವು ಗತಿ ಶಬ್ದಾರ್ಥವಾಗುವುದು. ಪರ

ಬ್ರಹ್ಮ ವೇದ ಬ್ರಹ್ಮೈವ ಭವತಿ, ಯೋ ಪೂರ್ವಂ ದೇವಾ ಋಷಯಶ್ಚ ತದ್ವಿದುಃ ತೇ ತನ್ಮಯಾ ಅಮೃತಾ ವೈ ಬಭೂವುಃ" ಇತ್ಯಾದಿ ಶ್ರುತ್ಯಾ ಚ ಪರದೇವತಾಸ್ವರೂಪಮೇವ ಮುಕ್ತಿ ಸ್ವರೂಪತಯಾ ಸದ್ಗತಿಃ । ತದಾವಾರಕಾಜ್ಞಾನಾಭಿಭವೇನ ಸ್ವರೂಪಾನಂದಮಭಿವ್ಯಂಜಯತೀತಿ ದಾಯಿನೀ। ಅಭೇದೇಽಪಿ ಗತಿದಾನಯೋಃ ಕರ್ಮಕರ್ತೃಪ್ರಯೋಗಃ ಉಪಪದ್ಯತೇ "ತದಾತ್ಮಾನಂ ಸ್ವಯಮಕುರುತ" ಇತ್ಯಾದಿವದಿತ್ಯರ್ಥಃ । ಸತೀಂ ವಾ ಸತ್ತ್ವಗುಣಯುಕ್ತಾಂ ದೇವಯಾನಾದಿಗತಿಂ ವಾ ದದಾತೀತಿ ಸಾ ತಥಾ ।

## ೧೦. ಓಂ ಸನಕಾದಿಮುನಿಧ್ಯೇಯಾಯೈ ನಮಃ ।

ಸನಕಾದಿಮುನಿಧ್ಯೇಯಾ । ಮನನಶೀಲಾಃ ಮುನಯಃ,

---

ದೇವತಾ ಸ್ವರೂಪವು ಮುಕ್ತಿರೂಪವಾದ್ದರಿಂದ ಸದ್ಗತಿಯು. ಅಂತಹ ಜ್ಞಾತ ಫಲದ ಅರ್ಥಿಯು ಸಾಧನಗಳಲ್ಲಿ ಇಚ್ಛಾಪೂರ್ವಕವಾಗಿ ಪ್ರವರ್ತಿಸುವನು. ಫಲವು ಅಜ್ಞಾತವಾದಲ್ಲಿ ಪ್ರವರ್ತಿಸುವುದಿಲ್ಲ. ಪರದೇವತಾಸ್ವರೂಪವು ಸದ್ಗತಿರೂಪವಾದ ಫಲವಾಗಿ ಜ್ಞಾತವಾಗಿರುವುದು. "ಬ್ರಹ್ಮವಿದಾಪ್ನೋತಿ ಪರಮ್, ಬ್ರಹ್ಮವೇದ ಬ್ರಹ್ಮೈವ ಭವತಿ, ಯೋ ಪೂರ್ವಂ ದೇವಾ ಋಷಯಶ್ಚ ತದ್ವಿದುಃ ತೇ ತನ್ಮಯಾ ಅಮೃತಾ ವೈ ಬಭೂವುಃ" ಮುಂತಾದ ಶ್ರುತಿಗಳು ಇದನ್ನು ಬೋಧಿಸುತ್ತವೆ ಆನಂದವನ್ನು ಆವರಣಮಾಡಿದ ಅಜ್ಞಾನವನ್ನು ನಾಶಮಾಡಿ ಸ್ವರೂಪಾನಂದ ರೂಪವಾದ ಸದ್ಗತಿಯನ್ನು ಪ್ರಕಾಶಪಡಿಸುವುದರಿಂದ ಸದ್ಗತಿದಾಯಕಳಾಗುವಳು. ಗತಿ-ದಾನಗಳು ಅಭಿನ್ನ ತತ್ತ್ವಗಳಾದರೂ ಔಪಚಾರಿಕವಾಗಿ ಕರ್ತೃಕರ್ಮರೂಪ ದಿಂದ ನಿರ್ದೇಶವು ಉಚಿತವು. 'ತದಾತ್ಮಾನಂ ಸ್ವಯಮಕುರುತ' ಮುಂತಾದ ಶ್ರುತಿ ಯಲ್ಲಿ ಈ ವಿಧವಾದ ನಿರ್ದೇಶವು ಕಂಡಿರುವುದು. ಸಾಧುವಾದ, ಸತ್ತ್ವ ಗುಣ ದಿಂದ ಕೂಡಿದ ಸದ್ಗತಿಯನ್ನು ಅಥವಾ ದೇವಯಾನಾದಿಗತಿಯನ್ನು ಕೊಡುವು ದರಿಂದ ಸದ್ಗತಿದಾಯಿನಿಯೆಂದು ಹೇಳಬಹುದು. ಸತೀ ಚ ಸಾ ಗತಿಶ್ಚ, ತಾಂ ದದಾತೀತಿ ಎಂದು ವಿಗ್ರಹವು.

೧೦. ಸನಕ ಮುಂತಾದ ಮುನಿಗಳಿಂದ ಧ್ಯಾನಿಸಲು ಅರ್ಹಳಾದವಳು.

ಮನನಶಬ್ದೇನ ಲಕ್ಷಣಯಾ ತತ್ಸಾಕ್ಷಾತ್ಕಾರವಂತ ಇತ್ಯರ್ಥಃ, ಬ್ರಹ್ಮಣಃ ಮಾನಸಿಕಪುತ್ರಾಃ ಜ್ಞಾನವೈರಾಗ್ಯಾದಿಬಹುಲಾಃ ಮೋಕ್ಷಮಾರ್ಗಪ್ರವರ್ತಕಾಃ, ಸನಕಃ ಆದಿಃ ಯೇಷಾಂ ತೇ ಮುನಯಃ ಸನಂದನಸನಾತನ ಸನತ್ಕುಮಾರ ಪ್ರಮುಖಾಃ ನಿರ್ರೈಷಣಾಃ ನಿಶ್ಚಿಂತಾಃ; ತೈರ್ಧ್ಯೇಯಾ ಅತ್ಯಾದರೇಣ ಸ್ವಾತ್ಮಾಭೇದ ಜ್ಞಾನೇನ ಸರ್ವದಾ ವಿಷಯೀಕೃತೇತ್ಯರ್ಥಃ, "ತ್ವಂ ವಾ ಅಹಮಸ್ಮಿ ಭಗವೋ ದೇವತೇ ಅಹಂ ವೈ ತ್ವಮಸಿ,ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ, ಆತ್ಮಾನಂ ಚೇದ್ವಿಜಾನೀಯಾದಹಮಸ್ಮೀತಿ ಪೂರುಷಃ, ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮಿ ಇತಿ ನ ಸ ವೇದ ಯಥಾ ಪಶುಃ, ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" ಇತ್ಯಾದಿ ಶ್ರುತಿಸ್ಮೃತಿಶತೇಭ್ಯಃ।

---

ಲಕ್ಷಣಾ ವೃತ್ತಿಯಿಂದ ಸಾಕ್ಷಾತ್ಕಾರರೂಪವೆಂಬ ಮನನಶೀಲರಾದವರು ಮುನಿಗಳು. ಸನಕ–ಸನಂದನ–ಸನಾತನ–ಸನತ್ಕುಮಾರ ಮುಂತಾದ ಏಷಣಾ ರಹಿತರೂ ನಿಶ್ಚಿಂತರೂ, ಆದ ಮುನಿಗಳು ಜ್ಞಾನ–ವೈರಾಗ್ಯಾದಿಗುಣಗಳಿಂದ ಭೂಷಿತರಾಗಿ ಮೋಕ್ಷಮಾರ್ಗಪ್ರವರ್ತಕರಾದ ಬ್ರಹ್ಮನ ಮಾನಸ ಪುತ್ರರಾಗಿರುವರು. ಅವರಿಂದ ದೇವಿಯು ಆದರದಿಂದ ಆತ್ಮಾಭೇದಾನುಸಂಧಾನದಿಂದ ಸರ್ವಕಾಲದಲ್ಲಿಯೂ ಧ್ಯಾನಿಸಲ್ಪಟ್ಟವಳು. "ತ್ವಂ ವಾ ಅಹಮಸ್ಮಿ ಭಗವೋ ದೇವತೇ ಅಹಂ ವೈ ತ್ವಮಸಿ, ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ, ಆತ್ಮಾನಂ ಚೇದ್ವಿಜಾನೀಯಾದಹಮಸ್ಮೀತಿ ಪೂರುಷಃ, ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ, ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" ಮುಂತಾದ ನೂರಾರು ಶ್ರುತಿ–ಸ್ಮೃತಿ ವಚನಗಳಿಂದ ಸ್ವಾತ್ಮಾಭೇದಾನುಸಂಧಾನವು ವಿಹಿತವಾಗಿದೆ. ಸನಕಃ ಆದಿಃ ಯೇಷಾಂ ತೇ ತೈಃ ಧ್ಯಾತುಂ ಯೋಗ್ಯಾ ಎಂದು ವಿಗ್ರಹವು.

## ೧೧. ಓಂ ಸದಾಶಿವಕುಟುಂಬಿನ್ಯೈ ನಮಃ ।

**ಸದಾಶಿವಕುಟುಂಬಿನೀ । ಸದಾಶಿವಃ ಕುಟುಂಬಂ ಅಸ್ಯಾ ಅಸ್ತೀತಿ ತಥಾ ।**

---

೧೧. ಸದಾಶಿವನು ಕುಟುಂಬ ರೂಪನಾಗಿರುವವಳು. ದೇವಿಯ ಪೋಷ್ಯ ರೂಪವಾದ ಕುಟುಂಬಕ್ಕೆ ಸದಾಶಿವನು ಸೇರಿರುವನು. ಸದಾಶಿವಃ ಕುಟುಂಬಂ ಅಸ್ಯಾ ಅಸ್ತೀತಿ ಎಂದು ವಿಗ್ರಹವು.



## ೪೫

ಸಕಲಾಧಿಷ್ಠಾನರೂಪಾ ಸತ್ಯರೂಪಾ ಸಮಾಕೃತಿಃ ।
ಸರ್ವಪ್ರಪಂಚನಿರ್ಮಾತ್ರೀ ಸಮಾನಾಧಿಕವರ್ಜಿತಾ ॥

### ೧೨. ಓಂ ಸಕಲಾಧಿಷ್ಠಾನರೂಪಾಯೈ ನಮಃ

ಸಕಲಾಧಿಷ್ಠಾನರೂಪಾ । "ಅಥಾತ ಆದೇಶೋ ನೇತಿ ನೇತಿ, ನೇಹ ನಾನಾಸ್ತಿ ಕಿಂಚನ" ಇತ್ಯಾದಿ ನಿಷೇಧಶ್ರುತಿಭ್ಯಃ ಪ್ರತಿಪನ್ನಾ । ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಬಾಧಾಯಾಂ ಸಾಮಾನಾಧಿಕರಣ್ಯಂ ಅವಗಮ್ಯತೇ । ಕಾರ್ಯಸ್ಯ ಕಾರಣಾಭೇದಜ್ಞಾನಂ ಬಾಧಾ । ತದ್ಭಿನ್ನತಾಜ್ಞಾನಸ್ಯ ಭ್ರಮರೂಪತ್ವಾತ್ । ತಥಾ ಚ ಶ್ರುತಿನಿಷೇಧಸ್ಯಾವಧ್ಯಪೇಕ್ಷಾಯಾಂ ಪ್ರಕೃತ್ಯಾದೀನಾಮಪಿ ತತ್ತ್ವಜ್ಞಾನೇನ ನಿವೃತ್ತೌ ಭೂತಪೂರ್ವಗತ್ಯಾ ಸರ್ವಾಧಿಷ್ಠಾನತ್ವೇನ ಅನುಭೂಯತ ಇತಿ ಭಾವಃ।

---

೧೨. ಸಕಲ ವಸ್ತುಗಳ ನಿಷೇಧಕ್ಕೆ ಅಧಿಷ್ಠಾನ ರೂಪಳಾಗಿರುವವಳು "ಸರ್ವಂ ಖಲ್ವಿದಂ ಬ್ರಹ್ಮ" ಮುಂತಾದ ಶ್ರುತಿವಚನದಲ್ಲಿ ಬ್ರಹ್ಮ-ಜಗತ್ತುಗಳ ಸಾಮಾನಾಧಿಕರಣ್ಯವು ಬಾಧಾರ್ಥದಲ್ಲಿ ಬಂದಿದೆ. ಕಾರಣಕ್ಕೆ ಅತಿರಿಕ್ತ ರೂಪದಿಂದ ಕಾರ್ಯವು ಇಲ್ಲವೆಂದು ಅರಿಯುವುದು ಬಾಧಾರೂಪವು. ಕಾರ್ಯ ಕಾರಣಗಳನ್ನು ಸ್ವತಂತ್ರ ಭಿನ್ನರೂಪಗಳೆಂದು ತಿಳಿಯುವ ಅಜ್ಞಾನವು ಭ್ರಮ ರೂಪವಾದದ್ದು. ಪ್ರಕೃತಿ ಮುಂತಾದ ತತ್ತ್ವಗಳು ತತ್ತ್ವಜ್ಞಾನದಿಂದ ನಿವೃತ್ತಿಯಾಗುವುವು. ಆದ್ದರಿಂದ "ಅಥಾತ ಆದೇಶೋ ನೇತಿ ನೇತಿ, ನೇಹ ನಾನಾಸ್ತಿ ಕಿಂಚನ" ಮುಂತಾದ ಶ್ರುತಿ ವಚನದಲ್ಲಿ ಬೋಧಿಸುವ ನಿಷೇಧಕ್ಕೆ ಅವಧಿಯ ಅಪೇಕ್ಷೆಯಿರುವುದರಿಂದ ದೇವಿಯು ಸರ್ವನಿಷೇಧಾಧಿಷ್ಠಾನಳಾಗಿ ಬೋಧಿಸಲ್ಪಡುವಳು. ಸಕಲಾನಾಂ ಅಧಿಷ್ಠಾನಂ ರೂಪಂ ಯಸ್ಯಾಃ ಎಂದು ವಿಗ್ರಹವು.

## ೧೩. ಓಂ ಸತ್ಯರೂಪಾಯೈ ನಮಃ ।

ಸತ್ಯರೂಪಾ । ಸತ್ಯಂ ಜಡಾನೃತಪರಿಚ್ಛಿನ್ನವ್ಯಾವೃತ್ತತ್ವಂ ಸಚ್ಚಿದಾನಂದರೂಪಂ ಯಸ್ಯಾಃ ಸಾ ತಥಾ । ಪರಿಣಾಮವಾದಮಾಶ್ರಿತ್ಯ ಸತ್ ಅಪರೋಕ್ಷಜ್ಞಾನಯೋಗ್ಯಾನಿ ಪೃಥಿವ್ಯಪ್ತೇಜಾಂಸಿ, ತ್ಯತ್ತು ಪರೋಕ್ಷಜ್ಞಾನವಿಷಯಾಃ ನಿತ್ಯಾನುಮೇಯಾ ಇತ್ಯರ್ಥಃ । "ಸಚ್ಚ ತ್ಯಚ್ಚಾಭವತ್" ಇತಿ ಶ್ರುತೇಃ । ಸತ್ಯಂ ರೂಪಂ ಯಸ್ಯಾಸ್ಸಾ ತಥಾ ।

## ೧೪. ಓಂ ಸಮಾಕೃತಯೇ ನಮಃ ।

ಸಮಾಕೃತಿಃ । ಸಮಾ ಅಭಿನ್ನಾ ಸಚ್ಚಿದಾನಂದರೂಪೈಕರಸಾ ಆಕೃತಿಃ ಮೂರ್ತಿಃ ಸ್ವರೂಪಂ ಯಸ್ಯಾಃ ಸಾ ತಥೋಕ್ತಾ । ಸಮಾ ಅನ್ಯೂನಾನತಿರಿಕ್ತಾ ಯಥಾಶಾಸ್ತ್ರಪ್ರಮಾಣಂ ಮೂರ್ತಿರ್ವಿಗ್ರಹೋ ಯಸ್ಯಾಃ ಸಾ ಇತಿ ವಾ । ಸಮಾ ಸದಾಶಿವೇನ

---

೧೩. ಸತ್ಯವಾದ ರೂಪವುಳ್ಳವಳು. ಸತ್ಯವೆಂದರೆ ಜಡ–ಅನೃತ–ಪರಿಚ್ಛಿನ್ನ ವಸ್ತುಗಳಿಂದ ವ್ಯಾವೃತ್ತವಾದ ಸಚ್ಚಿದಾನಂದ ರೂಪವೆಂದು ಅರ್ಥವು. ಅಥವಾ ಪರಿಣಾಮ್ಮ ವಾದ ಪ್ರಕ್ರಿಯೆಯಲ್ಲಿ ಪ್ರತ್ಯಕ್ಷಜ್ಞಾನಕ್ಕೆ ಯೋಗ್ಯವಾದ ಪೃಥಿವ್ಯಾದಿ ಭೂತತ್ರಯವು ಸತ್ ಎಂದು ಕರೆಯಲ್ಪಡುವುದು. ಹಾಗೆ ಪರೋಕ್ಷ ಜ್ಞಾನ ವಿಷಯವಾದ ಮತ್ತು ನಿತ್ಯಾನುಮೇಯವಾದ ವಾಯು-ಆಕಾಶ ಭೂತಗಳು ತ್ಯತ್ ಎಂದು ಕರೆಯಲ್ಪಡುವುವು. "ಸಚ್ಚ ತ್ಯಚ್ಚಾಭವತ್" ಎಂಬ ಶ್ರುತಿಯಲ್ಲಿ ಆ ರೀತಿಯಲ್ಲಿ ವ್ಯವಹಾರವು ಕಂಡಿದೆ. ಅಂತಹ ಸತ್–ತ್ಯತ್ ಆತ್ಮಕವಾದ ರೂಪವುಳ್ಳವಳು. ಸತ್ಯಂ ರೂಪಂ ಯಸ್ಯಾಃ ಅಥವಾ ಸತ್ ತ್ಯತ್ ರೂಪಂ ಯಸ್ಯಾಃ ಎಂದು ವಿಗ್ರಹವು.

೧೪. ಸಮವಾದ ಆಕೃತಿಯುಳ್ಳವಳು. ಸಚ್ಚಿದಾನಂದ ರೂಪದಿಂದ ಏಕರಸವಾದ ಅಭಿನ್ನಮೂರ್ತಿಯು ದೇವಿಯಲ್ಲಿರುವುದು. ಅಥವಾ ದೇವಿಯ ಮೂರ್ತಿಯು ಶಾಸ್ತ್ರಪ್ರಾಮಾಣ್ಯವನ್ನು ಅನುಸರಿಸಿ ಅನ್ಯೂನಾನತಿರಿಕ್ತವಾಗಿ ಸಮವಾಗಿರುವುದು. ಅಥವಾ ಗುಣ–ಸೌಂದರ್ಯ–ಬಲ–ವೀರ್ಯ–ಯಶಸ್ಸು–

ಗುಣಸೌಂದರ್ಯಬಲವೀರ್ಯಯಶೋಗಾಂಭೀರ್ಯಧೈರ್ಯೇಂಗಿತಾದಿ ಪರಿಜ್ಞಾನ ಸರ್ವಜ್ಞತ್ವಾದಿ ಬಹುಲಧರ್ಮವಿಶೇಷೈಃ ಮೂರ್ತಿರ್ಯಸ್ಯಾಃ ಸಾ ಇತಿ ವಾ । ಚತುರ್ವಿಧಭೂತಗ್ರಾಮೇಷು ತತ್ತತ್ಪ್ರಾರಬ್ಧಾನುಸಾರೇಣ ಸಮಾ ತತ್ರ ತತ್ರ ನಿವಾಸಯೋಗ್ಯಾ ಮೂರ್ತಿರ್ಯಸ್ಯಾಃ ಸಾ ಇತಿ ವಾ । ಕರ್ಮಾಧ್ಯಕ್ಷತಯಾ ತತ್ತತ್ಫಲವಿಶೇಷದಾನೇಷು ಸಮಾ ಪಕ್ಷಪಾತರಹಿತಾ ಮೂರ್ತಿರ್ಯಸ್ಯಾಃ ಸಾ । ಸಮಾ ಬಾಲ್ಯಸ್ಥವಿರತ್ವಾದಿಭಾವವಿಕಾರವರ್ಜಿತಾ ಏಕಪ್ರಕಾರಾ ನಿತ್ಯಯೌವನಶಾಲಿನೀ ಮೂರ್ತಿರ್ಯಸ್ಯಾಃ ಸಾ । "ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್, ಅಂಗುಷ್ಠಮಾತ್ರಃ ಪುರುಷೋಽನ್ತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ಇತಿ ಶ್ರುತಿಸ್ಮೃತಿಭ್ಯಾಮೇಕರೂಪತ್ವಾವಗಮಾದಿತ್ಯಾಶಯಃ।

---

ಗಾಂಭೀರ್ಯ–ಧೈರ್ಯ–ಇಂಗಿತಾದಿಪರಿಜ್ಞಾನ–ಸರ್ವಜ್ಞತ್ವಾದಿ ಅನೇಕ ಧರ್ಮಗಳಿಂದ ಸದಾಶಿವನಿಗೆ ಸಮಾನವಾಗಿರುವುದು. ಅಥವಾ ಚತುರ್ವಿಧ ಭೂತಸಮೂಹದಲ್ಲಿ ಆಯಾಯ ಪ್ರಾಣಿಯ ಪ್ರಾರಬ್ಧಕರ್ಮಾನುಸಾರವಾಗಿ ಅಲ್ಲಲ್ಲಿ ವಾಸಿಸಲು ಯೋಗ್ಯವಾಗಿರುವುದು. ಅಥವಾ ಪ್ರಾಣಿಗಳ ಸುಕೃತ–ದುಷ್ಕೃತ ಕರ್ಮಗಳ ಫಲದಾನದಲ್ಲಿ ಕರ್ಮಾಧ್ಯಕ್ಷತೆಯಿಂದಲೂ ಪಕ್ಷಪಾತರಾಹಿತ್ಯದಿಂದಲೂ ಸಮವಾಗಿರುವುದು. ಅಥವಾ ಬಾಲ್ಯ–ವಾರ್ಧಕ್ಯ ಮುಂತಾದ ಭಾವವಿಕಾರಗಳಿಲ್ಲದೆ ಏಕಪ್ರಕಾರವಾದ ನಿತ್ಯ ಯೌವನ ಶಾಲಿಯಾಗಿ ಸಮವಾಗಿರುವುದು. ಮೇಲ್ಕಂಡ ವಿವಿಧಾರ್ಥಗಳನ್ನು "ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್, ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ" ಎಂಬ ಸ್ಮೃತಿ ಶ್ರುತಿವಚನಗಳು ವಿವರಿಸುತ್ತಿವೆ. ಸಮಾ– ಆಕೃತಿಃ ಯಸ್ಯಾಃ ಎಂದು ವಿಗ್ರಹವು.

## ೧೫. ಓಂ ಸರ್ವಪ್ರಪಂಚನಿರ್ಮಾತ್ರ್ಯೈ ನಮಃ ।

ಸರ್ವಪ್ರಪಂಚನಿರ್ಮಾತ್ರೀ । ಸಂಸಾರಸ್ಯಾನಾದಿತಯಾ ಮೋಕ್ಷಸ್ಥಾಯಿತ್ವೇನ ಚ ಭೂತಭವಿಷ್ಯದ್ವರ್ತಮಾನಗತ್ಯಾ ಸರ್ವಶಬ್ದವಾಚ್ಯತ್ವಂ ಪ್ರಪಂಚಸ್ಯ; ಪ್ರಪಂಚ್ಯತೇ ವಿಸ್ತಾರ್ಯತೇ ವಿವರ್ತತ ಇತಿ ಪ್ರಪಂಚಃ, "ಏಕಂ ಬೀಜಂ ಬಹುಧಾ ಯಃ ಕರೋತಿ" ಇತಿ ಶ್ರುತೇಃ । ತಸ್ಯ ನಿರ್ಮಾತ್ರೀ ನಿರ್ಮಾಣಮಭಿವ್ಯಕ್ತಿಃ ತನ್ನಿಮಿತ್ತತಯಾ ತತ್ತತ್ಕರ್ತೃತ್ವಮುಪಚರ್ಯತೇ, ದೇವದತ್ತಃ ಪಚತೀತಿವತ್ ।

## ೧೬. ಓಂ ಸಮಾನಾಧಿಕವರ್ಜಿತಾಯೈ ನಮಃ ।

ಸಮಾನಾಧಿಕವರ್ಜಿತಾ । ಕುಲಶೀಲಜಾತಿಗುಣಾದಿಭಿಃ ತುಲ್ಯಃ ಸಮಾನಃ, ತೈಃ ಶ್ರೇಯಾನಧಿಕಃ, ತೈರ್ವರ್ಜಿತಾ । "ನ ತಸ್ಯ

---

೧೫. ಸರ್ವಪ್ರಪಂಚವನ್ನು ನಿರ್ಮಿಸಿದವಳು. ಸಂಸಾರವು ಅನಾದಿಯಾದುದರಿಂದಲೂ ಭೂತ–ಭವಿಷ್ಯತ್–ವರ್ತಮಾನವೆಂಬ ಕಾಲತ್ರಯದಲ್ಲಿರುವುದರಿಂದಲೂ ಮೋಕ್ಷಕಾಲದಲ್ಲಿಯೂ ಇತರ ದೃಷ್ಟಿಯಿಂದ ಇರುವುದರಿಂದಲೂ ಅದನ್ನು ಸರ್ವಪ್ರಪಂಚವೆಂದು ಹೇಳಿದೆ. ಪ್ರಪಂಚ ಶಬ್ದಕ್ಕೆ ಪ್ರಪಂಚ್ಯತೇ ವಿಸ್ತಾರ್ಯತೇ ಎಂದು ವ್ಯುತ್ಪತ್ತಿಯಿಂದ ವಿಸ್ತಾರವಾದ ವಸ್ತು ಜಾಲವು ಎಂದು ಅರ್ಥವು ಲಭಿಸುವುದು. "ಏಕಂ ಬೀಜಂ ಬಹುಧಾ ಯಃ ಕರೋತಿ" ಎಂದು ಏಕಬೀಜಕ್ಕೆ ಬಹುಭಾವವು ವರ್ಣಿಸಲ್ಪಟ್ಟಿದೆ. ನಿರ್ಮಾಣವೆಂದರೆ ಅಭಿವ್ಯಕ್ತಿಯು. ಅದಕ್ಕೆ ದೇವಿಯು ನಿಮಿತ್ತಳಾದುದರಿಂದ ದೇವಿಯಲ್ಲಿ ಕರ್ತೃತ್ವವು ಉಪಚರಿಸಲ್ಪಟ್ಟಿದೆ. "ದೇವದತ್ತಃ ಪಚತಿ" ಎಂಬಲ್ಲಿ ದೇವದತ್ತನಲ್ಲಿ ಪಾಕಾಭಿವ್ಯಕ್ತಿ ನಿಮಿತ್ತತ್ವ ಮಾತ್ರದಿಂದ ಕರ್ತೃತ್ವವನ್ನು ವ್ಯವಹರಿಸುವುದು ಇದಕ್ಕೆ ದೃಷ್ಟಾಂತವು. ಸರ್ವಶ್ಚಾಸೌ ಪ್ರಪಂಚಶ್ಚ, ತಸ್ಯ ನಿರ್ಮಾತ್ರೀ ಎಂದು ವಿಗ್ರಹವು.

೧೬. ಸಮಾನ ಮತ್ತು ಅಧಿಕವಾದ ವ್ಯಕ್ತಿಯಿಂದ ಶೂನ್ಯಳಾದವಳು. ಕುಲ–ಶೀಲ–ಜಾತಿ–ಗುಣ ಮುಂತಾದ ಗುಣಗಳಿಂದ ದೇವಿಗೆ ತುಲ್ಯವೂ ಅಧಿ

ಪ್ರತಿಮಾಸ್ತಿ, ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತಿ ಶ್ರುತೇಃ । "ಸರ್ವಾಧಿಪತ್ಯಂ ಕುರುತೇ ಮಹಾತ್ಮಾ" ಇತಿ "ಏಕಮೇವಾದ್ವಿತೀಯಮ್, ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇ" ಇತ್ಯಾದಿಶ್ರುತಿಸ್ಮೃತಿಭ್ಯಾಂ ಚೇತಿ ಭಾವಃ । ಏತದ್ವ್ಯುತ್ಪತ್ತ್ಯ ಸಂಮಾನನೀಯಃ ಸಮಾನಃ ಪೂಜನೀಯೋಽಧಿಕಃ ತದ್ವಯೇನ ವರ್ಜಿತಾ । "ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿಶ್ರುತೇರಿತಿ ವಾರ್ಥಃ ।

---

ಕವೂ ಆದ ವ್ಯಕ್ತಿಯು ಬೇರೊಂದು ಇಲ್ಲ. ಈ ಅರ್ಥವನ್ನು "ನ ತಸ್ಯ ಪ್ರತಿಮಾಸ್ತಿ, ವಿಶ್ವಾಧಿಕೋ ರುದ್ರೋ ಮಹರ್ಷಿಃ, ಸರ್ವಾಧಿಪತ್ಯಂ ಕುರುತೇ ಮಹಾತ್ಮಾ, ಏಕಮೇವಾದ್ವಿತೀಯಮ್, ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ ಲೋಕತ್ರಯೇ," ಮುಂತಾದ ವಚನಗಳು ವರ್ಣಿಸುತ್ತವೆ. ಅಥವಾ ಸಮಾನ ವೆಂದರೆ ಮಾನ್ಯವೆಂದೂ ಅಧಿಕವೆಂದರೆ ಪೂಜ್ಯವೆಂದೂ ಅರ್ಥವಾಗುವುದು. "ಏಕಮೇವಾದ್ವಿತೀಯಮ್" ಎಂಬ ವಚನದಿಂದ ದೇವಿಯು ಅದ್ವೈತತತ್ತ್ವರೂಪದಿಂದಿರುವುದರಿಂದ ದೇವಿಗೆ ಭಿನ್ನವಾದ ಮಾನ್ಯ ಅಥವಾ ಪೂಜ್ಯವ್ಯಕ್ತಿಯು ಇಲ್ಲವೆಂದು ಅರ್ಥವಾಗುವುದು. ಸಮಾನಶ್ಚ ಅಧಿಕಶ್ಚ ತಾಭ್ಯಾಂ ವರ್ಜಿತಾ ಎಂದು ವಿಗ್ರಹವು.

## ೪೬

**ಸರ್ವೋತ್ತುಂಗಾ ಸಂಗಹೀನಾ ಸಗುಣಾ ಸಕಲೇಷ್ಟದಾ ।**
**ಕಕಾರಿಣೀ ಕಾವ್ಯಲೋಲಾ ಕಾಮೇಶ್ವರಮನೋಹರಾ ॥**

### ೧೭. ಓಂ ಸರ್ವೋತ್ತುಂಗಾಯೈ ನಮಃ ।

**ಸರ್ವೋತ್ತುಂಗಾ । ಕಾರ್ಯಾಪೇಕ್ಷಯಾ ಕಾರಣಸ್ಯಾಧಿಕತ್ವಾತ್ ಸರ್ವಾಪೇಕ್ಷಯಾ ಉತ್ತುಂಗಾ ಉನ್ನತಾ "ಪಾದೋಽಸ್ಯ ವಿಶ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ" ಇತಿ ಶ್ರುತೇಃ ।**

### ೧೮. ಓಂ ಸಂಗಹೀನಾಯೈ ನಮಃ ।

**ಸಂಗಹೀನಾ । ನಿರವಯವತ್ವೇನ ನಿಷ್ಕಾರಣತ್ವೇನ ವಾ ನಿರ್ಗುಣತ್ವೇನ ವಾ ನಿರಾಶ್ರಯತ್ವೇನ ವಾ ನಿತ್ಯಶುದ್ಧಬುದ್ಧ ಮುಕ್ತಸ್ವರೂಪತ್ವೇನ ಸಂಬಂಧರಹಿತಾ ವಾ; ಅಸಂಗೋ ನ ಹಿ ಸಜ್ಜತೇ, ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ" ಇತ್ಯಾದಿ ಶ್ರುತೇರಿತ್ಯಾಶಯಃ ।**

---

೧೭. ಎಲ್ಲದಕ್ಕಿಂತಲೂ ಉನ್ನತಳಾದವಳು. ಕಾರ್ಯವಸ್ತುಗಳಿಗಿಂತ ಕಾರಣವು ಅಧಿಕವಾದ್ದರಿಂದ ಸರ್ವವಸ್ತುಗಳ ಪೈಕಿ ದೇವಿಯು ಉನ್ನತಳಾದವಳು. "ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಎಂಬಲ್ಲಿ ಸರ್ವೋನ್ನತಭಾವವು ಪ್ರತಿಪಾದಿಸಲ್ಪಟ್ಟಿದೆ. ಸರ್ವೇಭ್ಯಃ ಉನ್ನತಾ ಎಂದು ವಿಗ್ರಹವು.

೧೮. ಸಂಗದಿಂದ ಹೀನಳಾದವಳು. ದೇವಿಯು ನಿರವಯವಳೂ, ಕಾರಣಶೂನ್ಯಳೂ, ನಿರ್ಗುಣಸ್ವರೂಪಳೂ, ಆಶ್ರಯಾಪೇಕ್ಷಾಶೂನ್ಯಳೂ, ಮತ್ತು ನಿತ್ಯಶುದ್ಧ–ಬುದ್ಧ–ಮುಕ್ತ ಸ್ವಭಾವಳೂ ಆಗಿರುವುದರಿಂದ ದ್ವಿತೀಯ ವಸ್ತು ಸಂಪರ್ಕದಿಂದ ರಹಿತಳಾದವಳು. ಇದಕ್ಕೆ "ಅಸಂಗೋ ನ ಹಿ ಸಜ್ಜತೇ, ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ" ಮುಂತಾದ ವಚನಗಳು ಆಧಾರವು. ಸಂಗೇನ ಹೀನಾ ಎಂದು ವಿಗ್ರಹವು.

## ೧೯. ಓಂ ಸಗುಣಾಯೈ ನಮಃ

ಸಗುಣಾ। ಸಮಾಃ ಏಕಪ್ರಕಾರಾಃ ಗುಣಾಃ ಸತ್ಯಕಾಮತ್ವಾದಯಃ ಯಸ್ಯಾಃ ಸಾ ತಥಾ। "ಗುಣೀ ಸರ್ವವಿದ್ಯಃ, ಸತ್ಯಕಾಮಃ ಸತ್ಯಸಂಕಲ್ಪಃ" ಇತ್ಯಾದಿ ಶ್ರುತೇಃ। ತ್ರಿಮೂರ್ತಿಸ್ವರೂಪತಯಾ ಸತ್ತ್ವರಜಸ್ತಮೋಗುಣೈಃ ಸಹ ವರ್ತತ ಇತಿ ವಾ ತಥಾ।

## ೨೦. ಓಂ ಸಕಲೇಷ್ಟದಾಯೈ ನಮಃ।

ಸಕಲೇಷ್ಟದಾ। ಇಚ್ಛಾವಿಷಯೀಭೂತಾನಿ ಇಷ್ಟಾನಿ ಕಾಮ್ಯಾನೀತ್ಯರ್ಥಃ। ಸಕಲಾನಿ ಚ ತಾನೀತ್ಯಭೇದಸಮಾಸಃ। ಅನ್ಯಥಾ ಜೀವಾದಿವತ್ ಕಸ್ಮಿಂಶ್ಚಿದ್ವಿಷಯೇಽಸಾಮರ್ಥ್ಯಶಂಕಾ ಸ್ಯಾತ್। ಏಕಸ್ಯ ಪದಾರ್ಥಸ್ಯ ಬಹೂನಾಮಿಚ್ಛಾವಿಷಯತ್ವದರ್ಶನಾತ್, ಏಕತ್ರ ಕಾಮನಾಯಾಮಪಿ ತತ್ಸಹಭಾವಿತ್ವೇನ ಸರ್ವಪ್ರಾಪಕತ್ವೋಕ್ತ್ಯಾ ಪರದೇವತಾಯಾಃ ಬಹುಫಲಪ್ರದಾತೃತ್ವೇನ

---

೧೯. ಸಮಾನ ಗುಣಗಳಿಂದ ಕೂಡಿದವಳು. ದೇವಿಯಲ್ಲಿ ಸತ್ಯಕಾಮತ್ವ ಮುಂತಾದ ಗುಣಗಳು ಏಕಪ್ರಕಾರವಾಗಿವೆ. ಈ ಅಂಶವು "ಗುಣೀ ಸರ್ವವಿದ್ಯಃ, ಸತ್ಯಕಾಮಃ ಸತ್ಯಸಂಕಲ್ಪಃ" ಮುಂತಾದ ವಚನಗಳಲ್ಲಿ ವ್ಯಕ್ತವಾಗಿರುವುದು. ಅಥವಾ ದೇವಿಯು ತ್ರಿಮೂರ್ತಿ ರೂಪದಿಂದ ಇರುವುದರಿಂದ ಸತ್ತ್ವ ರಜಃ–ತಮೋ ಗುಣಗಳಿಂದ ಕೂಡಿರುವಳು. ಸಮಾನಾ ಗುಣಾಃ ಯಸ್ಯಾಃ ಸಾ, ಅಥವಾ ಗುಣೈಃ ಸಹಿತಾ ಎಂದು ವಿಗ್ರಹವು.

೨೦. ಸಕಲವಾದ ಇಷ್ಟ (ಕಾಮ್ಯ) ವಸ್ತುಗಳನ್ನು ಕೊಡುವವಳು. ಇಲ್ಲಿ ಸಕಲ–ಇಷ್ಟಶಬ್ದಗಳಿಗೆ ಕರ್ಮಧಾರಯವೆಂಬ ಅಭೇದಸಮಾಸವು ವಿವಕ್ಷಿತವು. ಆದರಿಂದ ಜೀವರಿಗೆ ಒಂದು ವಿಷಯದಲ್ಲಿ ಅಸಾಮರ್ಥ್ಯವು ಇರುವಂತೆ ದೇವಿಗೆ ಒಂದಾನೊಂದು ವಿಷಯವನ್ನು ಕೊಡುವುದರಲ್ಲಿ ಅಶಕ್ತಿಯು ಇರಬಹುದೆ? ಎಂಬ ಶಂಕೆಯು ವಾರಿತವಾಗುವುದು. ಸಕಲರಿಗೆ ಇಷ್ಟವನ್ನು ಕೊಡುವವಳು

**ಅತ್ಯಂತನಿಶ್ವಸನೀಯತಯಾಅತಿಶಯಪ್ರತಿಭಾನಾಚ್ಚೇತ್ಯರ್ಥಃ। ಅಥವಾ ಪರಿಚ್ಛಿನ್ನಪರಿಮಿತಭಾಗ್ಯವತ್ಪ್ರಾಣಿನಃ ಸರ್ವಸ್ಯ ಸರ್ವತ್ರ ಇಚ್ಛಾಯಾಮಪಿ ಯಾನಿ ಸರ್ವಾಣಿ ಸ್ವಬುದ್ಧ್ಯಾ ಶಾಸ್ತ್ರಾವಿರೋಧೇನೇಷ್ಟಾನಿ ಏಷಿತವ್ಯಾನಿ ವಾಂಛಿತವ್ಯಾನಿ ತಾನ್ಯೇವ ಪ್ರಯಚ್ಛತಿ ದದಾತಿ ನ ತದಧಿಕಾನಿ, ಲೋಕೇಚ್ಛಾಯಾಃ ಬಹುಪ್ರಕಾರತ್ವೇನ ದುಷ್ಪೂರಣೀಯತ್ವಾದಿತಿ ಭಾವಃ। ಸರ್ವೇಷಾಂ ಪ್ರಾಣಿನಾಂ ಇಷ್ಟ್ಯಾ ಇಜ್ಯಯಾ ಪೂಜಯಾ ವಿಷಯೀಕೃತಾ, ಯಜ್ಞೇನ ವಾ ಸಮಾರಾಧಿತಾ ತಸ್ಯ ಫಲ ಪ್ರದೇತ್ಯರ್ಥಃ। "ಅಹಂ ಚ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ, ಏಷ ಹ್ಯೇವ ಸಾಧು ಕರ್ಮ ಕಾರಯತಿ ಯಮೇಭ್ಯೋ ಲೋಕೇಭ್ಯ ಉನ್ನಿನೀಷತಿ" ಇತಿ ಸ್ಮೃತಿ ಶ್ರುತಿಭ್ಯಾಂ ಪರಮೇಶ್ವರಾರ್ಪಣಬುದ್ಧ್ಯಾ ಕ್ರಿಯಮಾಣಸ್ಯೈವ ಕರ್ಮಣಃ ಶುಭಫಲತ್ವಾತ್ ಮುಕ್ತಿಹೇತುತ್ವೇನ, ಕಾಮ್ಯ ಫಲಾರ್ಥಿನಾಂ ಜನ್ಮಮರಣಾದಿಬಂಧಕತ್ವೇನ ಸ್ವಲ್ಪಫಲತಯಾ**

---

ಎಂಬ ಅರ್ಥಕ್ಕಿಂತಲೂ ಈ ಅರ್ಥದಲ್ಲಿ ಅತಿಶಯವುಂಟು. ಒಂದೇ ವಸ್ತುವಿನಲ್ಲಿ ಅನೇಕರಿಗೆ ಇಚ್ಛೆಯು ಬರಬಹುದಾದ್ದರಿಂದ ಅದೊಂದನ್ನು ಅನೇಕರಿಗೆ ಕೊಡುವುದು ಅಷ್ಟೊಂದು ಸ್ತುತ್ಯವಲ್ಲ, ಮತ್ತು ಒಂದು ವಸ್ತುವನ್ನು ಇಷ್ಟಪಟ್ಟರೂ ಅದರ ಜೊತೆಗೆ ಸರ್ವಾರ್ಥಗಳನ್ನು ದೇವಿಯು ಹೊಂದಿಸುವಳು ಎಂದು ಹೇಳಿದರೆ ಪರದೇವತೆಯಲ್ಲಿ ಬಹುಫಲಪ್ರದಾನ ಸ್ತುತಿಯು ತೋರಿ ಪ್ರಭಾವಾತಿಶಯವು ತೋರುವುದು. ಅಥವಾ ಪರಿಚ್ಛಿನ್ನ-ಪರಿಮಿತ-ಭಾಗ್ಯ ಶಾಲಿಗಳಿಗೆ ಸರ್ವಪದಾರ್ಥಗಳಲ್ಲಿ ಇಚ್ಛೆಯು ಹುಟ್ಟಿದರೂ ಶಾಸ್ತ್ರಾವಿರೋಧದಿಂದ ವಿವೇಕದಿಂದ ಆಶಿಸಬೇಕಾದ ಇಷ್ಟವಸ್ತುಗಳನ್ನು ಮಾತ್ರ ಪ್ರದಾನ ಮಾಡುವಳು. ಲೋಕದಲ್ಲಿ ಇಚ್ಛೆಯು ಬಹುರೂಪವಾದ್ದರಿಂದ ಅಧಿಕೇಚ್ಛೆಯು ದುಷ್ಪೂರಣೀಯವಾಗಿರುವುದು ಎಂದು ತಾತ್ಪರ್ಯವು. ಅಥವಾ ಸರ್ವಪ್ರಾಣಿಗಳ ಪೂಜೆಯಿಂದಲೂ ಯಜ್ಞಾದಿ ಸಾಧುಕರ್ಮದಿಂದಲೂ ಆರಾಧಿಸಲ್ಪಟ್ಟವಳಾಗಿ ಪೂಜಕನಿಗೆ ಫಲದಾನ ಮಾಡುವವಳು. ಪರಮೇಶ್ವರಾರ್ಪಣ ಬುದ್ಧಿಯಿಂದ ಮಾಡಿದ ಸತ್ಕರ್ಮಗಳು ಶುಭ ಫಲವನ್ನು ಕೊಡುವುದರಿಂದ ಮುಕ್ತಿಕಾರಣವಾಗುವುವು.

ಅನಾದರಣೀಯತ್ವಾದಿತ್ಯರ್ಥಃ । ಅಥವಾ ಕಲಾಭಿಃ ಅವಯವೈಃ ತರತಮಭಾವೈರಿತ್ಯರ್ಥಃ । ತೈಃ ಸಹಿತಾನಿ ಇಷ್ಟಾನಿ ಫಲಾನಿ ಮನುಷ್ಯಾನಂದಾದಿಬ್ರಹ್ಮಾನಂದಪರ್ಯಂತಾನಿ ಫಲಾನಿ ಆನಂದಸ್ವರೂಪಾಣಿ ದದಾತೀತಿ ತಥಾ ।

ಇತಿ ತ್ರಿಶತ್ಯಾಂ ವಿದ್ಯಾಯಾಂ ದ್ವಾದಶನಾಮವ್ಯಾಖ್ಯಾಯಾಂ
ಸಕಾರವರ್ಣಪ್ರಕಾಶಃ ದ್ವಾದಶಃ ।

## ೧. ಓಂ ಕಕಾರಿಣ್ಯೈ ನಮಃ ।

ಕಕಾರಿಣೀ । ತೃತೀಯಖಂಡದ್ವಿತೀಯವರ್ಣರೂಪಃ । ಕಕಾರಾವಯವಃ ವಾಚಕಃ ಅಸ್ಯಾ ಅಸ್ತೀತಿ ತಥಾ ।

---

ಕಾಮ್ಯ ಕರ್ಮಗಳು ಜನ್ಮ-ಮರಣಾದಿ ಸಂಸಾರದಿಂದ ಬಂಧಕಗಳಾಗಿ ಸ್ವಲ್ಪ ಮಾತ್ರ ಫಲವನ್ನು ಕೊಡುವುವು. ಆದ್ದರಿಂದ ಅವು ಆದರಣೀಯವಲ್ಲ. " ಅಹಂ ಚ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ, ಏಷ ಹ್ಯೇವ ಸಾಧು ಕರ್ಮ ಕಾರಯತಿ ಯಮೇಭ್ಯೋ ಲೋಕೇಭ್ಯ ಉನ್ನಿನೀಷತಿ " ಎಂಬ ಶ್ರುತಿ-ಸ್ಮೃತಿ ವಚನಗಳು ಈ ಅಂಶವನ್ನು ವಿವರಿಸುತ್ತವೆ. ಅಥವಾ ನ್ಯೂನಾಧಿಕ ಭಾವವೆಂಬ ತಾರತಮ್ಯದಿಂದ ಕೂಡಿದ ನಾನಾ ಅವಯವರೂಪವಾದ ಮನುಷ್ಯಾನಂದ ಮೊದಲುಗೊಂಡು ಬ್ರಹ್ಮಾನಂದ ಪರ್ಯಂತವಾಗಿ ಆನಂದ ರೂಪವಾದ ಅನಂತ ಫಲಗಳನ್ನು ಕೊಡುವವಳು. ಸಕಲಾನಿ ಚ ತಾನಿ ಇಷ್ಟಾನಿ ಚ ಸಕಲಾನಾಂ ಇಷ್ಟಾನಿ ತಾನಿ ದದಾತಿ ಅಥವಾ ಸಕಲಾನಾಂ ಇಷ್ಟಾಸತೀ ದದಾತಿ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ದ್ವಾದಶ ಪ್ರಕಾಶವು ಸಮಾಪ್ತವು.

೧. ತೃತಿಯ ಖಂಡದ ದ್ವಿತೀಯ ವರ್ಣರೂಪವಾಗಿ ಕಕಾರವೆಂಬ ಅವಯವವು ವಾಚಕಾಕ್ಷರವಾಗಿ ಉಳ್ಳವಳು. ಕಕಾರಃ ಅಸ್ಯಾ ಅಸ್ತಿ ಎಂದು ವಿಗ್ರಹವು.

## ೨. ಓಂ ಕಾವ್ಯಲೋಲಾಯೈ ನಮಃ।

ಕಾವ್ಯಲೋಲಾ । ವಾಲ್ಮೀಕಿವೇದವ್ಯಾಸಾದಿಕೃತೇಷು ಕಾವ್ಯೇಷು ಲೋಲಾ ವಾಚ್ಯಲಕ್ಷ್ಯಾರ್ಥಭೇದೇನ ತತ್ರ ಸಂಬದ್ಧೇತ್ಯರ್ಥಃ। ಅಥವಾ ಕವಿಭಿಃ ಕೃತೇಷು ಸ್ತುತಿವಿಶೇಷೇಷು ಪ್ರೀತಿಮತೀತ್ಯರ್ಥಃ।

## ೩. ಓಂ ಕಾಮೇಶ್ವರಮನೋಹರಾಯೈ ನಮಃ।

ಕಾಮೇಶ್ವರಮನೋಹರಾ । ಕಾಮೇಶ್ವರಸ್ಯ ಮನಃ ಹರತೀತಿ ತಥಾ ।

---

೨. ಕಾವ್ಯಗಳಲ್ಲಿ ಲೋಲಳಾದವಳು. ವಾಲ್ಮೀಕಿ ವೇದವ್ಯಾಸಾದಿ ರಚಿತವಾದ ಕಾವ್ಯಗಳಲ್ಲಿ ವಾಚ್ಯಲಕ್ಷ್ಯರೂಪವಾವ ಅರ್ಥರೂಪದಿಂದ ಇರುವಳು. ಅಥವಾ ಕವಿಕೃತವಾದ ಸ್ತುತಿರೂಪ ಕಾವ್ಯಗಳಲ್ಲಿ ಪ್ರೀತಿಯುಳ್ಳವಳು ಎಂದು ತಾತ್ಪರ್ಯವು. ಕಾವ್ಯೇಷು ಲೋಲಾ ಎಂದು ವಿಗ್ರಹವು.

೩. ಕಾಮೇಶ್ವರನ ಮನಸ್ಸನ್ನು ಅಪಹರಿಸುವವಳು. ಕಾಮೇಶ್ವರಸ್ಯ ಮನಃ ಹರತಿ ಎಂದು ವಿಗ್ರಹವು.

## ೪೭

**ಕಾಮೇಶ್ವರಪ್ರಾಣನಾಡೀ ಕಾಮೇಶೋತ್ಸಂಗವಾಸಿನೀ।**
**ಕಾಮೇಶ್ವರಾಲಿಂಗಿತಾಂಗೀ ಕಾಮೇಶ್ವರಸುಖಪ್ರದಾ ॥**

**೪. ಓಂ ಕಾಮೇಶ್ವರಪ್ರಾಣನಾಡ್ಯೈ ನಮಃ।**

**ಕಾಮೇಶ್ವರಪ್ರಾಣನಾಡೀ। ಕಾಮೇಶ್ವರಸ್ಯ ಪ್ರಾಣನಾಡೀ। ಯಥಾ ನಾಡ್ಯಾ ಪ್ರಾಣಃ ಸಂಚರತಿ ಸಾ ತಥಾ। ಜೀವನಾಡೀ ತ್ಯರ್ಥಃ "ಇಡಯಾ ತು ಬಹಿರ್ಯಾತಿ" ಇತಿ ನಾಡೀಖಂಡ ವಚನಾತ್। ಲೋಕೇ ವಿಶಸ್ಯಮಾನೇ ಪಶೌ ಹೃದಯಂ ಪುಂಡರೀಕಾಕಾರಂ ಮಾಂಸಖಂಡಾತ್ಮಕಾಂತಃಸುಷಿರಾಷ್ಟದ ಲೋಪೇತಮಂಗುಷ್ಠಪರಿಮಾಣಸುಷಿರಯುತಾಧೋಭಾಗಕ ರ್ಣಿಕಾಮಧ್ಯಃ ದೃಶ್ಯತೇ। ತಸ್ಯಾಃ ಕರ್ಣಿಕಾಯಾಃ ಕೇಸರಾ**

---

೪. ಕಾಮೇಶ್ವರನಿಗೆ ಪ್ರಾಣನಾಡೀರೂಪಳು. ಪ್ರಾಣವು ನಾಡೀರೂಪ ದಿಂದ ಸಂಚರಿಸುವುದರಿಂದ ಪ್ರಾಣನಾಡಿಯು ಮುಖ್ಯ ರೂಪವಾದುದು. ಅದರಂತೆ ದೇವಿಯು ಕಾಮೇಶ್ವರನಿಗೆ ಮುಖ್ಯಪ್ರೇಮಾಸ್ಪದಳಾಗಿ ಜೀವನಾಡಿಯಂತೆ ಇರು ವಳು "ಇಡಯಾ ತು ಬಹಿರ್ಯಾತಿ" ಎಂಬ ವಚನದಿಂದ ಪ್ರಾಣಕ್ಕೆ ನಾಡೀ ದ್ವಾರಾ ಸಂಚಾರವು ಉಕ್ತವಾಗಿದೆ. ಲೋಕದಲ್ಲಿ ಪಶುವನ್ನು ಯಜ್ಞಕರ್ಮ ದಲ್ಲಿ ವಿಶಸನ ಮಾಡಿದರೆ ಒಳಗೆ ಪುಂಡರೀಕಾಕಾರವಾಗಿ ಮಾಂಸಖಂಡವು ಕಾಣು ವುದು. ಅದು ಅಷ್ಟದಲಗಳಿಂದ ಕೂಡಿರುವುದೂ, ಅಂಗುಷ್ಠಪರಿಮಾಣದ ರಂಧ್ರ ದಿಂದ ಕೂಡಿರುವುದೂ ಮತ್ತು ಮಧ್ಯದಲ್ಲಿ ಅಧೋಮುಖಕರ್ಣಿಕೆಯುಳ್ಳದ್ದೂ ಆಗಿರುವುದು. ಅದರಲ್ಲಿ ಕೇಸರಗಳಂತೆ ಒಂದುನೂರು ಒಂದು ನಾಡಿಯ ಅಂಕುರ ಗಳು ಪುರೀತತ್ ಎಂಬ ವೇಷ್ಟನ ನಾಡಿಯ ರಂಧ್ರದಲ್ಲಿರುವ ಮೂಲಗಳಿಂದ ಕೂಡಿರುವುವು. ಸುಷುಮ್ನಾ ಎಂಬ ಒಂದು ನಾಡಿಯು ಮೂಲಾಧಾರದಿಂದ ಬ್ರಹ್ಮರಂಧ್ರದವರೆಗೆ ವ್ಯಾಪಿಸಿರುವುದು. ಆ ನಾಡಿಯಲ್ಲಿ ಯೋಗಶಾಸ್ತ್ರದಲ್ಲಿ ಹೇಳಿದಂತೆ ಆಯಾಯ ಮಾತೃಕಾಕ್ಷರಗಳಿಂದ ಕೂಡಿದ ದಳಗಳಿಂದ ಕೂಡಿದ

ಯಮಾಣಾಃ ಏಕಶತಂ ನಾಡೀನಾಮಂಕುರಾಃ ತದ್ವೇಷ್ಟನಪು
ರೀತನ್ನಾಮಕನಾಡೀಸುಷಿರವಿನ್ಯಸ್ತಮೂಲಾಃ ಭವಂತಿ । ತತ್ರ
ಸುಷುಮ್ನಾನಾಮಕನಾಡೀ ಮೂಲಾಧಾರಾದಾರಭ್ಯ ಬ್ರಹ್ಮ
ರಂಧ್ರಪರ್ಯಂತಂ ಗತಾ ತಸ್ಯಾಂ ಷಟ್ಚಕ್ರಾಣಿ ಮೂಲಾ
ರಾದೀನಿ ತತ್ತನ್ಮಾತೃಕಾವರ್ಣಸಹಿತಯೋಗಶಾಸ್ತ್ರೋಕ್ತದಲ
ಸಂಯುತಾನಿ ಸಂನದ್ಧಾನಿ ವರ್ತಂತೇ । ತಸ್ಯಾ ಮೂಲೇ
ಪೃಥ್ವೀದೇವತಾ ಬಿಸತಂತುತನೀಯಸೀ ಕುಂಡಲಿನ್ಯಧೋಮು
ಖಾವರಣಶಕ್ತಿರ್ನಿದ್ರಾತಿ । ತಸ್ಯಾಃ ದಕ್ಷಿಣಭಾಗೇ ಇಲಾ ನಾಮ
ನಾಡೀ ಭ್ರೂಮಧ್ಯಪರ್ಯಂತಂ ಪ್ರಸೃತಾ । ವಾಮೇ ಪಿಂ
ಗಲಾ ತಥಾ। ತಥಾ ಚ ಜಾಗ್ರದವಸ್ಥಾಯಾಂ ನೇತ್ರಯೋಃ ದಂ
ಪತ್ಯಾತ್ಮನಾ ಶ್ರುತಿಪ್ರತಿಪಾದಿತಃ, ಸ್ವಪ್ನೇ ಮನಉಪಾಧಿಕಃ,
ಸುಷುಪ್ತಾವಜ್ಞಾನೋಪಾಧಿಕಃ, ಜಾಗ್ರತಿ ಸ್ಥೂಲಶರೀರಾ
ಭಿಮಾನೀ ವಿಶ್ವ ಇತ್ಯುಚ್ಯತೇ, ಸ್ವಪ್ನೇ ಸೂಕ್ಷ್ಮಾಭಿಮಾನೀ

---

ಮೂಲಾಧಾರ ಮುಂತಾದ ಆರು ಚಕ್ರಗಳು ಇವೆ. ಆ ನಾಡಿಯ ಮೂಲಭಾಗ
ದಲ್ಲಿ ತಾವರೆಯ ನಾರಿನಂತೆ ಸೂಕ್ಷ್ಮವಾದ ಪೃಥ್ವೀದೇವತೆಯಿಂದ ಕೂಡಿದ
ಆವರಣ ಶಕ್ತಿರೂಪವಾದ ಕುಂಡಲಿನಿಯು ಮಲಗಿದೆ. ಅದರ ಬಲ ಭಾಗದಲ್ಲಿ
ಇಳಾ ನಾಡಿಯು ಹುಬ್ಬಿನವರೆಗೆ ವ್ಯಾಪಿಸಿಕೊಂಡಿದೆ. ಹಾಗೆಯೇ ಎಡ ಭಾಗ
ದಲ್ಲಿ ಪಿಂಗಳಾ ನಾಡಿಯು ಇರುವುದು. ಜೀವನು ಜಾಗ್ರದವಸ್ಥೆಯಲ್ಲಿ ಸ್ಥೂಲ
ಶರೀರಾಭಿಮಾನಿಯಾಗಿಯೂ ವಿಶ್ವ ಎಂಬ ಸಂಜ್ಞಾಂಕಿತನಾಗಿಯೂ ವಾಮ–
ದಕ್ಷಿಣ ನೇತ್ರಗಳಲ್ಲಿ ದಂಪತಿರೂಪದಿಂದ ಇರುವನೆಂದೂ ಸ್ವಪ್ನದಲ್ಲಿ ಸೂಕ್ಷ್ಮ
ಶರೀರಾಭಿಮಾನಿಯಾಗಿಯೂ ತೈಜಸ ನಾಮಾಂಕಿತನಾಗಿಯೂ ಮನ ಉಪಾಧಿ
ಯಿಂದ ಕೂಡಿರುವನೆಂದೂ ಸುಷುಪ್ತಿ ಅವಸ್ಥೆಯಲ್ಲಿ ಕಾರಣಾಭಿಮಾನಿ
ಯಾಗಿಯೂ ಪ್ರಾಜ್ಞನಾಮಾಂಕಿತನಾಗಿಯೂ ಅಜ್ಞಾನೋಪಾಧಿಯಿಂದ ಕೂಡಿ
ರುವನೆಂದೂ ಶ್ರುತಿಯಲ್ಲಿ ಪ್ರತಿಪಾದಿತವಾಗಿದೆ. ಸುಷುಪ್ತಿಯಲ್ಲಿ ಇಂದ್ರಿಯ
ಗಳು ಕಾರಣದಲ್ಲಿ ಐಕ್ಯವನ್ನು ಹೊಂದುವುವು. ಅವು ಸ್ಥೂಲ–ಸೂಕ್ಷ್ಮ ಶರೀರ
ದಿಂದ ಹುಟ್ಟುವ ಭೋಗಕ್ಕೆ ನಿಮಿತ್ತವಾದ ಪ್ರಾರಬ್ಧ ಕರ್ಮಕ್ಕೆ ಅಧೀನವಾಗಿ

**ತೈಜಸಃ, ಸುಷುಪ್ತೌ ಕಾರಣಾಭಿಮಾನೀ ಪ್ರಾಜ್ಞಃ। ಸುಷುಪ್ತೌ ಕಾರಣಾತ್ಮನಾ ಸ್ಥಿತಾನಿ ಸ್ಥೂಲಸೂಕ್ಷ್ಮಶರೀರಜನ್ಯ ಭೋಗಸಾಧನಪ್ರಾರಬ್ಧಕರ್ಮವಶೇನ ಪುರೀತದ್ದ್ವಾರಾ ನಾಡೀಮಾರ್ಗೇಣ ತತ್ತದ್ಗೋಲಕಾನಿ ಪ್ರವಿಶಂತಿ ಇಂದ್ರಿಯಾಣಿ। ತದುಪರಮುಪ್ರಾರಬ್ಧೋದ್ಬೋಧೇ ಆಂದೋಲಿಕಾಯಾಂ ವಿದ್ಯಮಾನೋ ರಾಜಾ ಗೃಹಾಂತರೇ ಸೋಪಾನಮಾರ್ಗದ್ವಾರಾ ಪ್ರಾಸಾದೇ ವಿಹೃತ್ಯ ತದವಚ್ಛಿನ್ನಾಂತಃಪುರಪರ್ಯಂಕೇ ಶಯಾನ ಇವ ನಾಡೀದ್ವಾರಾ ಪುರೀತತ್ಪ್ರವಿಶ್ಯ ತದವಚ್ಛಿನ್ನ ಹೃದಯೋಪಾಧಿಕಂ ಪರಮಾತ್ಮಾನಂ ಯದಾ ಪ್ರವಿಶತಿ ತದಾ ಸುಪ್ತ ಇತ್ಯುಚ್ಯತೇ। ಲಿಂಗಶರೀರಂ ಕಾರಣಾತ್ಮನಾ ಲೀಯತೇ। ತದಾ ಪ್ರಾಣಾದಿವಾಯವಃ ಪ್ರಲೀನವೃತ್ತಯಃ ಸಂತಃ ಆಯುಃಸ್ವರೂಪೇಣ ಶರೀರಂ ರಕ್ಷಂತಿ। ತಥಾ ಚ ಭಾವಿಜಾಗ್ರತ್ಸ್ವಪ್ನಭೋಗಾನುಕೂಲಕರ್ಮಾನುಬಂಧಪ್ರಾಣಧಾರಣಂ ಸುಷುಪ್ತೌ ಸೋಪಾಧಿಕಚೈತನ್ಯಸ್ಯೈವ ದೃಶ್ಯತೇ। ತತ್ಸತ್ತಯಾ ಚ ನಾಡೀನಾಂ ಪ್ರಾಣಸಂಚಾರಯೋಗ್ಯತಾಽಪಿ।**

---

ಪುರೀತತ್ ಎಂಬ ನಾಡಿಯ ಮೂಲಕವಾಗಿ ಆಯಾಯ ಗೋಲಕಗಳನ್ನು ಪ್ರವೇಶಿಸುತ್ತವೆ. ಮತ್ತೆ ಆ ಕರ್ಮವು ಲಯವಾಗಲು ಉಯ್ಯಾಲೆಯಲ್ಲಿದ್ದ ರಾಜನು ಗೃಹಾಂತರಕ್ಕೆ ಸೋಪಾನಗಳ ಮೂಲಕ ಪ್ರವೇಶಿಸಿ ಪ್ರಾಸಾದದಲ್ಲಿ ವಿಹರಿಸಿ ಅಂತಃಪುರದಲ್ಲಿ ಹಾಕಿರುವ ಮಂಚದಲ್ಲಿ ಶಯನಮಾಡುವಂತೆ ನಾಡಿಯ ಮೂಲಕ ಪುರೀತತ್ ನಾಡಿಯನ್ನು ಪ್ರವೇಶಿಸಿ ಅದರೊಳಗಿನ ಹೃದಯೋಪಹಿತನಾದ ಪರಮಾತ್ಮನನ್ನು ಪ್ರವೇಶಿಸುವುವು. ಆಗ ಜೀವನು ಸುಪ್ತನೆಂದು ಕರೆಯಲ್ಪಡುವನು. ಲಿಂಗ ಶರೀರವು ಕಾರಣ ರೂಪವನ್ನು ಹೊಂದಿ ಲಯವಾಗುವುದು. ಆಗ ಪ್ರಾಣಾದಿ ವಾಯುಗಳು ತಮ್ಮ ವೃತ್ತಿಗಳನ್ನು ನಿಲ್ಲಿಸಿ ಆಯುಷ್ಯ ಸ್ವರೂಪದಿಂದ ದೇಹವನ್ನು ರಕ್ಷಿಸುವುವು. ಆದ್ದರಿಂದ ಸೋಪಾಧಿಕ ಚೈತನ್ಯವು ಮುಂದೆ ಬರುವ ಜಾಗ್ರತ್ ಸ್ವಪ್ನ ಭೋಗಕ್ಕೆ ನಿಮಿತ್ತವಾದ ಕರ್ಮಕ್ಕೆ ಅನುಬಂಧಿಸಿದ ಪ್ರಾಣಧಾರಣವನ್ನು ಮಾಡುವುದು. ಆದರಿಂದ ನಾಡಿಗಳಿಗೆ ಪ್ರಾಣಸಂಚಾರ ಯೋಗ್ಯತೆಯೂ ಲಭಿಸುವುದು. ಈ ಪ್ರಕ್ರಿಯೆಯಿಂದ ಪರಮಾತ್ಮನು ಪ್ರಾಣನಾಡೀ ಶಬ್ದದಿಂದ ಲಕ್ಷಣೆಯಿಂದ ಹೇಳಲ್ಪಡು

ಏವಂ ಚ ಸತಿ "ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ। ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ"। ಇತಿ ಶ್ರುತ್ಯಾ ಜೀವ ಪ್ರಾಣಧಾರಣೇ ಇತಿ ಧಾತುಪಾಠಾಚ್ಚ ಪ್ರಾಣನಾಡೀಶಬ್ದಸ್ಯ ಲಕ್ಷಣಯಾ ಪರಮಾತ್ಮೈವೋಚ್ಯತೇ। ಕಾಮೇಶ್ವರಸ್ಯೈವಂ ಪ್ರಾರಬ್ಧಕರ್ಮಜನ್ಯಶರೀರಮಾತ್ರಾಭಾವೇಽಪಿ ಘೃತಕಾಠಿನ್ಯನ್ಯಾಯೇನ ಮೂರ್ತಿಮತ್ತಯಾ ತದಂತರ್ಯಾಮಿಸಂಭಾವನಯಾ ಏತನ್ನಾಮ। ಕಾಮೇಶ್ವರಸ್ಯ ಪ್ರಾಣನಾಡೀ ತದಧಿಷ್ಠಾನಚೈತನ್ಯಮಿತಿ ಫಲಿತೋಽರ್ಥಃ।

೫. ಓಂ ಕಾಮೇಶೋತ್ಸಂಗವಾಸಿನ್ಯೈ ನಮಃ।

ಕಾಮೇಶೋತ್ಸಂಗವಾಸಿನೀ। ಕಾಮೇಶಸ್ಯ ಉತ್ಸಂಗೇ ವಾಮಾಂಕೇ ವಸತೀತಿ ತಥಾ। "ಅನೇಕಮನ್ಮಥಾಕಾರಕಾಮೇಶೋತ್ಸಂಗವಾಸಿನೀ" ಇತಿ ಲಲಿತಾತಾಪನೀಯೇ।

---

ವನು. "ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ, ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ" ಎಂಬ ಶ್ರುತಿಯೂ ಜೀವ ಪ್ರಾಣ ಧಾರಣೇ ಎಂಬ ಧಾತುಪಾಠವೂ ಈ ಅರ್ಥಕ್ಕೆ ಅನುಗುಣವಾಗಿವೆ. ಕಾಮೇಶ್ವರನಿಗೆ ಪ್ರಾರಬ್ಧ ಕರ್ಮಾಯತ್ತವಾದ ಈ ವಿಧದ ದೇಹವಿಲ್ಲದಿದ್ದರೂ ಘೃತ ಕಾಠಿನ್ಯ ನ್ಯಾಯದಂತೆ ಮೂರ್ತಿಯಿರುವುದರಿಂದ ಅದರಲ್ಲಿ ಅಂತರ್ಯಾಮಿರೂಪ ದಿಂದಿರುವಳೆಂಬ ಸಂಭಾವನೆಯಿಂದ ಈ ನಾಮವು ಪ್ರವರ್ತಿಸಿದೆ. ಕಾಮೇಶ್ವರ ನಿಗೆ ಪ್ರಾಣನಾಡಿಯು; ಅಧಿಷ್ಠಾನ ಚೈತನ್ಯಳೆಂದು ಅರ್ಥವು. ಕಾಮೇಶ್ವರಸ್ಯ ಪ್ರಾಣನಾಡೀ ಎಂದು ವಿಗ್ರಹವು.

೫. ಕಾಮೇಶನ ಅಂಕದಲ್ಲಿ ವಾಸಿಸುವವಳು. "ಅನೇಕಮನ್ಮಥಾಕಾರ ಕಾಮೇಶೋತ್ಸಂಗವಾಸಿನೀ" ಎಂಬ ಲಲಿತಾತಾಪನೀಯ ವಚನವನ್ನು ಅನು ಸರಿಸಿ ಕಾಮೇಶ್ವರನ ವಾಮಾಂಕದಲ್ಲಿ ಕುಳಿತಿರುವಳೆಂದು ತಾತ್ಪರ್ಯವು. ಕಾಮೇಶಸ್ಯ ಉತ್ಸಂಗೇ ವಸತಿ ಎಂದು ವಿಗ್ರಹವು.

೬. ಓಂ ಕಾಮೇಶ್ವರಾಲಿಂಗಿತಾಂಗ್ಯೈ ನಮಃ ।

ಕಾಮೇಶ್ವರಾಲಿಂಗಿತಾಂಗೀ । ತೇನ ಆಲಿಂಗಿತಂ ಅಂಗೀಕೃತಂ ಅಂಗಂ ಯಸ್ಯಾಃ ಸಾ ತಥಾ ।

೭. ಓಂ ಕಾಮೇಶ್ವರಸುಖಪ್ರದಾಯೈ ನಮಃ ।

ಕಾಮೇಶ್ವರಸುಖಪ್ರದಾ । ಕಾಮೇಶ್ವರಾಯ ಸುಖಂ ಪ್ರದದಾತೀತಿ ವಾ । ಕಾಮೇಶ್ವರಸ್ಯ ಯತ್ಸುಖಂ ಬ್ರಹ್ಮಸ್ವರೂಪ ಸಚ್ಚಿದಾನಂದಸಾಕ್ಷಾತ್ಕಾರಾತ್ಮಕಂ, "ದೇವೋ ಭೂತ್ವಾ ದೇವಾನಪ್ಯೇತಿ" ಇತಿ ಶ್ರುತ್ಯುಕ್ತನ್ಯಾಯಾತ್ ಸ್ವಕೀಯಭಕ್ತಾನಾಂ ಕಾಮೇಶ್ವರಾಭೇದರೂಪಂ ಸಚ್ಚಿದಾನಂದಘನಾತ್ಮಕಂ ಮೋಕ್ಷಂ ದದಾತೀತ್ಯರ್ಥಃ ।

---

೬. ಕಾಮೇಶ್ವರನಿಂದ ಆಲಿಂಗಿಸಲ್ಪಟ್ಟ ಅಂಗವುಳ್ಳವಳು. ಕಾಮೇಶ್ವರೇಣ ಆಲಿಂಗಿತಂ ಅಂಗಂ ಯಸ್ಯಾಃ ಎಂದು ವಿಗ್ರಹವು.

೭. ಕಾಮೇಶ್ವರನಿಗೆ ಸುಖವನ್ನು ಕೊಡುವವಳು ಅಥವಾ ಕಾಮೇಶ್ವರನ ಸುಖವನ್ನು ಕೊಡುವವಳು. ಕಾಮೇಶ್ವರನಲ್ಲಿರುವ ಸುಖವು ಬ್ರಹ್ಮರೂಪವಾದ ಸಚ್ಚಿದಾನಂದ ಸಾಕ್ಷಾತ್ಕಾರ ಸ್ವರೂಪವಾದುದು. "ದೇವೋ ಭೂತ್ವಾ ದೇವಾನಪ್ಯೇತಿ" ಎಂಬ ಶ್ರುತಿನ್ಯಾಯದಿಂದ ಸ್ವಕೀಯ ಭಕ್ತರಿಗೆ ಕಾಮೇಶ್ವರಾಭೇದರೂಪವೂ ಸಚ್ಚಿದಾನಂದರೂಪವೂ ಆದ ಮೋಕ್ಷವನ್ನು ಕೊಡುವವಳು ಎಂದು ಎರಡನೆಯ ಅರ್ಥದ ತಾತ್ಪರ್ಯವು. ಕಾಮೇಶ್ವರಾಯ ಅಥವಾ ಕಾಮೇಶ್ವರಸ್ಯ ಸುಖಂ ತತ್ ಪ್ರದದಾತಿ ಎಂದು ವಿಗ್ರಹವು.

೩೮

**ಕಾಮೇಶ್ವರಪ್ರಣಯಿನೀ ಕಾಮೇಶ್ವರವಿಲಾಸಿನೀ ।**
**ಕಾಮೇಶ್ವರತಪಃಸಿದ್ಧಿಃ ಕಾಮೇಶ್ವರಮನಃಪ್ರಿಯಾ ॥**

**೮. ಓಂ ಕಾಮೇಶ್ವರಪ್ರಣಯಿನ್ಯೈ ನಮಃ ।**

**ಕಾಮೇಶ್ವರಪ್ರಣಯಿನೀ । ಕಾಮೇಶ್ವರಸ್ಯ ಸ್ವಸ್ವರೂಪೇ ಪರಮಾನಂದಘನೇ ಯಾ ಪ್ರೀತಿಃ ತದ್ವಿಷಯಭೂತೇತ್ಯರ್ಥಃ ।**

**೯. ಓಂ ಕಾಮೇಶ್ವರವಿಲಾಸಿನ್ಯೈ ನಮಃ ।**

**ಕಾಮೇಶ್ವರವಿಲಾಸಿನೀ । ಕಾಮೇಶ್ವರಸ್ಯ ವಿಲಾಸಃ ಕಾರ್ಯಾತ್ಮನಾ ವಿವರ್ತೋಽಸ್ಯಾ ಅಸ್ತೀತಿ ತಥಾ ।**

**೧೦. ಓಂ ಕಾಮೇಶ್ವರತಪಃಸಿದ್ಧ್ಯೈ ನಮಃ ।**

**ಕಾಮೇಶ್ವರತಪಃಸಿದ್ಧಿಃ। ಕಾಮೇಶ್ವರಸ್ಯ ತಪಃ ಜಗದಾಲೋಚ**

---

೮. ಕಾಮೇಶ್ವರನ ಪ್ರಣಯಕ್ಕೆ ಪಾತ್ರಳಾದವಳು. ಕಾಮೇಶ್ವರನ ಸ್ವಸ್ವರೂಪವು ಪರಮಾನಂದ ಘನ ರೂಪವಾದುದು. ಅಂತಹ ಸ್ವಸ್ವರೂಪದಲ್ಲಿರುವ ಪ್ರೀತಿಗೆ ವಿಷಯಳಾದವಳು ಎಂದು ತಾತ್ಪರ್ಯವು. ಕಾಮೇಶ್ವರಸ್ಯ ಪ್ರಣಯಃ ಅಸ್ಯಾ ಅಸ್ತಿ ಎಂದು ವಿಗ್ರಹವು.

೯. ಕಾಮೇಶ್ವರನ ವಿಲಾಸಿನಿಯು. ಕಾಮೇಶ್ವರನ ಕಾರ್ಯಜನ್ಮರೂಪವಾದ ವಿವರ್ತವುಳ್ಳವಳು ಎಂದು ತಾತ್ಪರ್ಯವು. ವಿಲಾಸಃ ಅಸ್ಯಾ ಅಸ್ತೀತಿ ವಿಲಾಸಿನೀ ಕಾಮೇಶ್ವರಸ್ಯ ವಿಲಾಸಿನೀ ಎಂದು ವಿಗ್ರಹವು.

೧೦. ಕಾಮೇಶ್ವರನ ತಪಸ್ಸಿನ ಸಿದ್ಧಿಸ್ವರೂಪಳು. ಕಾಮೇಶ್ವರನಲ್ಲಿ ಜಗದಾಲೋಚನರೂಪವಾದ ತಪಸ್ಸು ಇರುವುದು. ಸಿದ್ಧಿಪದವು ಸಿಧ್ಯತಿ ಅನಯಾ ಎಂಬ ವ್ಯುತ್ಪತ್ತಿಯಿಂದ ಸಾಧನವೆಂಬ ಅರ್ಥವನ್ನು ಬೋಧಿಸುವುದು. ಸ್ತ್ರೀ-ಪುರುಷರೆಂಬ ಕಲ್ಪಿತಭೇದ ವಶದಿಂದ ಜಗತ್ತಿನ ಸೃಷ್ಟಿಗೆ ಸಾಧನಳಾದವಳು

**ನಾತ್ಮಕಂ, ಸಿದ್ಧ್ಯತ್ಯನಯೇತಿ ಸಿದ್ಧಿಃ, ತಪಸಃ ಸಾಧನಭೂತೇ ತ್ಯರ್ಥಃ । ಸ್ತ್ರೀಪುರುಷಾತ್ಮನಾ ಕಲ್ಪಿತಭೇದವಶಾತ್ ಜಗತ್ಸ ರ್ಜನಸಾಧನಭೂತೇತ್ಯರ್ಥಃ ।**

**೧೧. ಓಂ ಕಾಮೇಶ್ವರಮನಃಪ್ರಿಯಾಯೈ ನಮಃ ।**

**ಕಾಮೇಶ್ವರಮನಃಪ್ರಿಯಾ । ಮನಸಃ ಪ್ರಿಯಾ ತಥಾ ನಿರವಧಿ ಕಪ್ರೇಮಾಸ್ಪದೇತ್ಯರ್ಥಃ ।**

---

ಎಂದು ತಾತ್ಪರ್ಯವು. ಕಾಮೇಶ್ವರಸ್ಯ, ತಪಃ, ತಸ್ಯ ಸಿದ್ಧಿಃ ಎಂದು ವಿಗ್ರಹವು.

೧೧. ಕಾಮೇಶ್ವರನ ಮನಸ್ಸಿಗೆ ಪ್ರಿಯಳು. ದೇವಿಯು ಕಾಮೇಶ್ವರ ಮಾನಸಕ್ಕೆ ನಿರವಧಿಕ ಪ್ರೇಮಾಸ್ಪದಳಾಗಿರುವಳು. ಮನಸಃ ಪ್ರಿಯಾ, ಕಾಮೇಶ್ವರಸ್ಯ ಮನಃಪ್ರಿಯಾ ಎಂದು ವಿಗ್ರಹವು.

೪೯

**ಕಾಮೇಶ್ವರಪ್ರಾಣನಾಥಾ ಕಾಮೇಶ್ವರವಿಮೋಹಿನೀ ।**
**ಕಾಮೇಶ್ವರಬ್ರಹ್ಮವಿದ್ಯಾ ಕಾಮೇಶ್ವರಗೃಹೇಶ್ವರೀ ॥**

**೧೨. ಓಂ ಕಾಮೇಶ್ವರಪ್ರಾಣನಾಥಾಯೈ ನಮಃ ।**

**ಕಾಮೇಶ್ವರಪ್ರಾಣನಾಥಾ । ಕಾಮೇಶ್ವರಸ್ಯ ಪ್ರಾಣಃ ಹಿರಣ್ಯಗರ್ಭಃ ತಂ ನಾಥಯತಿ ಪಾಲಯತೀತಿ ತಥಾ । ಕಾಮೇಶ್ವರಃ ಪ್ರಾಣನಾಥೋ ವಲ್ಲಭೋ ಯಸ್ಯಾಃ ಸೇತಿ ವಾ ತಥಾ ।**

**೧೩. ಓಂ ಕಾಮೇಶ್ವರವಿಮೋಹಿನ್ಯೈ ನಮಃ ।**

**ಕಾಮೇಶ್ವರವಿಮೋಹಿನೀ । ವಿಮೋಹಯತಿ ಸ್ವಯಂ ಭಿನ್ನವಿಗ್ರಹವತೀ ಸತೀ ಆವಾಂ ದಂಪತೀ ಇತಿ ದ್ವಿಪ್ರಕಾರಕಜ್ಞಾನವಂತಂ ಕರೋತೀತಿ ಸಾ ತಥಾ । ಅಭೇದಜ್ಞಾನವತಃ ತದ್ವಿಪರೀತಜ್ಞಾನವತ್ತ್ವಂ ಮೋಹಃ ತತ್ಕರೋತೀತಿ ಸಾ ತಥಾ । ಅಥವಾ ಮೋಹೋ ನಾಮ ಬುದ್ಧೇರೇಕಾಲಂಬನತಯಾ**

---

೧೨. ಕಾಮೇಶ್ವರನ ಪ್ರಾಣಕ್ಕೆ ನಾಥರೂಪಳು. ಕಾಮೇಶ್ವರನಿಗೆ ಹಿರಣ್ಯಗರ್ಭನು ಪ್ರಾಣಸ್ವರೂಪನಾಗಿರುವನು. ದೇವಿಯು ಅವನನ್ನು ಪಾಲಿಸುವವಳು. ಅಥವಾ ಕಾಮೇಶ್ವರನು ವಲ್ಲಭನಾಗಿರುವವಳು. ಈ ಅರ್ಥದಲ್ಲಿ ಪ್ರಾಣನಾಥ ಶಬ್ದಕ್ಕೆ ವಲ್ಲಭನೆಂದು ಅರ್ಥವು. ಕಾಮೇಶ್ವರಸ್ಯ ಪ್ರಾಣಃ, ತಂ ನಾಥಯತಿ, ಅಥವಾ ಕಾಮೇಶ್ವರಃ ಪ್ರಾಣನಾಥಃ ಯಸ್ಯಾಃ ಎಂದು ವಿಗ್ರಹವು.

೧೩. ಕಾಮೇಶ್ವರನನ್ನು ಮೋಹಪಡಿಸುವವಳು. ದೇವಿಯು ತಾನು ಭಿನ್ನಮೂರ್ತಿಯನ್ನು ಧರಿಸಿದಂತೆ ಇದ್ದು ನಾವಿಬ್ಬರು ದಂಪತಿಗಳೆಂಬ ಭಿನ್ನ ವ್ಯಕ್ತಿಜ್ಞಾನ ರೂಪವಾದ ಮೋಹವನ್ನು ಕಾಮೇಶ್ವರನಿಗೆ ಉಂಟುಮಾಡುವಳು. ಅಭೇದವುಳ್ಳ ವಸ್ತುವಿನಲ್ಲಿ ಭೇದಜ್ಞಾನವು ಮೋಹವು, ಅಥವಾ ಬುದ್ಧಿಯು ಒಂದೇ ವಿಷಯದಲ್ಲಿ ಏಕಾಗ್ರವಾಗಿದ್ದು ಮತ್ತೊಂದು ವಸ್ತುವನ್ನು ವಿಷಯೀಕರಿಸ

ತದನ್ಯಾವಿಷಯುಕತ್ವಂ ಪರಮೇಶ್ವರಸ್ಯ ಸ್ವಸ್ವರೂಪಪರದೇವತಾ ಪರಮಾನಂದಸಾಕ್ಷಾತ್ಕಾರೇಣ ಸ್ಥಾಣುವನ್ನಿಶ್ಚಲತಯಾ ಉಪ ಚಾರೇಣ ಮೋಹವತ್ತ್ವಂಯಾ ತದಿತರಪ್ರಪಂಚಾಕಾರಕೃತ್ಯಾದ್ಯಾ ಶ್ರಯತಾದರ್ಶನೇನ ಮೋಹಯತೀತ್ಯುಪಚಾರನಾನು ಮೋ ಹಯತೀವೇತ್ಯರ್ಥಃ। ಅಂತಃಪುರಗತಂ ರಾಜಾನಂ ಸ್ತ್ರಿಯಾ ಸಕ್ತಮಿತಿವದಿತ್ಯರ್ಥಃ।

೧೪. ಓಂ ಕಾಮೇಶ್ವರಬ್ರಹ್ಮವಿದ್ಯಾಯೈ ನಮಃ।

ಕಾಮೇಶ್ವರಬ್ರಹ್ಮವಿದ್ಯಾ। ಕಾಮೇಶ್ವರಸ್ಯ ತತ್ತ್ವಂಪದಾರ್ಥ ಸಾಕ್ಷಾತ್ಕಾರಭೂತೇತ್ಯರ್ಥಃ। "ಯಃ ಸಾಕ್ಷಾದಪರೋಕ್ಷಾ ದ್ಬ್ರಹ್ಮ" ಇತಿ ಶ್ರುತೇಃ।

೧೫. ಓಂ ಕಾಮೇಶ್ವರಗೃಹೇಶ್ವರ್ಯೈ ನಮಃ।

ಕಾಮೇಶ್ವರಗೃಹೇಶ್ವರೀ। ಗೃಹ್ಯತ ಇತಿ ಗೃಹಃ ಸರ್ವಜ್ಞಾನಂ

---

ದಿರುವುದು ಮೋಹವು. ಪರಮೇಶ್ವರನಿಗೆ ಸ್ವಸ್ವರೂಪವೂ ಪರದೇವತಾತ್ಮಕವೂ ಆದ ಪರಮಾನಂದ ಸಾಕ್ಷಾತ್ಕಾರದಿಂದ ಸ್ಥಾಣುವಿನಂತೆ ನಿಶ್ಚಲತೆ ಯಿರುವುದರಿಂದ ಉಪಚಾರದಿಂದ ಮೋಹವಿದ್ದಂತೆ ಆಯಿತು. ಅಂತಹ ಪರಮೇಶ್ವರನಲ್ಲಿ ಇತರ ಪ್ರಪಂಚಾಕಾರಕೃತ್ಯವನ್ನು ತೋರಿಸುವುದರಿಂದ ದೇವಿಯನ್ನು ಮೋಹ ಪಡಿಸುವ ವಳೆಂದು ವರ್ಣಿಸಿದೆ. ರಾಜನು ಅಂತಃಪುರದಲ್ಲಿ ಸನ್ನಿಹಿತನಾಗಿದ್ದರೆ ಸ್ತ್ರೀ ಸಂಗಾಸಕ್ತನೆಂದು ಹೇಳುವಂತೆ ಔಪಚಾರಿಕವಾಗಿ ಈ ನಾಮವು ಅರ್ಥವನ್ನು ಬೋಧಿಸುವುದು. ಕಾಮೇಶ್ವರಂ ವಿಮೋಹಯತಿ ಎಂದು ವಿಗ್ರಹವು.

೧೪. ಕಾಮೇಶ್ವರನಿಗೆ ಬ್ರಹ್ಮವಿದ್ಯಾರೂಪಳು "ಯಃ ಸಾಕ್ಷಾದಪ ರೋಕ್ಷಾದ್ಬ್ರಹ್ಮ" ಎಂಬ ಶ್ರುತಿಯಿಂದ ಕಾಮೇಶ್ವರನ ತತ್ತ್ವಂಪದಾರ್ಥಸಾಕ್ಷಾ ತ್ಕಾರ ಸ್ವರೂಪಳೆಂದು ತಿಳಿಯುವುದು. ಕಾಮೇಶ್ವರಸ್ಯ ಬ್ರಹ್ಮವಿದ್ಯಾ ಎಂದು ವಿಗ್ರಹವು.

೧೫. ಕಾಮೇಶ್ವರನ ಜ್ಞಾನಕ್ಕೆ ಈಶ್ವರಿಯು. ಗೃಹವೆಂದರೆ ಸರ್ವಜ್ಞಾನವು. ಕಾಮೇಶ್ವರನ ಸರ್ವಜ್ಞಾನಕ್ಕೆ ವಿಷಯಾಧಿಷ್ಠಾನರೂಪದಿಂದ ದೇವಿಯು ನಿಯಾ

**ತಸ್ಯ ಈಶ್ವರೀ ವಿಷಯಾಧಿಷ್ಠಾನಭೂತತ್ವೇನ ನಿಯಾಮಿಕೇತ್ಯರ್ಥಃ। ಅಥವಾ "ಗೃಹಿಣೀ ಗೃಹಮುಚ್ಯತೇ" ಇತಿ ನ್ಯಾಯಾತ್ ಕಾಮೇಶ್ವರಃ ಗೃಹೇಶ್ವರಃ ಸ್ವಸ್ಯಾಃ ಅಧಿಪತಿಃ ಅಸ್ಯಾ ಅಸ್ತೀತಿ ಸಾ ತಥಾ।**

---

ಮಳು, ಅಥವಾ "ಗೃಹಿಣೀ ಗೃಹಮುಚ್ಯತೇ" ಎಂಬ ನ್ಯಾಯದಿಂದ ಕಾಮೇಶ್ವರನು ಗೃಹೇಶ್ವರನಾಗಿ ಉಳ್ಳವಳು ಎಂದು ಅರ್ಥವು. ಕಾಮೇಶ್ವರಸ್ಯ ಗೃಹಂ ತಸ್ಯ ಈಶ್ವರೀ, ಅಥವಾ ಕಾಮೇಶ್ವರಃ ಗೃಹೇಶ್ವರಃ ಯಸ್ಯಾಃ ಎಂದು ವಿಗ್ರಹವು.

೫೦

**ಕಾಮೇಶ್ವರಾಹ್ಲಾದಕರೀ ಕಾಮೇಶ್ವರಮಹೇಶ್ವರೀ ।**
**ಕಾಮೇಶ್ವರೀ ಕಾಮಕೋಟಿನಿಲಯಾ ಕಾಂಕ್ಷಿತಾರ್ಥದಾ ॥**

**೧೯. ಓಂ ಕಾಮೇಶ್ವರಾಹ್ಲಾದಕರ್ಯೈ ನಮಃ ।**

**ಕಾಮೇಶ್ವರಾಹ್ಲಾದಕರೀ । ಆಹ್ಲಾದಃ ತೃಪ್ತಿಜನ್ಯಸುಖಂ ಪರಮೇಶ್ವರಸ್ಯ ನಿತ್ಯತೃಪ್ತತ್ವರೂಪಾ ಶಕ್ತಿಃ; ಪರದೇವತಾತ್ಮಕತಯಾ ತಂ ಕರೋತೀತಿ ತಥಾ ।**

**೧೭. ಓಂ ಕಾಮೇಶ್ವರಮಹೇಶ್ವರ್ಯೈ ನಮಃ ।**

**ಕಾಮೇಶ್ವರಮಹೇಶ್ವರೀ । ಮಹತೀ ಚ ಸಾ ಈಶ್ವರೀ ನಿರುಪಾಧಿಕೈಶ್ವರ್ಯವತೀ, "ಮಹಾನ್ ಪ್ರಭುರ್ವೈ ಪುರುಷಃ" ಇತಿ ಶ್ರುತೇಃ । ಕಾಮೇಶ್ವರಸ್ಯ ಮಹದೈಶ್ವರ್ಯಂ ಅಸ್ಯಾಃ ಅಸ್ತೀತಿ ತಥಾ ಭಗವತೀತ್ಯರ್ಥಃ। ಐಶ್ವರ್ಯಸ್ಯ ಸಮಗ್ರಸ್ಯ**

---

೧೯. ಕಾಮೇಶ್ವರನಿಗೆ ಆಹ್ಲಾದವನ್ನು ಉಂಟುಮಾಡುವವಳು. ತೃಪ್ತಿಯಿಂದ ಹುಟ್ಟಿದ ಸುಖವು ಆಹ್ಲಾದವು. ಪರಮೇಶ್ವರನು ನಿತ್ಯತೃಪ್ತನಾಗಿರುವುದರಿಂದ ಅಂತಹ ತೃಪ್ತಿರೂಪ ಶಕ್ತಿಯನ್ನು ಪರದೇವತಾರೂಪದಿಂದ ಉಂಟುಮಾಡುವಳು. ಕಾಮೇಶ್ವರಸ್ಯ ಆಹ್ಲಾದಃ ತಂ ಕರೋತಿ ಎಂದು ವಿಗ್ರಹವು.

೧೭. ಕಾಮೇಶ್ವರನ ಮಹೈಶ್ವರ್ಯಯುಕ್ತಳು. ಮಹೇಶ್ವರಿಯೆಂದರೆ ನಿರುಪಾಧಿಕವಾದ ಐಶ್ವರ್ಯವುಳ್ಳವಳು ಎಂದು ಅರ್ಥವು. "ಮಹಾನ್ ಪ್ರಭುರ್ವೈ ಪುರುಷಃ" ಎಂಬ ಶ್ರುತಿಯು ಪರದೇವತೆಯಲ್ಲಿ ಮಹತ್ತಾದ ಐಶ್ವರ್ಯವನ್ನು ಬೋಧಿಸುವುದು. ಕಾಮೇಶ್ವರನ ಮಹೈಶ್ವರ್ಯಕ್ಕೆ ದೇವಿಯು ಪಾತ್ರಳಾದವಳು. "ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ" ಎಂಬ ವಚನದಿಂದ ಐಶ್ವರ್ಯಾದಿಗಳ ಗುಂಪು ಭಗಶಬ್ದದಿಂದ ಸಂಕೇತಿತವಾಗಿದೆ.

ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ'', ತಮೀಶ್ವರಾಣಾಂ ಪರಮಂ ಮಹೇಶ್ವರಮ್'' ಇತಿ ಶ್ರುತೇಃ ।

## ೧೮. ಓಂ ಕಾಮೇಶ್ವರ್ಯೈ ನಮಃ ।

ಕಾಮೇಶ್ವರೀ। ಮನ್ಮಥೋಪಾಸಿತಕಾದಿವಿದ್ಯಾರೂಪೇತ್ಯರ್ಥಃ ।

## ೧೯. ಓಂ ಕಾಮಕೋಟಿನಿಲಯಾಯೈ ನಮಃ ।

ಕಾಮಕೋಟಿನಿಲಯಾ । ಷಣ್ಣವತಿಪೀಠೇಷು ಮಧ್ಯೇ ಕಾಮಕೋಟಿಃ ಶ್ರೀಚಕ್ರಮಿತ್ಯರ್ಥಃ । ನಿಲಯಂ ಗೃಹಂ ಯಸ್ಯಾಃ ಸಾ ತಥಾ ।

---

ಅಂತಹ ಷಡ್ಗುಣೈಶ್ವರ್ಯವನ್ನು ಹೊಂದಿರುವಳು. "ತಮೀಶ್ವರಾಣಾಂ ಪರಮಂ ಮಹೇಶ್ವರಮ್" ಎಂದು ಶ್ರುತಿವಚನವು ಇದನ್ನು ಪುಷ್ಟೀಕರಿಸುವುದು. ಮಹತೀ ಚ ಸಾ ಈಶ್ವರೀ ಚ, ಕಾಮೇಶ್ವರಸ್ಯ ಮಹೇಶ್ವರೀ ಎಂದು ವಿಗ್ರಹವು.

೧೮. ಮನ್ಮಥನಿಂದ ಉಪಾಸನೆಮಾಡಲ್ಪಟ್ಟ ಕಾದಿವಿದ್ಯಾ ರೂಪಿಣಿಯಾದ ಕಾಮೇಶ್ವರಿಯು.

೧೯. ಕಾಮಕೋಟಿಪೀಠವು ನಿಲಯವಾಗಿ ಉಳ್ಳವಳು. ತೊಂಭತ್ತಾರು ಪೀಠಗಳಲ್ಲಿ ಕಾಮಕೋಟಿ ಪೀಠವೆಂಬ ಶ್ರೀಚಕ್ರವು ದೇವಿಗೆ ಪೀಠವಾಗಿ ನಿಲಯರೂಪವಾಗಿರುವುದು. ಕಾಮಕೋಟಿಃ ಪೀಠಂ ಯಸ್ಯಾಃ ಎಂದು ವಿಗ್ರಹವು.

## ೨೦. ಓಂ ಕಾಂಕ್ಷಿತಾರ್ಥದಾಯೈ ನಮಃ ।

ಕಾಂಕ್ಷಿತಾರ್ಥದಾ । ಕಾಂಕ್ಷಿತಾನ್ ಕಾಂಕ್ಷಾವಿಷಯೀಭೂತಾನ್, ಪ್ರಾಪ್ತಸಜಾತೀಯೇಚ್ಛಾ ಕಾಂಕ್ಷಾ ತದ್ಗೋಚರಾನ್ ಪದಾರ್ಥಾನ್ ದದಾತೀತಿ ತಥಾ । ಕಾಂಕ್ಷಿತಾ ಸತೀ ಉಪಾಸ್ಯದೇವತಾ ಮೇ ಪ್ರಸನ್ನಾ ಭೂಯಾದಿತೀಚ್ಛಯಾ ಚಿರಕಾಲೋಪಾಸಿತಾ ಸತೀ ಪುರುಷಾರ್ಥಾನ್ ಅಪ್ರಾರ್ಥಯಮಾನಸ್ಯಾಪಿ ಸ್ವಯಮೇವ ದದಾತೀತ್ಯರ್ಥಃ ।

**ಇತಿ ತ್ರಿಶತ್ಯಾಂ ವಿದ್ಯಾಯಾಂ ತ್ರಯೋದಶಾಕ್ಷರನಾಮವ್ಯಾಖ್ಯಾಯಾಂ ಕಕಾರವರ್ಣಪ್ರಕಾಶಃ ತ್ರಯೋದಶಃ**

---

೨೦. ಕಾಂಕ್ಷಿತವಾದ ಅರ್ಥಗಳನ್ನು ಕೊಡುವವಳು. ಹಿಂದೆ ಹೊಂದಿದ ವಸ್ತುವಿಗೆ ಸಜಾತೀಯವಸ್ತುವಿನಲ್ಲಿ ಇಚ್ಛೆಯು ವಾಂಛೆಯು. ಅಂತಹ ವಾಂಛಾ ವಿಷಯವಾದ ಸಮಗ್ರ ಪದಾರ್ಥಗಳನ್ನು ಕೊಡುವವಳು ಅಥವಾ ತಾನು ಕಾಂಕ್ಷಿತಳಾಗಿ ಪುರುಷಾರ್ಥಗಳನ್ನು ಕೊಡುವವಳು, ಉಪಾಸ್ಯದೇವತೆಯು ನನಗೆ ಪ್ರಸನ್ನಳಾಗಲಿ ಎಂಬ ಇಷ್ಟದಿಂದ ದೇವಿಯನ್ನು ಪ್ರಾರ್ಥಿಸುವಾಗ ದೇವಿಯು ಚಿರಕಾಲ ಉಪಾಸನೆಯಿಂದ ಕಾಂಕ್ಷಿತಳಾಗುವಳು. ಆಗ ಪುರುಷಾರ್ಥಗಳನ್ನು ನೀಡುತ್ತಾಳೆಂದು ತಾತ್ಪರ್ಯವು. ಕಾಂಕ್ಷಿತಾಶ್ಚ ತೇ ಅರ್ಥಾಶ್ಚ ತಾನ್ ದದಾತಿ ಕಾಂಕ್ಷಿತಾ ಚ ಸಾ ಅರ್ಥದಾ ಚ ಎಂದು ವಿಗ್ರಹವು.

ಲಲಿತಾ ತ್ರಿಶತೀನಾಮ ವ್ಯಾಖ್ಯಾನದಲ್ಲಿ ತ್ರಯೋದಶ ಪ್ರಕಾಶವು ಸಮಾಪ್ತವು.

## ೫೧

ಲಕಾರಿಣೀ ಲಬ್ಧರೂಪಾ ಲಬ್ಧಧೀರ್ಲಬ್ಧವಾಂಛಿತಾ ।
ಲಬ್ಧಪಾಪಮನೋದೂರಾ ಲಬ್ಧಾಹಂಕಾರದುರ್ಗಮಾ ॥

### ೧. ಓಂ ಲಕಾರಿಣ್ಯೈ ನಮಃ ।

ಲಕಾರಿಣೀ । ಲಕಾರಃ ತೃತೀಯಖಂಡತೃತೀಯವರ್ಣತ್ವೇನ ವಾಚಕತಯಾ ಅಸ್ಯಾ ಅಸ್ತೀತಿ ಸಾ ತಥಾ ।

### ೨. ಓಂ ಲಬ್ಧರೂಪಾಯೈ ನಮಃ ।

ಲಬ್ಧರೂಪಾ । ರೂಪ್ಯತೇ ಜ್ಞಾಪ್ಯತೇ ಏಭಿರಿತಿ ರೂಪಾಣಿ ಲಕ್ಷಣಾನಿ ಸ್ವರೂಪತಟಸ್ಥಭೇದೇನ ಸಗುಣನಿರ್ಗುಣಪರಾಣಿ ಲಬ್ಧಾನಿ ಯಯಾ ಸಾ ತಥಾ । ರೂಪ್ಯತೇ ಜ್ಞಾಪ್ಯತ ಇತಿ ರೂಪಂ ಅರ್ಥಃ । ಉಪಲಕ್ಷಣಂ ನಾಮ್ನೋಽಪಿ ಲಬ್ಧೇ ನಾಮ ರೂಪೇ ಯಯಾ ಸಾ ತಥಾ । ಆದೌ ಸ್ವಯಂ ಮಾಯೋ

---

೧. ತೃತೀಯಖಂಡದ ತೃತೀಯವರ್ಣರೂಪದಿಂದ ಮೂಲ ವಿದ್ಯೆಯಲ್ಲಿ ವಾಚಕವಾಗಿ ಲಕಾರವುಳ್ಳವಳು. ಲಕಾರಃ ಅಸ್ಯಾ ಅಸ್ತಿ ಎಂದು ವಿಗ್ರಹವು.

೨. ಹೊಂದಿದ ಲಕ್ಷಣಗಳುಳ್ಳವಳು. ರೂಪವೆಂದರೆ ರೂಪ್ಯತೇ ಜ್ಞಾಪ್ಯತೇ ಏಭಿಃ ಎಂಬ ವ್ಯುತ್ಪತ್ತಿಯಿಂದ ಲಕ್ಷಣ ಎಂದು ಅರ್ಥವಾಗುವುದು. ಸಗುಣ–ನಿರ್ಗುಣ ಪರವಾದ ತಟಸ್ಥಲಕ್ಷಣ ಸ್ವರೂಪಲಕ್ಷಣಗಳೆಂದು ಲಕ್ಷಣವು ಎರಡು ವಿಧವಾಗಿದೆ. ಅಥವಾ ರೂಪ್ಯತೇ ಜ್ಞಾಪ್ಯತೇ ಇತಿ ಎಂಬ ವ್ಯುತ್ಪತ್ತಿಯಿಂದ ರೂಪಶಬ್ದಕ್ಕೆ ಅರ್ಥವೆಂದು ಅರ್ಥವು. ಇದು ನಾಮಕ್ಕೆ ಉಪಲಕ್ಷಣವು. ಆದುದರಿಂದ ದೇವಿಯು ಮಾಯೋಪಾಧಿಯಿಂದ ಶಬ್ದಾರ್ಥಭಾವವನ್ನು ಹೊಂದಿ

ಸಾಧಿನಾ ಶಬ್ದಾರ್ಥಭಾವನಮಾಪದ್ಯ ಪಶ್ಚಾತ್ ವ್ಯಾಕರಣಮ
ಕರೋದಿತಿ ಭಾವಃ ।

## ೩. ಓಂ ಲಬ್ಧಧಿಯೇ ನಮಃ ।

ಲಬ್ಧಧೀಃ। ನಿಶ್ಚಯಾತ್ಮಿಕಾಃ ಸವಿಕಲ್ಪನಾಮಕಾಃ ಅಂತಃಕರಣ
ವೃತ್ತಯೋ ಧಿಯಃ। ತಾಃ ಉಪಾಧಿತ್ವೇನ ಪ್ರತಿಬಿಂಬಾಧಿಷ್ಠಾ
ನತ್ವೇನ ಲಬ್ಧಾ ಯಯಾ ಸಾ ತಥಾ। ವೃತ್ತ್ಯಾರೂಢಂ ಚೈತನ್ಯಂ
ಜ್ಞಾನಮಿತಿ ವಾ, ಚೈತನ್ಯವ್ಯಾಪ್ತಾ ವೃತ್ತಿರ್ವೇತಿ ವೇದಾಂತ
ಸಿದ್ಧಾಂತಃ। ಜಡಾನಾಂ ವಿಷಯಾಣಾಂ ಗ್ರಹಣೇ ತಾದೃಶೀ
ನಾಂ ವೃತ್ತೀನಾಂ ಅಸಾಮರ್ಥ್ಯೇ ಜಗದಾಂಧ್ಯಪ್ರಸಂಗೇನ
ಸ್ವರೂಪಚೈತನ್ಯಮಂತಃಕರಣಾದ್ಯುಪಹಿತಂ ಫಲಚೈತನ್ಯತಯಾ
ಪ್ರಕಾಶಯತಿ। ತಥಾ ಚ "ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿ

---

ಅನಂತರದಲ್ಲಿ ವ್ಯಾಕರಣವನ್ನು ಮಾಡಿರುವಳಾದ್ದರಿಂದ ಹೊಂದಿದ ನಾಮರೂಪ
ವುಳ್ಳವಳು ಎಂದು ಅರ್ಥವು. ಲಬ್ಧಂ ರೂಪಂ ಯಯಾ ಎಂದು ವಿಗ್ರಹವು.

೩. ಹೊಂದಿದ ಅಂತಃ ಕರಣ ವೃತ್ತಿಯುಳ್ಳವಳು. ನಿಶ್ಚಯಾತ್ಮಕವೂ
ಸವಿಕಲ್ಪವೆಂಬ ಸಂಜ್ಞಾಂಕಿತವೂ ಆದ ಅಂತಃಕರಣವೃತ್ತಿಗಳು ಧೀ ಶಬ್ದದ
ಅರ್ಥವು. ಅವುಗಳನ್ನು ಪ್ರತಿಬಿಂಬಾಧಿಷ್ಠಾನವಾದ ಉಪಾಧಿರೂಪದಿಂದ ಹೊಂದಿ
ರುವಳೆಂದು ತಾತ್ಪರ್ಯವು. ವೇದಾಂತಶಾಸ್ತ್ರದಲ್ಲಿ ವೃತ್ತಿಯನ್ನು ಆವರಿಸಿದ ಚೈತ
ನ್ಯವೂ, ಚೈತನ್ಯದಿಂದ ಕೂಡಿದ ವೃತ್ತಿಯೂ, ಜ್ಞಾನಶಬ್ದದಿಂದ ಕರೆಯಲ್ಪಡುವುವು.
ಎಂದು ಸಿದ್ಧಾಂತವು. ಲೌಕಿಕ ವಸ್ತುಗಳು ಜಡರೂಪವಾಗಿರುವುವು. ಅಂತಃಕರಣ
ವೃತ್ತಿಯು ಜಡರೂಪವಾದ್ದರಿಂದ ವಸ್ತು ಗ್ರಹಣದಲ್ಲಿ ವೃತ್ತಿಗಳಿಗೆ ಶಕ್ತಿಯಿಲ್ಲದೆ
ಜಗತ್ತು ಅಂಧರೂಪವಾಗುವುದು. ಆದ್ದರಿಂದ ಸ್ವರೂಪಚೈತನ್ಯವು ಅಂತಃಕರಣವೃ
ತ್ತಿಯಿಂದ ಉಪಹಿತವಾಗಿ ಫಲಚೈತನ್ಯರೂಪದಿಂದ ವಸ್ತುಪ್ರಕಾಶಕವಾಗುವುದು.
ಇದನ್ನು ಅನುಸರಿಸಿ ತತ್ತ್ವಮಸ್ಯಾದಿ ಮಹಾವಾಕ್ಯ ಶ್ರವಣದಿಂದ ಹುಟ್ಟುವ
ವೃತ್ತಿವ್ಯಾಪ್ತಿಯನ್ನು ಹೊಂದಿದವಳೆಂದು ತಾತ್ಪರ್ಯವು. "ಬ್ರಹ್ಮಣ್ಯಜ್ಞಾನ
ನಾಶಾಯ ವೃತ್ತಿವ್ಯಾಪ್ತಿರಿಹೇಷ್ಯತೇ" ಮುಂತಾದ ವಚನದಿಂದ ವೃತ್ತಿವ್ಯಾ

ವ್ಯಾಪ್ತಿರಿಹೇಷ್ಯತೇ” ಇತಿ ನ್ಯಾಯೇನ ಲಬ್ಧಾ ಧೀಃ ತತ್ತ್ವ
ಮಸ್ಯಾದಿಮಹಾವಾಕ್ಯಶ್ರವಣಜನ್ಯವೃತ್ತಿವ್ಯಾಪ್ತಿರ್ಯಯಾ ಸೇ
ತ್ಯರ್ಥಃ । ಅಥವಾ ಧೀಶಬ್ದೇನ ಸರ್ವಜ್ಞತ್ವಾದಿಕಮುಚ್ಯತೇ ।
ತತ್ ಲಬ್ಧಂ ಯಯೇತಿ ವಾ, ಯಃ ಸರ್ವಜ್ಞಃ ಸರ್ವವಿತ್
ಇತಿ ಶ್ರುತೇಃ ।

### ೪. ಓಂ ಲಬ್ಧವಾಂಛಿತಾಯೈ ನಮಃ ।

ಲಬ್ಧವಾಂಛಿತಾ । ವಾಂಛಾಯಾ ವಿಷಯೀಭೂತಂ ವಾಂಛಿತಂ
ಇಷ್ಟಫಲಮಿತ್ಯರ್ಥಃ । ಲಬ್ಧಂ ಪೂರ್ವಮೇವ ಪ್ರಾಪ್ತಂ ತದ್ಯ
ಯೇತಿ ತಥಾ । ಆಪ್ತಕಾಮೇತಿ ಯಾವತ್ ।

### ೫. ಓಂ ಲಬ್ಧಪಾಪಮನೋದೂರಾಯೈ ನಮಃ ।

ಲಬ್ಧಪಾಪಮನೋದೂರಾ । ಪಾಪಪ್ರಧಾನಾನಿ ಚ ತಾನಿ ಮ
ನಾಂಸಿ ಚ ಪಾಪಮನಾಂಸಿ ಲಬ್ಧಾನಿ ಪಾಪಮನಾಂಸಿ ಯೈಸ್ತೇ
ಸದಾ ಪಾಪಚಿಂತಕಾ ಇತ್ಯರ್ಥಃ । ತೇಷಾಂ ದೂರಾ ಆವೇ

---

ಪ್ತಿಯು ಪ್ರತಿಪಾದಿಸಲ್ಪಟ್ಟಿದೆ, ಅಥವಾ ಧೀಶಬ್ದಕ್ಕೆ ಸರ್ವಜ್ಞತ್ವವನ್ನು ಅರ್ಥವಾ
ಗಿಟ್ಟುಕೊಂಡರೆ ಹೊಂದಿದ ಸರ್ವಜ್ಞತ್ವಾದಿಗಳುಳ್ಳವಳು, ಎಂಬ ಅರ್ಥಾಂತರವು
ಲಭಿಸುವುದು. “ಯಃ ಸರ್ವಜ್ಞಃ ಸರ್ವವಿತ್” ಮುಂತಾದ ವಚನಗಳಿಂದ
ಸರ್ವಜ್ಞತ್ವಾದಿಗಳು ಪರಬ್ರಹ್ಮವಸ್ತುವಿನಲ್ಲಿ ಪ್ರಮಿತವಾಗಿವೆ. ಲಬ್ಧಾಃ ಧಿಯಃ
ಯಯಾ ಎಂದು ವಿಗ್ರಹವು.

೪. ಹೊಂದಿದ ಇಷ್ಟಾರ್ಥಗಳುಳ್ಳವಳು. ಇಚ್ಛೆಗೆ ವಿಷಯವಾದ ಫಲವು
ವಾಂಛಿತವು. ಅಂತಹ ಫಲವು ಪೂರ್ವದಲ್ಲಿಯೇ ಹೊಂದಲ್ಪಟ್ಟಿದೆ. ಆದ್ದರಿಂದ
ದೇವಿಯು ಆಪ್ತಕಾಮಳೆಂದು ತಾತ್ಪರ್ಯವು. ಲಬ್ಧಾನಿ ವಾಂಛಿತಾನಿ ಯಯಾ
ಎಂದು ವಿಗ್ರಹವು.

೫. ಪಾಪವನ್ನು ಹೊಂದಿರುವ ಪಾಪಿಜನಕ್ಕೆ ವೇದ್ಯಳಲ್ಲದವಳು. ಪಾಪ
ಪ್ರಧಾನವಾದ ಮನೋವೃತ್ತಿಯುಳ್ಳ ಪಾಪಚಿಂತಕರು ಲಬ್ಧಪಾಪರೆಂದು ಹೇಳ

ದ್ಯೇತ್ಯರ್ಥಃ । "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್" ಇತಿ ಶ್ರುತೇಃ । ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಇತಿ ಶ್ರುತ್ಯಾ ವಿಹಿತಾನಾಂ ತತ್ತದ್ವರ್ಣಾಶ್ರಮಧರ್ಮಾಣಾಮೀಶ್ವರಾರ್ಪಣಬುದ್ಧ್ಯಾ ಕ್ರಿಯಮಾಣಾನಾಮಾತ್ಮಜ್ಞಾನಸಾಧನತಯಾ ಶ್ರೂಯಮಾಣತ್ವಾತ್ ತದನ್ಯೇಷಾಂ ದುಃಖಪ್ರಾಪ್ತಿಸಾಧನತ್ವೇನ ಪಾಪವಾಸನಾಪ್ರಧಾನತ್ವೇನ ದುರಧಿಗಮೇತ್ಯರ್ಥಃ ।

೬. ಓಂ ಲಬ್ಧಾಹಂಕಾರದುರ್ಗಮಾಯೈ ನಮಃ ।

ಲಬ್ಧಾಹಂಕಾರದುರ್ಗಮಾ । ಅಹಂಕಾರೋಽಭಿಮಾನಃ ಉಪಲಕ್ಷಣಂತತ್ಕಾರ್ಯಾಣಾಮಾಸುರಸಂಪತ್ತಿವಿಶೇಷಾಣಾಂ ಲಬ್ಧಃ ಅಹಂಕಾರಃ ರಾಜಸತಾಮಸಾತ್ಮಕಃ ಯೈಸ್ತೇ ದುಃಖೇನಾಪ್ಯಧಿಕಪ್ರಯತ್ನೇನ ಕ್ರಿಯಮಾಣಸಾಧನಕಲಾಪೇನ ಅಧಿಗಂತುಂ ಜ್ಞಾತುಮಶಕ್ಯಾ । ಸತ್ತ್ವಗುಣಾಭಾವೇ ದೇಹೇಂದ್ರಿ

---

ಲ್ಪಟ್ಟಿರುವರು. ಅವರಿಗೆ ಅವೇದ್ಯಳಾದ್ದರಿಂದ ದೇವಿಯು ದೂರವಿರುವಳು. "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್" ಎಂಬ ಶ್ರುತಿಯಿಂದ ಅಧರ್ಮ ದೂರತ್ವವು ತಿಳಿಯುವುದು. "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" ಎಂಬ ಶ್ರುತಿಯಿಂದ ವಿಹಿತ ವರ್ಣಾಶ್ರಮ ಧರ್ಮಗಳನ್ನು ಈಶ್ವರಾರ್ಪಣ ಬುದ್ಧಿಪೂರ್ವಕವಾಗಿ ಮಾಡಿದರೆ ಆತ್ಮಜ್ಞಾನ ಸಾಧನವಾಗುವುವು. ಮಿಕ್ಕ ಸಮಸ್ತ ಕರ್ಮಗಳು ದುಃಖಪ್ರಾಪ್ತಿಗೆ ಸಾಧನವಾಗುವುವು. ಆದ್ದರಿಂದ ಪಾಪ ವಾಸನಾ ಪ್ರಾಧಾನ್ಯದಿಂದ ದೇವಿಯು ಸಾಕ್ಷಾತ್ಕಾರಪಾತ್ರಳಾಗುವುದಿಲ್ಲ. ಲಬ್ಧಂ ಪಾಪಂ ಯೈಃ, ತೇಷಾಂ ಮನಾಂಸಿ, ತೇಭ್ಯೋ ದೂರಾ ಎಂದು ವಿಗ್ರಹವು.

೬. ಹೊಂದಿದ ಅಹಂಕಾರವುಳ್ಳ ಜನರಿಗೆ ಅಜ್ಞೇಯಳು. ಇಲ್ಲಿ ಅಹಂಕಾರ ವೆಂಬುದು ಅದರಿಂದಾಗುವ ಅಸುರಸಂಪತ್ತಿ ಧರ್ಮಗಳಿಗೆ ಉಪಲಕ್ಷಣವು. ರಾಜಸ–ತಾಮಸ ರೂಪವಾದ ಅಹಂಕಾರವನ್ನು ಹೊಂದಿರುವ ಜನರಿಗೆ ದುಃಖಸಾಧ್ಯವಾದ ಮಹಾಸಾಧನಗಳಿಂದಲೂ ತಿಳಿಯಲು ಶಕ್ಯಳಾಗುವುದಿಲ್ಲ. ಮಾನ

ಯಾದೌ ಸುಖಪ್ರಕಾಶಾವ್ಯಾಪ್ತೌ ಮನಃಸ್ಥೈರ್ಯಾಭಾವೇನ ರಜಸಃ ಪ್ರವರ್ತಕಸ್ಯ ವಿಕ್ಷೇಪಕಸ್ಯ ತಮಸಶ್ಚಾವರಣಪ್ರಧಾನಸ್ಯ ವಿವೇಕಜ್ಞಾನಪ್ರತಿಬಂಧಕಸ್ಯ ನಿದ್ರಾಲಸ್ಯಾದಿಸಮುದ್ಭವಸ್ಯ ಕಾರ್ಯೇಣ ಜಾಮಿತ್ವಾದಿರೂಪೇಣ ಶ್ರೇಯೋಮಾರ್ಗಸಾಧನಾನುಷ್ಠಾನೇ ಗುರುವೇದಯೋಃ ಶ್ರದ್ಧಾಕ್ಷಯೇ ಬಾಹ್ಯವಿಷಯಸಂಪಾದನವ್ಯಗ್ರೇ ಮನಸಿ ಲಾಭಾಲಾಭಹೇತುಕಹರ್ಷಶೋಕಜನ್ಯರಾಗದ್ವೇಷಪರತಂತ್ರೇ ಅನಾತ್ಮಜ್ಞಾಸುರಸಂಪತ್ತಿಮತಾಂ ಚಿತ್ತೇ ನ ಭಾತೀತ್ಯಾಶಯಃ । ಪ್ರತ್ಯುತ ಜನನಮರಣಪ್ರವಾಹರೂಪಸಂಸಾರಮೇವಾನುಭವಂತಿ । "ತಾನಹಂ ದ್ವಿಷತಃ ಕ್ರೂರಾನ್" ಇತಿ ಭಗವದ್ವಚನಾತ್ । ಅತೋ ನಿರಭಿಮಾನಪುರುಷೇಣ ಸ್ವಾಭೀಷ್ಟಲಾ

---

ವನಲ್ಲಿ ಸತ್ತ್ವಗುಣವಿಲ್ಲದಿದ್ದರೆ ದೇಹ–ಇಂದ್ರಿಯಾದಿಗಳಲ್ಲಿ ಸತ್ತ್ವಗುಣದ ಕಾರ್ಯವಾದ ಜ್ಞಾನ–ಸುಖ–ಪ್ರಕಾಶಗಳ ವ್ಯಾಪ್ತಿಯು ಇಲ್ಲದ್ದರಿಂದ ಮನಸ್ಸಿಗೆ ಸ್ಥೈರ್ಯವು ಲಭಿಸುವುದಿಲ್ಲ. ರಜೋಗುಣವು ನಾನಾ ವಿಕ್ಷೇಪಗಳನ್ನೂ, ತಮೋಗುಣವು ಆವರಣವನ್ನೂ ಉಂಟುಮಾಡಿ ವಿವೇಕಜ್ಞಾನಕ್ಕೆ ಪ್ರತಿಬಂಧಕವಾಗುವುವು. ಆಗ ನಿದ್ರಾ–ಆಲಸ್ಯಾದಿ ಕಾರ್ಯ ದೋಷದಿಂದ ಶ್ರೇಯೋಮಾರ್ಗದ ಸಾಧನಗಳನ್ನು ಆಚರಿಸುವುದರಲ್ಲಿ ಗುರು–ವೇದ ವಾಕ್ಯಗಳಲ್ಲಿ ಶ್ರದ್ಧೆಯು ಲೋಪವಾಗುವುದು. ಮತ್ತು ಬಾಹ್ಯ ವಿಷಯಗಳ ಸಂಪಾದನದಲ್ಲಿ ಮನಸ್ಸು ವ್ಯಗ್ರವಾಗಿ ಅವುಗಳ ಲಾಭ–ಅಲಾಭ ಪ್ರಯುಕ್ತ ಹರ್ಷ–ಶೋಕಾದಿಗಳಿಗೂ ರಾಗ–ದ್ವೇಷಗಳಿಗೂ ಅಧೀನವಾಗುವುದು. ಅಂತಹ ಆಸುರ ಸಂಪತ್ತಿಯುಳ್ಳ ಜನರ ಚಿತ್ತದಲ್ಲಿ ದೇವಿಯು ಪ್ರಕಾಶಿಸುವುದಿಲ್ಲ. ಅವರು ಜನನ–ಮರಣ ಪ್ರವಾಹರೂಪವಾದ ಸಂಸಾರವನ್ನು ಅನುಭವಿಸುವರು. "ತಾನಹಂ ದ್ವಿಷತಃ ಕ್ರೂರಾನ್" ಎಂಬ ವಚನವು ಇದನ್ನು ದೃಢಪಡಿಸುವುದು. ಆದ್ದರಿಂದ "ಯತಯಃ ಶುದ್ಧಸತ್ತ್ವಾಃ" ಎಂಬ ಶ್ರುತಿ ವಚನದಂತೆ ಮಾನವರು ಅಭಿಮಾನವನ್ನು ತ್ಯಜಿಸಿ ಶುದ್ಧಚಿತ್ತದಿಂದ ಇಷ್ಟವಾದ ಶ್ರೇಯೋಲಾಭಕ್ಕೋಸ್ಕರ ಸರ್ವಕಾಲ

**ಭಾಯ ಚಿತ್ತೇ ಸದಾ ಚಿಂತನೀಯೇತ್ಯರ್ಥಃ । ಯತಯಃ ಶುದ್ಧಸತ್ತ್ವಾ ಇತ್ಯಾದಿ ಪ್ರಮಾಣೇಭ್ಯ ಇತಿ ದ್ರಷ್ಟವ್ಯಮ್ ।**

---

ವಲ್ಲಿಯೂ ದೇವಿಯನ್ನು ಧ್ಯಾನಿಸಬೇಕು. ಲಬ್ಧಃ ಅಹಂಕಾರಃ ಯೈಸ್ತೇ, ತೇಷಾಂ ದುಃಖೇನಾಪಿ ಗಂತುಂ ಅಶಕ್ಯಾ ಎಂದು ವಿಗ್ರಹವು.

೫೨

ಲಬ್ಧಶಕ್ತಿರ್ಲಬ್ಧದೇಹಾ ಲಬ್ಧೈಶ್ವರ್ಯಸಮುನ್ನತಿಃ ।
ಲಬ್ಧವೃದ್ಧಿರ್ಲಬ್ಧಲೀಲಾ ಲಬ್ಧಯೌವನಶಾಲಿನೀ ॥

೭. ಓಂ ಲಬ್ಧಶಕ್ತ್ಯೈ ನಮಃ ।

ಲಬ್ಧಶಕ್ತಿಃ । ಲಬ್ಧಾ ಶಕ್ತಿಃ ಸಕಲಸಾಮರ್ಥ್ಯಹೇತುಭೂತಾ ಮಾಯಾತ್ಮಿಕಾ ಯಯಾ ಸಾ ತಥಾ । ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್ ಇತಿ ಶ್ರುತೇಃ ।

೮. ಓಂ ಲಬ್ಧದೇಹಾಯೈ ನಮಃ ।

ಲಬ್ಧದೇಹಾ । ಲಬ್ಧಃ ದೇಹಃ ವಿಗ್ರಹಃ ಯಯಾ ಸಾ ತಥಾ । ಸ್ವೇಚ್ಛಾವಲಂಬಿತಮೂರ್ತಿಃ ಘೃತಕಾಠಿನ್ಯನ್ಯಾಯೇನ

---

೭. ಹೊಂದಿದ ಶಕ್ತಿಯುಳ್ಳವಳು. ಇಲ್ಲಿ ಸಕಲವಸ್ತು ಸಾಮರ್ಥ್ಯಗಳಿಗೆ ಕಾರಣವಾದ "ತೇ ಧ್ಯಾನಯೋಗಾನುಗತಾಃ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್" ಎಂಬ ಶ್ರುತಿಯಲ್ಲಿ ವರ್ಣಿಸಿದ ಮಾಯೆಯು ಶಕ್ತಿಯೆಂದು ವಿವಕ್ಷಿತವು. ಲಬ್ಧಾ ಶಕ್ತಿಃ ಯಯಾ ಎಂದು ವಿಗ್ರಹವು.

೮. ದೇಹವನ್ನು ಹೊಂದಿದವಳು. ಘೃತಕಾಠಿನ್ಯನ್ಯಾಯದಿಂದ ಕರ್ಮಾಧೀನವಲ್ಲದ ಮತ್ತು ಜೀವಸಂಜ್ಞೆಯನ್ನು ಹೊಂದದಿರುವ ಮೂರ್ತಿಯು ದೇವಿಯ ಸ್ವೇಚ್ಛೆಯಿಂದ ನಿರ್ಮಿತವಾಗುವುದು. ತನ್ನಲ್ಲಿ ಅಧ್ಯಸ್ತವಾಗಿರುವ ಮಾಯಾಶಕ್ತಿಯು ಅಭಿನ್ನ ತತ್ತ್ವದಲ್ಲಿ ಭೇದವನ್ನು ತೋರಿಸುವ ಸ್ವಭಾವವನ್ನು ಹೊಂದಿರುವುದರಿಂದ "ಪತಿಶ್ಚ ಪತ್ನೀ ಚಾಭವತಾಮ್" ಎಂಬ ಶ್ರುತಿವಾಕ್ಯಾನು

ಜೀವತ್ವಾಭಾವೇನ ಕರ್ಮಾಧೀನತ್ವಾಭಾವಾತ್ । ತಥಾ ಚ ಸತಿ ಅಧ್ಯಸ್ತಮಾಯಾಶಕ್ತೇಃ ಭೇದಕತ್ವಸ್ಯಾಭಾವ್ಯೇನ "ಪತಿಶ್ಚ ಪತ್ನೀ ಚಾಭವತಾವರ್" ಇತಿ ಶ್ರುತ್ಯಾ ಚ ದಂಪತಿಮೂರ್ತಿಮತೀ ಬಭೂವೇತ್ಯಭಿಪ್ರಾಯಃ ।

## ೯. ಓಂ ಲಬ್ಧೈಶ್ವರ್ಯಸಮುನ್ನತ್ಯೈ ನಮಃ ।

ಲಬ್ಧೈಶ್ವರ್ಯಸಮುನ್ನತಿಃ । ಐಶ್ವರ್ಯಾಣಾಂ ಸಮುನ್ನತಿಃ ಆಧಿಕ್ಯಂ ಪರ್ಯವಸಾನಮಿತ್ಯರ್ಥಃ; ಲಬ್ಧಾ ಐಶ್ವರ್ಯಸಮುನ್ನತಿಃ ಯಯಾ ಸಾ ತಥಾ, "ತಮೀಶ್ವರಾಣಾಂ ಪರಮಂ ಮಹೇಶ್ವರಮ್" ಇತಿ ಶ್ರುತೇಃ । "ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ" ಇತಿ ಸ್ಮೃತೇಶ್ಚ । ಸರ್ವೇಶ್ವರ ಏಷ ಸರ್ವಜ್ಞ ಏಷೋಽನ್ತರ್ಯಾಮ್ಯೇಷ ಯೋನಿಃ ಸರ್ವಸ್ಯ" ಇತಿ ಶ್ರುತೌ ನಿರುಪಾಧಿಕಮಹದೈಶ್ವರ್ಯಸಂಪತ್ತೇಃ ತದುಪಾಸಕಾನಾಮಗಸ್ತ್ಯಾದಿಮಹರ್ಷೀಣಾಂ

---

ಸಾರವಾಗಿ ಭೇದಾಧಿಷ್ಠಾನವಾದ ದಂಪತಿ ಮೂರ್ತಿಯುಳ್ಳವಳು ಎಂದು ಅಭಿಪ್ರಾಯವು. ಲಬ್ಧಃ ದೇಹಃ ಯಯಾ ಸಾ ಎಂದು ವಿಗ್ರಹವು.

೯. ಐಶ್ವರ್ಯದ ಪರಾಕಾಷ್ಠೆಯನ್ನು ಹೊಂದಿದವಳು. ಐಶ್ವರ್ಯದ ಅತಿಶಯವು ಸಮುನ್ನತಿಯು. ನಿರುಪಾಧಿಕವಾದ ಮಹದೈಶ್ವರ್ಯ ಸಂಪತ್ತಿಯನ್ನು "ತಮೀಶ್ವರಾಣಾಂ ಪರಮಂ ಮಹೇಶ್ವರಮ್, ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ, ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ" ಮುಂತಾದ ಶ್ರುತಿ-ಸ್ಮೃತಿ ವಾಕ್ಯಗಳು ನಿರೂಪಿಸುತ್ತಿವೆ. ಅಗಸ್ತ್ಯಾದಿ ಮಹಾಮುನಿಗಳು ನಿರುಪಾಧಿಕ ಮಹೈಶ್ವರ್ಯ ಸಂಪತ್ತಿಯನ್ನು ದೇವಿಯ ಉಪಾಸನೆಯಿಂದ ಹೊಂದಿರುವುದರಿಂದ ದೇವಿಯ ಸಂಪತ್ತಿಯು ನಿರವಧಿಕವೆಂದು ಕೈಮುತಿಕ ನ್ಯಾಯದಿಂದ

ದರ್ಶನಾತ್ ತದೀಯಮಹದೈಶ್ವರ್ಯಸ್ಯ ನಿರವಧಿಕತ್ವಮಿತಿ ಕಿಮು ವಕ್ತವ್ಯಮಿತಿ ಜ್ಞಾಯತೇ ಇತ್ಯಭಿಪ್ರಾಯಃ ।

## ೧೦. ಓಂ ಲಬ್ಧವೃದ್ಧ್ಯೈ ನಮಃ ।

ಲಬ್ಧವೃದ್ಧಿಃ । ವೃದ್ಧಿರ್ನಾಮ ವ್ಯಾಪ್ತಿಃ ಪರಿಪೂರ್ಣತೇತ್ಯರ್ಥಃ ಅವಯವೋಪಚಯಾತ್ಮಿಕಾ ನ, ತಸ್ಯಾಃ ಕರ್ಮಜನ್ಯತ್ವೇನ ವಿನಾಶಹೇತುತ್ವಾತ್; "ಸ ವಾ ಏಷ ಮಹಾನಜ ಆತ್ಮಾ ನ ವರ್ಧತೇ ಕರ್ಮಣಾ" ಇತಿ ಶ್ರುತಿವಚನಾತ್ । ನಿಷ್ಕಲಂ ನಿಷ್ಕ್ರಿಯಂ ಇತಿ ಅವಯವಮಾತ್ರನಿಷೇಧಾಚ್ಚ; ತಥಾ ಚ ಲಬ್ಧಾ ವೃದ್ಧಿಃ ಸರ್ವವ್ಯಾಪಕತಾ ಸ್ವಸ್ವರೂಪೈವ ಸತೀ ಉಪಾಧಿಭಿರ್ಜನ್ಯೈಸ್ತದಾಶ್ರಯಭೂತೈಃ ಅಭಿವ್ಯಜ್ಯತೇ । ನ ತ್ವವಿದ್ಯಮಾನಾರೋಪಿತಾ ಇತಿ ನಿಷ್ಕರ್ಷಾರ್ಥಃ ।

---

ತಿಳಿಯುವುದು. ಐಶ್ವರ್ಯಾಣಾಂ ಸಮುನ್ನತಿಃ, ಲಬ್ಧಾ ಐಶ್ವರ್ಯಸಮುನ್ನತಿಃ ಯಯಾ ಎಂದು ವಿಗ್ರಹವು.

೧೦. ಹೊಂದಿದ ಪರಿಪೂರ್ಣತೆಯುಳ್ಳವಳು. ಇಲ್ಲಿ ಅವಯವೋಪಚಯರೂಪವಾದ ವೃದ್ಧಿಯು ಕರ್ಮಜನ್ಯವಾದ್ದರಿಂದ ನಾಶ ಹೇತುವಾಗಿರುವುದರಿಂದ ಗ್ರಾಹ್ಯವಲ್ಲ. "ಸ ವಾ ಏಷ ಮಹಾನಜ ಆತ್ಮಾ ನ ವರ್ಧತೇ ಕರ್ಮಣಾ" ಎಂಬ ವಚನದಿಂದ ಅಂತಹ ವೃದ್ಧಿಯು ನಿಷೇಧಿಸಲ್ಪಟ್ಟಿದೆ. ಮತ್ತು "ನಿಷ್ಕಲಂ ನಿಷ್ಕ್ರಿಯಮ್" ಎಂಬ ವಚನದಿಂದ ಪರಬ್ರಹ್ಮವಸ್ತುವಿನಲ್ಲಿ ಅವಯವಸಾಮಾನ್ಯವು ನಿಷೇಧಿಸಲ್ಪಟ್ಟಿದೆ. ಆದ್ದರಿಂದ ಸ್ವಸ್ವರೂಪವಾಗಿ ಸರ್ವವ್ಯಾಪಕತಾರೂಪವಾದ ಪರಿಪೂರ್ಣತೆಯೆಂಬ ವೃದ್ಧಿಯು ಉಪಾಧಿ ಜನ್ಯವಾದ ಆಯಾಯ ಆಶ್ರಯಗಳಿಂದ ವ್ಯಕ್ತವಾಗುವುದು. ಇಲ್ಲದ ವೃದ್ಧಿಯು ಆರೋಪಿಸಲ್ಪಡುವುದಿಲ್ಲ. ಲಬ್ಧಾ ವೃದ್ಧಿಃ ಯಯಾ ಎಂದು ವಿಗ್ರಹವು.

## ೧೧. ಓಂ ಲಬ್ಧಲೀಲಾಯೈ ನಮಃ ।

ಲಬ್ಧಲೀಲಾ । ಲೀಲಾಃ ಅನ್ಯಪ್ರಯೋಜನಾರ್ಥವ್ಯಾಪಾರಾಃ ಸ್ವಹರ್ಷಮಾತ್ರಹೇತುಕಾ ವಾ, ತತ್ತತ್ಕಾಲೋಚಿತಶೃಂಗಾರಾದಿನವರಸಾಂಗೀಕಾರಸಮಯೇ ತದುಚಿತಭಂಗೀವಿಶೇಷಾ ವಾ ಲಬ್ಧಾ ಯಯಾ ಸಾ ತಥಾ ।

## ೧೨. ಓಂ ಲಬ್ಧಯೌವನಶಾಲಿನ್ಯೈ ನಮಃ ।

ಲಬ್ಧಯೌವನಶಾಲಿನೀ । ಅಸ್ತಿತ್ವಜನನವರ್ಧನಭಾವವಿಕಾರಾವಸ್ಥಾ ಬಾಲ್ಯಂ, ಪರಿಣಾಮಃ ಅಪಕ್ಷಯೋ ನಾಶಃ ಉತ್ತರಾವಸ್ಥಾ ಜರಾ, ದೇಹಾಭಾವೇನ ತದುಭಯನಿಷೇಧೇ ಅರ್ಥಾದ್ಯೌವನಂ, ಯೌತಿ ಗಚ್ಛತೀತಿ ಯುವಾ ದೃಢಬಲವೀರ್ಯಃ, ತಸ್ಯ ಭಾವಃ ಯೌವನಂ ತದುಭಯವಯೋಽವಸ್ಥಾರಾಹಿತ್ಯೇ

---

೧೧. ಹೊಂದಿದ ಲೀಲೆಯುಳ್ಳವಳು. ಪರಪ್ರಯೋಜನಾರ್ಥವಾದ ವ್ಯಾಪಾರ, ಸ್ವಾನಂದಹೇತುವಾದ ಚೇಷ್ಟೆ, ಅಥವಾ ತತ್ಕತ್ಕಾಲೋಚಿತವಾಗಿ ಶೃಂಗಾರಾದಿರಸಮಯತಾ ದಶೆಯಲ್ಲಿ ಅದಕ್ಕೆ ಉಚಿತವಾದ ಅಂಗ ಭಂಗಿಗಳು ಲೀಲಾ ಶಬ್ದದಿಂದ ವಿವಕ್ಷಿತವಾದ ಅರ್ಥವು. ಲಬ್ಧಾಃ ಲೀಲಾಃ ಯಯಾ ಎಂದು ವಿಗ್ರಹವು.

೧೨. ಹೊಂದಿದ ಯೌವನಾವಸ್ಥೆಯಿಂದ ಪ್ರಕಾಶಿಸುವವಳು. ಜಾಯತೇ ಮುಂತಾದ ನಿರ್ದೇಶವುಳ್ಳ ಆರು ಭಾವವಿಕಾರಗಳಲ್ಲಿ ಜನ್ಮ, ಅಸ್ತಿತ್ವ, ವೃದ್ಧಿಗಳು ಬಾಲ್ಯಾವಸ್ಥಾರೂಪವೆಂದೂ ವಿಪರಿಣಾಮ, ಅಪಕ್ಷಯ, ನಾಶಗಳು ವಾರ್ಧಕ್ಯರೂಪವೆಂದೂ ಅರಿಯಬೇಕು. ಅಶರೀರಳಾದ ದೇವಿಯಲ್ಲಿ ಭಾವವಿಕಾರಗಳು ಇಲ್ಲದಿರುವುದರಿಂದ ಬಾಲ್ಯ–ವಾರ್ಧಕಗಳು ಶೂನ್ಯವಾದರೆ ತಾರುಣ್ಯವು ಮಾತ್ರ ಇದೆಯೆಂದು ನ್ಯಾಯಲಭ್ಯವಾಗುವುದು. ಯೌತಿ ಗಚ್ಛತಿ ಇತಿ ಯುವಾ, ತಸ್ಯ ಭಾವಃ, ಎಂಬ ವ್ಯುತ್ಪತ್ತಿಯಿಂದ ದೃಢಬಲ–ವೀರ್ಯಾದಿ ಸಂತ್ತಿಯು ಯೌವನವೆಂದಾಗುವುದು. ಬಾಲ್ಯ–ವಾರ್ಧಕಗಳಿಲ್ಲದ್ದರಿಂದ ಏಕ

**ನೈಕಸ್ವರೂಪತಾ; ತಲ್ಲಬ್ಧಂ ಪ್ರಾಪ್ತಂ ಯೌವನಂ ಯಯಾ ಸಾ ತಥಾ; "ಅಜರೋಽಮೃತೋಽಭಯೋ ಬ್ರಹ್ಮ" ಇತಿ ಶ್ರುತೇಃ ಸರ್ವದಾ ಏಕಪ್ರಕಾರಸ್ವರೂಪವತೀತಿ ಭಾವಃ।**

---

ರೂಪತೆಯು ತಾರುಣ್ಯವು. "ಅಜರೋಽಮೃತೋಽಭಯೋ ಬ್ರಹ್ಮ" ಎಂಬ ಶ್ರುತಿಯಿಂದ ಸರ್ವಕಾಲದಲ್ಲಿ ಏಕರೂಪತ್ವವು ಬೋಧಿಸಲ್ಪಟ್ಟಿರುವುದು. ಲಬ್ಧಂ ಚ ತತ್ ಯೌವನಂ ಚ, ತೇನ ಶಾಲತ ಇತಿ ಎಂದು ವಿಗ್ರಹವು.

## ೫೩

ಲಬ್ಧಾತಿಶಯಸರ್ವಾಂಗಸೌಂದರ್ಯಾ ಲಬ್ಧವಿಭ್ರಮಾ ।
ಲಬ್ಧರಾಗಾ ಲಬ್ಧಪತಿರ್ಲಬ್ಧನಾನಾಗಮಸ್ಥಿತಿಃ ॥

### ೧೩. ಓಂ ಲಬ್ಧಾತಿಶಯಸರ್ವಾಂಗಸೌಂದರ್ಯಾಯೈ ನಮಃ ।

ಲಬ್ಧಾತಿಶಯಸರ್ವಾಂಗಸೌಂದರ್ಯಾ । ಸುಂದರೋ ರುಚಿರಃ ತಸ್ಯ ಭಾವಃ ಸೌಂದರ್ಯಂ, ಅವಯವಾನಾಂ ಸರ್ವೇಷಾಂ ಸೌಂದರ್ಯಮತಿಶಾಯಿ ಸರ್ವಾಂಗೇಷು ಸರ್ವಾವಯವೇಷು ಲಬ್ಧಂ ಯಯಾ ಸಾ ತಥಾ; ಯಥಾಶಾಸ್ತ್ರೋಕ್ತಾವಯವ ವಿನ್ಯಾಸವಿಶೇಷತ್ವೇನ ಸರ್ವಮನೋಹರಮೂರ್ತಿಮತೀತ್ಯರ್ಥಃ। "ನ ತಸ್ಯ ಪ್ರತಿಮಾಸ್ತಿ" ಇತಿ ಶ್ರುತೇಃ ।

### ೧೪. ಓಂ ಲಬ್ಧವಿಭ್ರಮಾಯೈ ನಮಃ ।

ಲಬ್ಧವಿಭ್ರಮಾ । ವಿಭ್ರಮೋ ಬಾಲಕ್ರೀಡಾ ಲಬ್ಧಾ ಯಯಾ ಸಾ ತಥಾ । ಸರ್ವಾತ್ಮಕತಯಾ ಸರ್ವಕರ್ತೃತ್ವಾದಿತಿ ಭಾವಃ ।

---

೧೩. ಸರ್ವಾವಯವಗಳಲ್ಲಿ ಅತಿಶಯವಾದ ಸೌಂದರ್ಯವನ್ನು ಹೊಂದಿರುವವಳು. ಸಾಮುದ್ರಿಕಾದಿಶಾಸ್ತ್ರೋಕ್ತ ಕ್ರಮದಂತೆ ಉಚಿತವಾದ ಅವಯವ ವಿನ್ಯಾಸ ವಿರುವುದರಿಂದ ಸಕಲಾವಯವಗಳಲ್ಲಿ ಅತಿಶಯವಾದ ಸೌಂದರ್ಯವಿರುವುದರಿಂದ ಸರ್ವಮನೋಹರವಾದ ಮೂರ್ತಿಯುಳ್ಳವಳೆಂದು ತಾತ್ಪರ್ಯವು. ಇದನ್ನು "ನ ತಸ್ಯ ಪ್ರತಿಮಾಸ್ತಿ" ಎಂಬ ಶ್ರುತಿಯಲ್ಲಿ ವರ್ಣಿಸಿದೆ. ಸರ್ವಾಣಿ ಚ ತಾನಿ ಅಂಗಾನಿ ಚ, ಸುಂದರಸ್ಯ ಭಾವಃ ಸೌಂದರ್ಯಂ, ಅಂಗೇಷು ಸೌಂದರ್ಯಂ ಅತಿಶಯೇನ ಸರ್ವಾಂಗೇಷು ಸೌಂದರ್ಯಂ ತತ್ ಲಬ್ಧಂ ಯಯಾ ಎಂದು ವಿಗ್ರಹವು.

೧೪. ಬಾಲಕ್ರೀಡಾ ರೂಪವಾದ ವಿಭ್ರಮವನ್ನು ಹೊಂದಿರುವವಳು. ದೇವಿಯು ಸರ್ವವ್ಯಾಪಾರ ಕರ್ತ್ರಿಯಾಗಿರುವುದರಿಂದ ಬಾಲಕ್ರೀಡಾರೂಪವಾದ ವಿಭ್ರಮಗಳಿಗೆ ಕೂಡ ಕಾರಣಳಾಗುವಳು. ಲಬ್ಧಾಃ ವಿಭ್ರಮಾಃ ಯಯಾ ಎಂದು ವಿಗ್ರಹವು.

## ೧೫. ಓಂ ಲಬ್ಧರಾಗಾಯೈ ನಮಃ ।

ಲಬ್ಧಃ ಸಜಾತೀಯೋ ರಾಗಃ ಕಾಮಃ । "ಸೋಽಕಾಮಯತ" ಇತಿ ಶ್ರುತ್ಯಾ ಜಗತ್ಸರ್ಜನಸ್ಯ ಕಾಮನಾಪೂರ್ವಕತ್ವ ಪ್ರತಿಪಾದನಾತ್, ಲಬ್ಧೋ ರಾಗೋ ಯಯಾ ಸಾ ತಥಾ ಇತ್ಯರ್ಥಃ ।

## ೧೬. ಓಂ ಲಬ್ಧಪತಯೇ ನಮಃ ।

ಲಬ್ಧಪತಿಃ । ಲಬ್ಧಃ ಸ್ವೇಚ್ಛಯೈವ ಸ್ವಯಂವರೇ ಪತಿಃ ಕಾಮೇಶ್ವರೋ ಯಯಾ ಸಾ ತಥಾ ।

## ೧೭. ಓಂ ಲಬ್ಧನಾನಾಗಮಸ್ಥಿತ್ಯೈ ನಮಃ ।

ಲಬ್ಧನಾನಾಗಮಸ್ಥಿತಿಃ । ಆ ಸಮಂತಾತ್ ನಾನಾಪ್ರಕಾರೈಃ ಕರ್ಮೋಪಾಸನಾಜ್ಞಾನಕಾಂಡತದಂಗತ್ವಾದಿಭಿಃ ಗಮಯಂತಿ ಸ್ವಾರ್ಥಾನ್ ಪ್ರಕಾಶಯಂತೀತ್ಯಾಗಮಾಃ ವೇದಾಃ ನಾನಾ

---

೧೫. ಹೊಂದಿದ ರಾಗವುಳ್ಳವಳು. ಪ್ರಾಪ್ತವಸ್ತುವಿಗೆ ತುಲ್ಯವಾದ ವಸ್ತ್ವಂತರದಲ್ಲಿ ಕಾಮವು ರಾಗವು. "ಸೋಽಕಾಮಯತ" ಎಂಬ ಶ್ರುತಿಯಲ್ಲಿ ಜಗತ್ತಿನ ಸೃಷ್ಟಿಯನ್ನು ಕಾಮನಾ ಪೂರ್ವಕವಾಗಿ ವರ್ಣಿಸಿರುವುದರಿಂದ ಅಂತಹ ರಾಗವು ದೇವಿಯಲ್ಲಿದೆಯೆಂದು ತಿಳಿಯುವುದು. ಲಬ್ಧಃ ರಾಗಃ ಯಯಾ ಎಂದು ವಿಗ್ರಹವು.

೧೬. ಹೊಂದಿದ ಪತಿಯುಳ್ಳವಳು. ಸ್ವಯಂವರದಲ್ಲಿ ಕಾಮೇಶ್ವರನೆಂಬ ಪತಿಯನ್ನು ತಾನಾಗಿ ಹೊಂದಿರುವಳು. ಲಬ್ಧಃ ಪತಿಃ ಯಯಾ ಎಂದು ವಿಗ್ರಹವು.

೧೭. ಹೊಂದಿರುವ ನಾನಾವಿಧವಾದ ವೇದಗಳ ಪರಿಪಾಲನವುಳ್ಳವಳು. ಅಥವಾ ಹೊಂದಿದ ನಾನಾವಿಧ ವೇದೋಕ್ತ ಮರ್ಯಾದೆಯುಳ್ಳವಳು. ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡ, ಮತ್ತು ಅನೇಕ ವೇದಾಂಗ

ಅನೇಕಶಾಖಾಪ್ರಭಿನ್ನಸಾಮಾದಯಃ ತೇಷಾಂ ಸ್ಥಿತಿಃ ಪರಿ ಪಾಲನಂ ಲಬ್ಧಾ ಯಯಾ ಸಾ ತಥಾ। ನಾನಾಗಮಸ್ಥಿತಿಃ ವೇದಚತುಷ್ಟಯೋಕ್ತಮರ್ಯಾದಾ ಕಾಂಡತ್ರಯವಿಷಯಾ ಲಬ್ಧಾ ಯಯಾ ಸೇತಿ ವಾ । ಸಂಸಾರಸ್ಯಾನಾದಿತ್ವೇನ ನಿರ ಪೇಕ್ಷಪ್ರಮಾಣಭೂತಾನ್ ವೇದಾನ್ "ಸರ್ವೇ ವೇದಾ ಯ ತ್ರೈಕಂ ಭವಂತಿ" ಇತಿ ಶ್ರುತೇಃ ಸ್ವಸ್ವರೂಪಭೂತಾನ್ ಮ ಹಾಪ್ರಲಯೇ ಸಂರಕ್ಷ್ಯ ಸರ್ಗಾದೌ ಜಾಯಮಾನಹಿರಣ್ಯ ಗರ್ಭಸ್ಯಾನ್ಯೇನಾನತಿರೇಕೇಣ ತಾನೇವ ಪ್ರತಿಭಾಸಯತಿ, ಸ್ವಯಂ ದಂಪತೀ ಭೂತ್ವಾ ತದುಕ್ತಧರ್ಮಾನನುಷ್ಠಾಯ ಪರೇಷಾಮಪ್ಯನುಷ್ಠಾಪಯತೀತಿ ಚ। "ವೇದಶಾಸ್ತ್ರೇ ಮ ಮೈವಾಜ್ಞೇ ವರ್ತ ಏವ ಚ ಕರ್ಮಣಿ । ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ। ಉತ್ಸೀದೇಯು

---

ಮುಂತಾದ ಅನೇಕ ಪ್ರಕಾರಗಳಿಂದ ಸ್ವಾರ್ಥವನ್ನು ಬೋಧಿಸುವ ವೇದಗಳು ಆಗಮಯಂತಿ ಪ್ರಕಾಶಯಂತಿ ಎಂಬ ವ್ಯುತ್ಪತ್ತಿಯಿಂದ ಆಗಮ ಶಬ್ದಕ್ಕೆ ಅರ್ಥವು. ಅವು ಅನೇಕ ಶಾಖಾರೂಪವಾಗಿ ನಾನಾವಿಧಗಳಾಗಿವೆ. ಅವು ಗಳನ್ನು ದೇವಿಯು ಪರಿಪಾಲಿಸುವಳು. ವೇದ ಚತುಷ್ಟಯಗಳಲ್ಲಿರುವ ಕಾಂಡ ತ್ರಯ ವಿಷಯವಾದ ಮರ್ಯಾದೆಯು ದೇವಿಗೆ ಅಧೀನವಾಗಿರುವುದು. ಸಂಸಾ ರವು ಅನಾದಿಯಾದ್ದರಿಂದ ನಿರಪೇಕ್ಷ ಪ್ರಮಾಣವಾದ ವೇದಗಳು ಮಹಾಪ್ರಳ ಯದಲ್ಲಿ "ಸರ್ವೇ ವೇದಾ ಯತ್ರೈಕಂ ಭವಂತಿ" ಎಂಬ ಶ್ರುತಿವಾಕ್ಯಾನು ಸಾರವಾಗಿ ದೇವಿಯ ಸ್ವಸ್ವರೂಪದಲ್ಲಿ ಐಕ್ಯವನ್ನು ಹೊಂದಿರುವುವು. ದೇವಿಯು ಅವುಗಳನ್ನು ರಕ್ಷಿಸಿ ಮೊದಲು ಹುಟ್ಟುವ ಹಿರಣ್ಯಗರ್ಭನಿಗೆ ಉಪದೇಶಿಸುವಳು. ಮತ್ತು ದಂಪತಿರೂಪದಿಂದ ತಾನು ಅಲ್ಲಿ ಹೇಳಿದ ಧರ್ಮಗಳನ್ನು ಆಚರಿಸಿ ಪರ ರಿಂದಲೂ ಅನುಷ್ಠಾನ ಮಾಡಿಸುವಳು. ಆದ್ದರಿಂದ ವೇದಮರ್ಯಾದೆಯನ್ನು ಶಾಶ್ವತ ಗೊಳಿಸುವಳು. ಈ ಅರ್ಥದಲ್ಲಿ "ವೇದಶಾಸ್ತ್ರೇ ಮಮೈವಾಜ್ಞೇ, ವರ್ತ ಏವ ಚ ಕರ್ಮಣಿ, ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂ

**ರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।"**
**ಇತ್ಯಾದಿ ಭಗವದ್ವಚನಾದಿತಿ ದ್ರಷ್ಟವ್ಯಮ್ ।**

---

ರತಃ । ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್" ಇತ್ಯಾದಿ ವಚನಗಳು ಪ್ರಮಾಣಗಳಾಗಿವೆ. ನಾನಾ ಚ ತೇ ಆಗಮಾಶ್ಚ, ತೇಷಾಂ ಸ್ಥಿತಿಃ, ಸಾ ಲಬ್ಧಾ ಯಯಾ ಎಂದು ವಿಗ್ರಹವು.

೫೪

ಲಬ್ಧಭೋಗಾ ಲಬ್ಧಸುಖಾ ಲಬ್ಧಹರ್ಷಾಭಿಪೂಜಿತಾ ।
ಹ್ರೀಂಕಾರಮೂರ್ತಿರ್ಹ್ರೀಂಕಾರಸೌಧಶೃಂಗಕಪೋತಿಕಾ ॥

೧೮. ಓಂ ಲಬ್ಧಭೋಗಾಯೈ ನಮಃ ।

ಲಬ್ಧಭೋಗಾ । ಭೋಗಃ ಸುಖಮಾತ್ರಾನುಭವಃ ದುಃಖಾನು ಭವೇ ಉಚ್ಯಮಾನೇ ಜೀವಾವಿಶೇಷಪ್ರಸಂಗಾತ್ । ಲಬ್ಧಃ ಭೋಗಃ ಯಯಾ ಸಾ ತಥಾ । ಜೀವವತ್ ಕ್ರಮಿಕಸ್ವೇಷ್ಟ ಪದಾರ್ಥಾನುಭವಾನಂತರಕಾಲೀನಂ ಸುಖಂ ನ ಭವತಿ । ಸ್ವಸ್ಯಾ ಆನಂದರೂಪತ್ವೇನ ಸಿದ್ಧಸ್ವರೂಪತ್ವಾತ್ । ಸಾಧನ ಭೂತಭೋಗೋಽಪ್ಯೇತದ್ವಿಷಯೇ ಸಿದ್ಧ ಇತ್ಯುಪಚರ್ಯತೇ ಇತಿ ಲಬ್ಧಭೋಗೇತ್ಯುಚ್ಯತೇ ।

೧೯. ಓಂ ಲಬ್ಧಸುಖಾಯೈ ನಮಃ ।

ಲಬ್ಧಸುಖಾ । ಲಬ್ಧಂ ಸುಖಂ ಅನುಕೂಲವೇದನೀಯಂ

---

೧೮. ಹೊಂದಿದ ಸುಖಾನುಭವವುಳ್ಳವಳು. ಭೋಗಶಬ್ದಾರ್ಥವಾಗಿ ದುಃಖಭೋಗವನ್ನು ಸ್ವೀಕರಿಸಿದರೆ ಜೀವೇಶ್ವರರಿಗೆ ವಿಶೇಷವಿಲ್ಲದಂತಾಗುವುದು. ಜೀವನಿಗೆ ಕ್ರಮಿಕವಾಗಿಇಷ್ಟಪದಾರ್ಥಗಳನ್ನು ಅನುಭವಿಸಿ ಹೊಂದಬಹುದಾದ ಸುಖವು ಭೋಗರೂಪವು. ಆದರೆ ದೇವಿಯಲ್ಲಿ ಆನಂದ ರೂಪವಾಗಿ ಅದು ಸರ್ವಕಾಲದಲ್ಲಿಯೂ ಸಿದ್ಧವಾಗಿರುವುದು. ಈ ವಿಷಯದಲ್ಲಿ ಸಾಧನವಾದ ಭೋಗವು ಯಾವಾಗಲೂ ಸಿದ್ಧವಾಗಿರುವುದೆಂದು ಉಪಚಾರ ದೃಷ್ಟಿಯಿಂದ ಈ ನಾಮವು ದೇವಿಯಲ್ಲಿ ಭೋಗವನ್ನು ವರ್ಣಿಸುವುದು. ಲಬ್ಧಃ ಭೋಗಃ ಯಯಾ ಎಂದು ವಿಗ್ರಹವು.

೧೯. ಹೊಂದಿದ ಸುಖವುಳ್ಳವಳು. ಅನುಕೂಲವೆಂದು ಸರ್ವರಿಂದ

ಸ್ವಸ್ವರೂಪಭೂತಂ ಸುಖಂ ತತ್ಸಾಧನಂ ಚ ಧರ್ಮಃ ಯಯಾ ಸಾ ತಥಾ ।

## ೨೦. ಓಂ ಲಬ್ಧಹರ್ಷಾಭಿಪೂರಿತಾಯೈ ನಮಃ ।

ಲಬ್ಧಹರ್ಷಾಭಿಪೂರಿತಾ । ಲಬ್ಧಃ ಯೋ ಹರ್ಷಃ ತೃಪ್ತಿನಿಮಿತ್ತಕಚಿತ್ತೋಲ್ಲಾಸವಿಶೇಷಃ ಮುಖಪ್ರಸಾದಶರೀರಪುಷ್ಟ್ಯಾದಿಕಾರ್ಯೋನ್ನೇಯಃ ಜಗತ್ಯಾಂ ಸ್ವಾಭೀಷ್ಟಪದಾರ್ಥಾನುಭವಾದಿಜನ್ಯಃ ಸಂತೋಷ ಇತಿ ಪ್ರಸಿದ್ಧಃ ತೇನಾಭಿಪೂರಿತಾ ಅಭಿತಃ ಸಮಂತಾದನ್ಯೂನಾನತಿರೇಕೇಣಾವಿಚ್ಛಿನ್ನರೂಪತಯಾ ಪೂರಿತಾ ಭರಿತಾ। ತದ್ವಿಪರೀತದುಃಖಾದ್ಯನುತ್ಪಾದೇನ ತನ್ಮಾತ್ರಸಮಾಶ್ರಯಾ ನಿತ್ಯಪ್ರಸನ್ನಮುಖೀತ್ಯರ್ಥಃ ।

### ಇತಿ ತ್ರಿಶತ್ಯಾಂ ವಿದ್ಯಾಯಾಂ ಚತುರ್ದಶಾಕ್ಷರನಾಮವ್ಯಾಖ್ಯಾಯಾಂ ಲಕಾರವರ್ಣಪ್ರಕಾಶಃ ಚತುರ್ದಶಃ ।

---

ಪ್ರಾರ್ಥಿಸಲ್ಪಡುವ ಸುಖವೂ ತತ್ಸಾಧನವಾದ ಧರ್ಮವೂ ದೇವಿಗೆ ಸ್ವಸ್ವರೂಪವಾದುದು. ಲಬ್ಧಂ ಸುಖಂ ಯಯಾ ಎಂದು ವಿಗ್ರಹವು.

೨೦. ಹೊಂದಿದ ಹರ್ಷದಿಂದ ತುಂಬಿದವಳು. ತೃಪ್ತಿಯಿಂದ ಹುಟ್ಟುವ ಚಿತ್ತದ ಉಲ್ಲಾಸವು ಹರ್ಷವು. ಅದು ಮುಖಪ್ರಸಾದ, ಶರೀರ ಪುಷ್ಟಿಗಳಿಂದ ಊಹಿಸಲು ಶಕ್ಯವಾಗುವುದು. ಇದನ್ನು ಇಷ್ಟಪದಾರ್ಥದ ಅನುಭವದಿಂದ ಹುಟ್ಟುವ ಸಂತೋಷವೆಂದು ಲೋಕದಲ್ಲಿ ಕರೆಯುವರು. ದೇವಿಯು, ಅದರಿಂದ ನ್ಯೂನ–ಅತಿರೇಕಗಳಿಲ್ಲದಂತೆಯೂ, ವಿಚ್ಛೇದವಿಲ್ಲದಂತೆಯೂ, ಸುತ್ತಲೂ ಪೂರ್ಣಳಾಗಿರುವಳು. ದೇವಿಯಲ್ಲಿ ಸಂತೋಷವಿರುದ್ಧವಾಗಿ ದುಃಖಾದಿಗಳು ಇಲ್ಲದ್ದರಿಂದ ಸುಖಮಾತ್ರಕ್ಕೆ ಆಶ್ರಯಳಾಗಿ ನಿತ್ಯಪ್ರಸನ್ನವಾದ ಮುಖವುಳ್ಳವಳಾಗಿರುವಳು, ಎಂದು ತಾತ್ಪರ್ಯವು. ಲಬ್ಧಶ್ಚಾಸೌ ಹರ್ಷಶ್ಚ ತೇನ ಪೂರಿತಾ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ಚತುರ್ದಶ ಪ್ರಕಾಶವು ಸಮಾಪ್ತವು.

## ೧. ಓಂ ಹ್ರೀಂಕಾರಮೂರ್ತ್ಯೈ ನಮಃ ।

ಹ್ರೀಂಕಾರಮೂರ್ತಿಃ । ವಾಚ್ಯವಾಚಕತಾಭೇದಸಂಬಂಧೇನ ಹ್ರೀಂಕಾರಃ ಮೂರ್ತಿಃ ವಿಗ್ರಹೋ ಯಸ್ಯಾಃ ಸಾ ತಥಾ ।

## ೨. ಓಂ ಹ್ರೀಂಕಾರಸೌಧಶೃಂಗಕಪೋತಿಕಾಯೈ ನಮಃ ।

ಹ್ರೀಂಕಾರಸೌಧಶೃಂಗಕಪೋತಿಕಾ । ಸುಧಾಮಯಂ ಸೌಧಂ ಸುಧಾವಿಕಾರಃ ಅಟ್ಟಾಲಿಕೇತ್ಯರ್ಥಃ । ತಸ್ಯ ಶೃಂಗಂ ಶಿಖರಂ ಚಂದ್ರಶಾಲಾದಿಭಿತ್ತ್ಯುಪರಿಭಾಗಃ । ನಿರುಪಾಧಿಕವಿಶ್ರಾಂತಿಜನ್ಯ ಸುಖಾನುಭವಹೇತುತಯಾ ಹ್ರೀಂಕಾರಸ್ಯ ಸೌಧೋಪಮಾ; ತತ್ರ ಹಕಾರಸ್ಯ ಶ್ವೇತವರ್ಣತಯಾ ಅಟ್ಟಾಲಿಕಸಾದೃಶ್ಯಮ್; ರೇಫಸ್ಯ ಲೋಹಿತರೂಪತಯಾ ಇಷ್ಟಕಾದಿಕೃತಾಧೋಭಿತ್ತ್ಯು ಪಮಾ; ಹಕಾರೋಪರಿ ಈಕಾರಸ್ಯ ಶೃಂಗೋಪಮಾ ಊರ್ಧ್ವ

---

೧. ವಾಚ್ಯ-ವಾಚಕಭಾವ ಸಂಬಂಧದಿಂದ ಹ್ರೀಂಕಾರ ವೆಂಬ ಮೂರ್ತಿ ಯುಳ್ಳವಳು. ಹ್ರೀಂಕಾರಃ ಮೂರ್ತಿಃ ವಿಗ್ರಹಃ ಯಸ್ಯಾಃ ಎಂದು ವಿಗ್ರಹವು.

೨. ಸೌಧದಂತಿರುವ ಹ್ರೀಂಕಾರದ ಶೃಂಗದಲ್ಲಿ ಕಪೋತಪಕ್ಷಿಯಂತೆ ಇರುವವಳು. ಸುಧೆಯಿಂದ ಮಾಡಿದ ಮೇಲ್ಮಾವಣಿ ಅಥವಾ ಅಟ್ಟಾಲಿಕೆಯು ಸೌಧವು. ಅದರ ಶೃಂಗವೆಂದರೆ ಚಂದ್ರಶಾಲಾ ಮುಂತಾದುದರ ಭಿತ್ತಿಯ ಮೇಲುಭಾಗವು. ಹ್ರೀಂಕಾರವು ನಿರುಪಾಧಿಕವಾದ ವಿಶ್ರಾಂತಿ ಲಭ್ಯವಾದ ಸುಖಾನುಭವಕ್ಕೆ ನಿಮಿತ್ತವಾದ್ದರಿಂದ ಅದನ್ನು ಅಂತಹ ಸೌಧಕ್ಕೆ ಹೋಲಿಸಿದೆ. "ಹ್ರೀಂ" ಎಂಬ ಬೀಜವರ್ಣದಲ್ಲಿರುವ ಹಕಾರವು ಶುಭ್ರವರ್ಣದಿಂದಿರುವುದ ರಿಂದ ಅಟ್ಟಾಲಿಕಾ ಸದೃಶವಾಗಿದೆ. ರೇಫವು ಅರುಣವರ್ಣವಾದ್ದರಿಂದ ಇಷ್ಟ ಕಾದಿರಚಿತ ಭಿತ್ತಿಗೆ ಸಮಾನವಾಗಿದೆ. ಹಕಾರದ ಮೇಲಿರುವ ಈಕಾರವು ಮೇಲುಗಡೆಯಲ್ಲಿರುವ ಶೃಂಗಕ್ಕೆ ಸಮಾನವಾಗಿದೆ. ಎಲ್ಲಕ್ಕೂ ಮೇಲುಗಡೆ ಯಲ್ಲಿ ಬಿಂದುವು ಇರುವುದು. ಅದು ಸರ್ವಪ್ರಕೃತಿಯಾದ ಶಬ್ದ-ಅರ್ಥಗಳ

**ಗತ್ವಸಾಮ್ಯಾತ್ । ತದುಪರಿತನಬಿಂದುಃ ಸರ್ವಪ್ರಕೃತಿಭೂತಶ ಬ್ದಾರ್ಥಾತ್ಮಕತಯಾ ತದವಯವತ್ವೇನ ವಿಚಿತ್ರಸ್ವರೂ ಪೋಽಪಿ ಸೂಕ್ಷ್ಮತಯಾ ಅಪವರಕಗತಕಪೋತಕಾಂತೀವ ಜಾಗರೂಕಃ ದೃಶ್ಯತ ಇತಿ ತದರ್ಥತ್ವೇನ ಪರದೇವತೋಪ ಮಾನಶಬ್ದೇನಾಭಿಧೀಯತ ಇತಿ ಭಾವಃ ।**

---

ಸ್ವರೂಪವನ್ನು ಹೊಂದಿದೆ. ಹಾಗೆ ಹ್ರೀಂಕಾರಾವಯವವಾಗಿ ವಿಚಿತ್ರರೂಪದಿಂದ ಇದ್ದರೂ ಸೂಕ್ಷ್ಮವಾದ್ದರಿಂದ ಕೋಣ ಪ್ರದೇಶದಲ್ಲಿ ಕಪೋತ ಪಕ್ಷಿಯ ಕಾಂತೆ ಯಂತೆ ಜಾಗರೂಕವಾಗಿ ಕಾಣುವುದೆಂಬ ಭಾವನೆಯಿಂದ ಹ್ರೀಂಕಾರ ಶಬ್ದಾರ್ಥ ವಾದ ಪರದೇವತೆಯು ಕಪೋತಕಾಂತೆಯ ಉಪಮಾನದಿಂದ ನಿರ್ದೇಶಿಸಲ್ಪಟ್ಟ ರುವಳು. ಹ್ರೀಂಕಾರಃ ಸೌಧಮಿವ, ತಸ್ಯ ಶೃಂಗಂ ತತ್ರ ಕಪೋತೀವ ಎಂದು ವಿಗ್ರಹವು.

# ೫೫

**ಹ್ರೀಂಕಾರದುಗ್ಧಾಬ್ಧಿಸುಧಾ ಹ್ರೀಂಕಾರಕಮಲೇಂದಿರಾ ।**
**ಹ್ರೀಂಕಾರಮಣಿದೀಪಾರ್ಚಿರ್ಹ್ರೀಂಕಾರತರುಶಾರಿಕಾ ॥**

## ೩. ಓಂ ಹ್ರೀಂಕಾರದುಗ್ಧಾಬ್ಧಿಸುಧಾಯೈ ನಮಃ ।

**ಹ್ರೀಂಕಾರದುಗ್ಧಾಬ್ಧಿಸುಧಾ। ದೋಹಾನ್ನಿಷ್ಪನ್ನಂ ದುಗ್ಧಮ್। ಸ್ತನಗತಸ್ಯ ಪಯಸಃ ಸ್ವೀಯಂತಾಪಾದನಹಸ್ತಕ್ರಿಯಾವಿಶೇಷೋ ದೋಹಃ ಉಪಲಕ್ಷಣಂ ಚೋಷಣಾದೀನಾಮ್ । ತಥಾ ಚ ಪ್ರತೀಪಾಲಂಕಾರಃ ಸಿದ್ಧಃ, ಅನಂತೋದಕಪ್ರಸಾರಿತನಿಮ್ನಭೂಪ್ರದೇಶಃ ಅಬ್ಧಿರುಚ್ಯತೇ ಆಪಃ ಧೀಯಂತೇ ಆಸ್ಮಿನ್ನಿತಿ ತಥಾ । ತಸ್ಮಿನ್ ಸಂಜೀವಕತ್ವಂ ಧರ್ಮಃ ಡಿಂಭಕಸಂಜೀವನೇ ಸ್ತನ್ಯಾದೌ ದರ್ಶನಾತ್ । ಹ್ರೀಂಕಾರಸ್ಯಾಪಿ ಹಕಾರಯುಕ್ತತಯಾ ಶ್ವೇತವರ್ಣತ್ವಾದಮೃತಹೇತೋಶ್ಚ ತತ್ಸಾದೃಶ್ಯಮ್ । ತಸ್ಯ ಸುಧೇವ ಸುಧಾ ತದಭಿವ್ಯಕ್ತತ್ವಾವಿಶೇಷಾತ್**

---

೩. ದುಗ್ಧಾಬ್ಧಿಯಂತೆ ಇರುವ ಹ್ರೀಂಕಾರದಲ್ಲಿ ಅಮೃತದಂತೆ ಇರುವವಳು. ಸ್ತನದಲ್ಲಿರುವ ಸ್ತನ್ಯ ಕ್ಷೀರವನ್ನು ಸ್ವೀಯತ್ವವನ್ನುಂಟುಮಾಡುವ ಹಸ್ತಾದಿ ಕ್ರಿಯಾ–ಚೋಷಣಾದಿ ವಿಶೇಷವೆಂಬ ದೋಹದಿಂದ ವ್ಯಕ್ತವಾಗಿರುವುದು ದುಗ್ಧವು. ವಿಶಾಲವಾದ ಜಲರಾಶಿಯಿಂದ ಕೂಡಿದ ಭೂಮಿಯ ನಿಮ್ನಭಾಗವನ್ನು "ಆಪಃ ಧೀಯಂತೇ ಅಸ್ಮಿನ್" ಎಂಬ ವ್ಯುತ್ಪತ್ತಿಲಭ್ಯವಾದ ಅಪಾರ ಜಲಾಧಾರ ವೆಂಬ ಅಭಿಪ್ರಾಯದಿಂದ ಅಬ್ಧಿಯೆಂದು ಕರೆಯುವರು. ಅದರಲ್ಲಿ ಜಗತ್ಸಂಜೀವಕತ್ವವಿದೆ. ಶಿಶು ಸಂಜೀವಕವಾದ ಸ್ತನ್ಯವೆಂಬ ಸಮುದ್ರಕ್ಕೆ ಹ್ರೀಂಕಾರವು ಸಮಾನವಾಗಿರುವುದು. ಅಮೃತೋತ್ಪತ್ತಿಗೆ ಕಾರಣವಾದ ದುಗ್ಧಾಬ್ಧಿಯು ಶುಭ್ರವಾಗಿದೆ. ಹ್ರೀಂಕಾರವು ಅಂತಹ ಹಕಾರದಿಂದ ಕೂಡಿ ಶುಭ್ರವಾಗಿರುವುದು. ಅಮೃತವು ದುಗ್ಧಾಬ್ಧಿಯಲ್ಲಿ ಅಭಿವ್ಯಕ್ತಿಯನ್ನು ಹೊಂದುವಂತೆ ದೇವಿಯು ಹ್ರೀಂಕಾರದಲ್ಲಿ ಅಭಿವ್ಯಕ್ತಿ ಹೊಂದುವಳು. ಮತ್ತು ನಿತ್ಯರೂಪವಾದ ಅನೇಕ

ತತ್ಸೇವಕಾನಾಂ ನಿತ್ಯತ್ವೇ ಸತಿ ಬಹುವಿಧಮಹಿಮಶಾಲಿತಯಾ ದರ್ಶನಾದಿತಿ ಭಾವಃ ।

೪. ಓಂ ಹ್ರೀಂಕಾರಕಮಲೇಂದಿರಾಯೈ ನಮಃ।

ಹ್ರೀಂಕಾರಕಮಲೇಂದಿರಾ। ಹ್ರೀಂಕಾರಬೀಜಸ್ಯ ವಿಚಿತ್ರವರ್ಣತಯಾ ಪರಮಪ್ರೀತಿವಿಷಯತಯಾ ಚ ಕಮಲೋಪಮಾ । ತಸ್ಯ ವಾಚ್ಯಾರ್ಥತಯಾ ತದುಪರಿತನತ್ವೇನ ಸರ್ವಪುರುಷಾರ್ಥಪ್ರದಾತೃತ್ವಾಚ್ಚ ಕಮಲಶಬ್ದೇನಾಭಿಧೀಯತೇ। ತಸ್ಯಾಃ ಪದ್ಮಾಲಯತ್ವಾತ್ ಹ್ರೀಂಕಾರಕಮಲಸ್ಯ ಇಂದಿರಾ ತದಧೀನ ಬ್ರಹ್ಮವಿದ್ಯೇತ್ಯರ್ಥಃ।

೫. ಓಂ ಹ್ರೀಂಕಾರಮಣಿದೀಪಾರ್ಚಿಷೇ ನಮಃ ।

ಹ್ರೀಂಕಾರಮಣಿದೀಪಾರ್ಚಿಃ। ಆಧಿದೈವಿಕಾದ್ಯುಪದ್ರವಾನಭಿಭೂತತ್ವೇ ಸತಿ ಚಿರಕಾಲಾವಸ್ಥಾಯಿತ್ವಂ ಮಣಿ ದೀಪಸಾ

---

ಮಹಿಮೆಗಳಿಂದ ಪ್ರಕಾಶಿಸುವಳು. ದುಗ್ಧಸ್ಯ–ಅಬ್ಧಿಃ, ಹ್ರೀಂಕಾರಃ ದುಗ್ಧಾಬ್ಧಿರಿವ ತತ್ರ ಸುಧೇವ ಎಂದು ವಿಗ್ರಹವು.

೪. ಕಮಲದಂತೆ ಇರುವ ಹ್ರೀಂಕಾರದಲ್ಲಿ ಲಕ್ಷ್ಮೀದೇವಿಯಂತೆ ಇರುವವಳು. ಹ್ರೀಂಕಾರ ಬೀಜವರ್ಣವು ವಿಚಿತ್ರವರ್ಣಗಳಿಂದ ಕೂಡಿರುವುದೂ, ಪರಮಪ್ರೀತಿವಿಷಯವೂ ಆದ್ದರಿಂದ ಕಮಲಕ್ಕೆ ಹೋಲಿಸಬಹುದು. ದೇವಿಯು ಹ್ರೀಂಕಾರದ ವಾಚ್ಯಾರ್ಥರೂಪಳೂ ಸಕಲ ಪುರುಷಾರ್ಥಪ್ರದಳೂ ಆಗಿರುವಳು. ಲಕ್ಷ್ಮಿಯು ಪದ್ಮಾಲಯಳಾಗಿರುವುದರಿಂದ ಹ್ರೀಂಕಾರ ಕಮಲದಲ್ಲಿ ಲಕ್ಷ್ಮೀರೂಪದಿಂದ ಇರುವ ಹ್ರೀಂಕಾರಾಧೀನವಾದ ಬ್ರಹ್ಮವಿದ್ಯೆಯೆಂದು ತಾತ್ಪರ್ಯವು. ಹ್ರೀಂಕಾರಃ ಕಮಲಮಿವ, ತತ್ರ ಇಂದಿರೇವ ಎಂದು ವಿಗ್ರಹವು.

೫. ಮಣಿಮಯ ದೀಪದಂತೆ ಇರುವ ಹ್ರೀಂಕಾರದಲ್ಲಿ ಪ್ರಕಾಶ ಸದೃಶಳಾಗಿರುವವಳು. ವಾಯ್ವಾದ್ಯುಪದ್ರವವಿಲ್ಲದೆ ಬಹುಕಾಲ ಜ್ವಲಿಸುವ ಮಣಿದೀಪದ ಸಾಮ್ಯವನ್ನು ಆಧಿದೈವಿಕಾದಿ ಉಪದ್ರವಗಳಿಂದ ಬಾಧವಿಲ್ಲದೆ ಚಿರಕಾಲ

ದೃಶ್ಯಂ ಹ್ರೀಂಕಾರಸ್ಯ। ತಸ್ಯ ಪ್ರಕಾಶಃ ಅನಿತರಸಾಧಾರಣ ಮಹಾತಿಶಯವತ್ತ್ವೇನ ಅನರ್ಘತ್ವಮಾವೇದಯತಿ। ತದುಪಾಸಕಸ್ಯ ನಿರವಧಿಕಮಹತ್ತ್ವಸಾದಕಹ್ರೀಂಕಾರವಾಚ್ಯತಯಾ ತತ್ಪ್ರಕಾಶಕೇತ್ಯರ್ಥಃ। ತಥಾ ಚ ನಿರಂತರತಮೋಽಪಕರಣೇನ ಚ ಸುಖಯತೀತಿ ಫಲಿತೋಽರ್ಥಃ।

೬. ಓಂ ಹ್ರೀಂಕಾರತರುಶಾರಿಕಾಯೈ ನಮಃ।

ಹ್ರೀಂಕಾರತರುಶಾರಿಕಾ। ತಾರಯತಿ ಫಲಾರ್ಥಿನಃ ಸ್ವಾರೂಢಾನ್, ಪತನಾದೇ ರಕ್ಷತೀತಿ ತರುಃ। ತಸ್ಯ ಶಾರಿಕಾ ಪಿಂಗತುಂಡನೇತ್ರಚರಣಾ ಶಾರಿಕಾ ಅಭ್ಯಾಸಾತಿಶಯೇನ ಮನುಷ್ಯಭಾಷಾಯಾಮಪಿ ಭಾಷತೇ ಭೂತಭವಿಷ್ಯದ್ವರ್ತಮಾನಲೋಕ

---

ಪ್ರತಿಷ್ಠಿತವಾದ ಹ್ರೀಂಕಾರದಲ್ಲಿ ವರ್ಣಿಸಿದೆ, ಅಲ್ಲಿರುವ ಪ್ರಕಾಶವು ಇತರ ಸಾಧಾರಣವಲ್ಲದ ಮಹಿಮಾತಿಶಯದಿಂದ ಅನರ್ಘತ್ವವನ್ನು ಸೂಚಿಸುವುದು. ಉಪಾಸಕನಿಗೆ ನಿರವಧಿಕವಾದ ಮಹತ್ತ್ವವನ್ನು ಉಂಟುಮಾಡುವ ಹ್ರೀಂ ಕಾರಕ್ಕೆ ವಾಚ್ಯಳಾಗಿರುವುದರಿಂದ ಅದನ್ನು ಪ್ರಕಾಶಪಡಿಸುವ ಪ್ರಕಾಶಸ್ವರೂಪಳೆಂದು ತಿಳಿಯುವುದು. ಇದರಿಂದ ನಿರಂತರವಾದ ತಪಸ್ಸನ್ನು ಧ್ವಂಸಮಾಡುವುದರಿಂದಲೂ ಇಷ್ಟ ಪದಾರ್ಥವನ್ನು ಪ್ರಕಾಶಪಡಿಸುವುದರಿಂದಲೂ ಸುಖಸಾಧನಳಾದವಳೆಂದು ತಾತ್ಪರ್ಯವು. ಹ್ರೀಂಕಾರಃ ಮಣಿದೀಪ ಇವ ತತ್ರ ಅರ್ಚಿರಿವ ಎಂದು ವಿಗ್ರಹವು.

೬. ವೃಕ್ಷದಂತೆ ಇರುವ ಹ್ರೀಂಕಾರಕ್ಕೆ ಶಾರಿಕೆಯಂತೆ ಇರುವವಳು. ಫಲಾರ್ಥಿಗಳಾಗಿ ಸ್ವಾರೂಢಜನರನ್ನು ಪತನಾದಿಗಳಿಂದ ರಕ್ಷಿಸುವುದರಿಂದ “ತಾರಯತಿ” ಎಂಬ ಅರ್ಥಸಾಂಗತ್ಯದಿಂದ ವೃಕ್ಷವು ತರು ಎಂದು ಕರೆಯಲ್ಪಡುವುದು. ಹ್ರೀಂ ಕಾರವು ತಾರಕವಾದ್ದರಿಂದ ವೃಕ್ಷ ಸಾಮ್ಯವನ್ನು ಹೊಂದಿಕೊಂಡಿರುವುದು. ವೃಕ್ಷದಲ್ಲಿ ನೇತ್ರ–ಮುಖ–ಪಾದಗಳಲ್ಲಿ ಪಿಂಗವರ್ಣದಿಂದ ಕೂಡಿದ ಶಾರಿಕಾ ಎಂಬ ಪಕ್ಷಿಯು ರಮ್ಯವಾಗಿ ಅತಿಶಯವಾದ ಅಭ್ಯಾಸದಿಂದ ಮನುಷ್ಯ ಭಾಷೆಯಿಂದ ವ್ಯವಹರಿಸುತ್ತಿರುವುದು. ಮತ್ತು ಸ್ವಭಾಷೆಯಿಂದ ಭೂತ ಭವಿಷ್ಯತ್ ವರ್ತಮಾನವೆಂಬ ಕಾಲತ್ರಯದ ಲೋಕಯಾತ್ರೆಯನ್ನು ಅರಿತು

**ಯಾತ್ರಾಪರಿಜ್ಞಾತ್ರೀ ಸತೀ ಶುಭಾಶುಭಫಲಪ್ರಾಪ್ತಿಂ ಚ ಸ್ವಭಾಷಯಾ ವದತಿ। ಅಸ್ಯ ಬೀಜಸ್ಯ ವಾಚ್ಯಾರ್ಥತಯಾ ತತ್ಸಂಬಂಧಿನೀ ಸತೀ ವೇದವಾಚಾ ಸರ್ವಂ ಪ್ರಕಾಶಯತೀತ್ಯರ್ಥಃ।**

---

ಶುಭಾಶುಭಫಲಗಳನ್ನು ಸೂಚಿಸುವುದು. ಹಾಗೆಯೇ ಹ್ರೀಂಕಾರವೆಂಬ ಬೀಜಾಕ್ಷರಕ್ಕೆ ವಾಚ್ಯಾರ್ಥರೂಪಳಾದುದರಿಂದ ಹ್ರೀಂಕಾರ ಸಂಬಂಧಿನಿಯಾಗಿರುವ ದೇವಿಯು ವೇದವಾಕ್ಯದಿಂದ ಕಾಲತ್ರಯದ ಅರ್ಥವನ್ನು ಪ್ರಕಾಶಪಡಿಸ್ಯವಳು, ಎಂದು ಭಾವವು. ಹ್ರೀಂಕಾರಸ್ತುರುರಿವ, ತತ್ರ ಶಾರಿಕೇವ ಎಂದು ವಿಗ್ರಹವು.



೫೬

ಹ್ರೀಂಕಾರಪೇಟಕಮಣಿರ್ಹ್ರೀಂಕಾರಾದರ್ಶಬಿಂಬಿತಾ ।
ಹ್ರೀಂಕಾರಕೋಶಾಸಿಲತಾ ಹ್ರೀಂಕಾರಾಸ್ಥಾನನರ್ತಕೀ ॥

೭. ಓಂ ಹ್ರೀಂಕಾರಪೇಟಕಮಣಯೇ ನಮಃ ।

ಹ್ರೀಂಕಾರಪೇಟಕಮಣಿಃ। ಗೂಹನಸಾಧನತಯಾ ಹ್ರೀಂ ಕಾರಃ ಪೇಟಕೇನ ದೃಷ್ಟಾಂತೀಕ್ರಿಯತೇ। ತಸ್ಯ ಮಣಿಃ ವೈಡೂರ್ಯಮಿತ್ಯರ್ಥಃ। ಯಥಾ ಹೀರಾದಿಮಣಿಃ ಪೇಟಿಕಾದೌ ಗೋಪಿತೋಽಪಿ ಸ್ವಕಾಂತ್ಯಾ ಬಾಹ್ಯಾಭ್ಯಂತರಂ ತಸ್ಯ ಪ್ರಕಾಶಯನ್ನಿತರಪೇಟಿಕೇಭ್ಯಃ ತಂ ವ್ಯಾವರ್ತಯತಿ ತಥೇದಮಪಿ ಬೀಜಂ ಸ್ವವಾಚಕತಯೇತರವರ್ಣೇಭ್ಯಃ ನಿರತಿಶಯಮಹಿಮ್ನಾ ಭೇದಯತೀತಿ ಭಾವಃ।

೮. ಓಂ ಹ್ರೀಂಕಾರಾದರ್ಶಬಿಂಬಿತಾಯೈ ನಮಃ ।

ಹ್ರೀಂಕಾರಾದರ್ಶಬಿಂಬಿತಾ। ಅಸ್ಯ ಬೀಜಸ್ಯ ಇತರಪ್ರಮಾಣಾ

---

೭. ಪೇಟಿಕೆಯಂತೆ ಇರುವ ಹ್ರೀಂಕಾರಕ್ಕೆ ಮಣಿಯಂತೆ ಇರುವವಳು. ರಹಸ್ಯಾಮೂಲ್ಯವಸ್ತುಗಳನ್ನು ಗೋಪನ ಮಾಡಲು ಸಾಧನವಾದ್ದರಿಂದ ಹ್ರೀಂಕಾರವನ್ನು ಪೇಟಿಕೆಯೊಡನೆ ಹೋಲಿಸಿದೆ. ಪೇಟಿಕೆಯಲ್ಲಿ ಗೋಪನ ಮಾಡಲ್ಪಟ್ಟ ಹೀರಾದಿಮಣಿಯು ತನ್ನ ಕಾಂತಿಯಿಂದ ಬಾಹ್ಯಾಭ್ಯಂತರಗಳನ್ನು ಪ್ರಕಾಶಪಡಿಸುತ್ತ ಇತರ ಪೇಟಿಕೆಗಳಿಗಿಂತ ತನಗೆ ಆಶ್ರಯವಾದ ಪೇಟಿಕೆಯನ್ನು ವ್ಯಾವೃತ್ತಿ ಮಾಡುವುದು. ಅದರಂತೆ ಹ್ರೀಂಕಾರವೆಂಬ ಬೀಜವು ದೇವೀವಾಚಕವಾದ್ದರಿಂದ ನಿರತಿಶಯ ಮಹಿಮೆಯಿಂದ ಇತರ ವರ್ಣಗಳಿಂದ ವ್ಯಾವೃತ್ತಿಯನ್ನು ತೋರಿಸುವುದು. ಹ್ರೀಂಕಾರಃ ಪೇಟಕಮಿವ, ತಸ್ಯ ಮಣಿಃ ಎಂದು ವಿಗ್ರಹವು.

೮. (ಆದರ್ಶ) ಕನ್ನಡಿಯಂತಿರುವ ಹ್ರೀಂ ಕಾರದಲ್ಲಿ ಬಿಂಬಿಸಿದವಳು. ಇತರ ಪ್ರಮಾಣಾನಪೇಕ್ಷವಾದ ವೇದಾಂತರ್ಗತವಾಗಿ ನಿರ್ದೋಷವಾದ್ದರಿಂದ

ನಪೇಕ್ಷವೇದಾಂತರ್ಗತತಯಾ ನಿರ್ದೋಷತ್ವಾದಾದರ್ಶ ಸಾಮ್ಯಂ ತಸ್ಮಿನ್ ಬಿಂಬಿತಾ ಪ್ರತಿಬಿಂಬಿತಾ, ಮಾಯಾಪ್ರತಿ ಬಿಂಬಿತಚೈತನ್ಯಸ್ಯೈವ ಜಗತ್ಕಾರಣತಯಾ ಸರ್ವತ್ರ ದರ್ಪಣೇ ಮುಖಮಿವ ಪ್ರತಿಫಲತೀತಿ ತಾತ್ಪರ್ಯಾರ್ಥಃ ।

೯. ಓಂ ಹ್ರೀಂಕಾರಕೋಶಾಸಿಲತಾಯೈ ನಮಃ ।

ಹ್ರೀಂಕಾರಕೋಶಾಸಿಲತಾ । ಹ್ರೀಂಕಾರ ಏವ ಕೋಶಃ ತಸ್ಯಾ ಸಿಲತಾ ಅತಿದೀರ್ಘಖಡ್ಗಮಿತ್ಯರ್ಥಃ । ಸರ್ವವೈರ್ಯಾದಿಜನ್ಯ ದುಃಖನಿವರ್ತಕತ್ವಮಸಿಲತಾಯಾ ಇವ ಪರದೇವತಾಯಾ ಅಪಿ । ತಥಾತ್ವೇನ ಬಹಿಃಪ್ರಕಟನಾಯೋಗ್ಯತಾಸಾದೃಶ್ಯೇನ ಆಚ್ಛಾದಕಾಪೇಕ್ಷಯಾ ಹ್ರೀಂಕಾರಸ್ಯ ವಾಚಕಶಬ್ದತಯಾ ಅರ್ಥಾವಾರಕತ್ವಾತ್ ಸ್ವಪಮ್ಯಾದಸಿಕೋಶತುಲ್ಯತಾ । ತಥಾ ಚ ಹ್ರೀಂಕಾರಕೋಶೇ ವಿದ್ಯಮಾನಾ ಅಸಿಲತೇವ ದುಃಖನಿವಾರ ಕತ್ವೇ ಸತಿ ಭಕ್ತಾಭಯಕರೀತಿ ಭಾವಃ । ಸರ್ವೇಷಾಮಾಯುಧ

---

ಹ್ರೀಂಕಾರಕ್ಕೆ ಆದರ್ಶದ ಸಾಮ್ಯವು. ಮಾಯಾ ಪ್ರತಿಬಿಂಬ ಚೈತನ್ಯವು ಜಗತ್ಕಾರಣವಾದ್ದರಿಂದ ಮುಖವು ದರ್ಪಣದಲ್ಲಿ ಪ್ರತಿಬಿಂಬಿಸಿದಂತೆ ಸರ್ವಕಾರ್ಯವಸ್ತು ದರ್ಪಣಗಳಲ್ಲಿ ಪ್ರತಿಬಿಂಬಿಸುವುದು ಎಂದು ತಾತ್ಪರ್ಯವು. ಹ್ರೀಂಕಾರಃ ಆದರ್ಶ ಇವ, ತಸ್ಮಿನ್ ಬಿಂಬಿತಾ ಎಂದು ವಿಗ್ರಹವು.

೯. ಹ್ರೀಂಕಾರವೆಂಬ ಕೋಶಕ್ಕೆ ಖಡ್ಗಲತೆಯಂತೆ ಇರುವವಳು. ಖಡ್ಗವು ಸಕಲ ಶತ್ರು ಜನಗಳಿಂದ ಉಂಟಾಗುವ ದುಃಖಕ್ಕೆ ನಿವರ್ತಕವಾಗುವುದು. ಪರದೇವತೆಯೂ ಸರ್ವದುಃಖನಿವಾರಕಳಾಗಿರುವುದು ಸಹಜವು. ಖಡ್ಗವು ಬಹಿಃ ಪ್ರಕಟನಕ್ಕೆ ಅಯೋಗ್ಯವಾಗಿ ಕೋಶವೆಂಬ ಆಚ್ಛಾದಕವನ್ನು ಅಪೇಕ್ಷಿಸುವುದು. ಹಾಗೆ ಪರದೇವತೆಗೆ ವಾಚಕ ಶಬ್ದರೂಪದಿಂದ ಅರ್ಥವನ್ನು ಆವರಣ ಮಾಡುವ ಶೀಲವುಳ್ಳ ಹ್ರೀಂಕಾರವು ಪರದೇವತೆಯ ಕೋಶದಂತಿರುವುದು. ಪರದೇವತೆಯು ಹ್ರೀಂಕಾರ ಕೋಶದಲ್ಲಿ ಅಂತರ್ಗತವಾದ ಅಸಿಲತೆಯಂತೆ ದುಃಖನಿವಾರಣಪೂರ್ವಕವಾಗಿ ಭಕ್ತರಿಗೆ ಅಭಯವನ್ನುಂಟುಮಾಡು

ವಿಶೇಷಾಣಾಂ ಅಸಿಪದಮುಪಲಕ್ಷಣಮ್। "ಮಹದ್ಭಯಂ ವಜ್ರಮುದ್ಯತಂ, ಭೀಷಾಸ್ಮಾದ್ವಾತಃ ಪವತೇ" ಇತ್ಯಾದಿ ಶ್ರುತೇಃ।

## ೧೦. ಓಂ ಹ್ರೀಂಕಾರಾಸ್ಥಾನನರ್ತಕ್ಯೈ ನಮಃ

ಹ್ರೀಂಕಾರಾಸ್ಥಾನನರ್ತಕೀ। ಹ್ರೀಂಕಾರ ಏವಾಸ್ಥಾನಂ ಸಭಾ ಮಂಡಪಃ ಸರ್ವಾಶ್ರಯತ್ವಾತ್। ತಸ್ಯ ನರ್ತಕೀ ನಟನಸಂಬಂಧಭೂಸಂಯೋಗಚರಣವಿನ್ಯಾಸೋಪಲಕ್ಷಿತತಾಲಾನುಸಾರಿಹಸ್ತಾದ್ಯಂಗಚೇಷ್ಟಾ ನರ್ತನಂ, ತತ್ಕರ್ತ್ರೀ ನರ್ತಕೀ। ಹ್ರೀಂಕಾರವಾಚ್ಯಾರ್ಥತಯಾ ಮಾಯಾದಿಸಂಬಂಧಾಸಂಬಂಧನಿಮಿತ್ತಕವಿಚಿತ್ರತರಕಾರ್ಯೋತ್ಪಾದನವ್ಯಾಪಾರಾನುಕಾರವಿ-ಕಾರ್ಯವಿಕಾರಿಸ್ವರೂಪವತ್ತಯಾ ದ್ರಷ್ಟೃಲೋಕಮನೋವೃ

---

ವವಳೆಂದು ತಾತ್ಪರ್ಯವು ಅಸಿಲತೆಯೆಂಬುದು ಸರ್ವಾಯುಧಗಳಿಗೆ ಉಪಲಕ್ಷಣವು. ಆಯುಧ ಸಾಮ್ಯವನ್ನು ದೇವಿಯಲ್ಲಿ "ಮಹದ್ಭಯಂ ವಜ್ರಮುದ್ಯತಮ್, ಭೀಷಾಸ್ಮಾದ್ವಾತಃ ಪವತೇ" ಮುಂತಾದ ಶ್ರುತಿಯಲ್ಲಿ ವರ್ಣಿಸಿದೆ. ಹ್ರೀಂಕಾರ ಏವ ಕೋಶಃ ತತ್ರ ಅಸಿಲತಾ ಎಂದು ವಿಗ್ರಹವು.

೧೦. ಹ್ರೀಂಕಾರವೆಂಬ ಆಸ್ಥಾನ ಸಭೆಯಲ್ಲಿ ನರ್ತಕಿಯು. ಸರ್ವಾಶ್ರಯವಾದ್ದರಿಂದ ಹ್ರೀಂಕಾರವು ಆಸ್ಥಾನರೂಪದಿಂದ ವರ್ಣಿಸಲ್ಪಟ್ಟಿದೆ. ಭೂಮಿಯಲ್ಲಿ ಚರಣನ್ಯಾಸ, ತಾಲಾದ್ಯನುಸರಣ, ಹಸ್ತಾದ್ಯಭಿನಯ ಪೂರ್ವಕವಾದ ನಟನಕ್ರಿಯೆಯನ್ನು ನರ್ತನವೆಂದು ಕರೆಯುವರು. ನರ್ತನವನ್ನು ಆಚರಿಸುವವಳು ನರ್ತಕಿಯು. ದೇವಿಯು ಹ್ರೀಂ ಬೀಜವರ್ಣ ವಾಚ್ಯಳಾಗಿ ಮಾಯಾ ಸಂಬಂಧ–ಅಸಂಬಂಧಗಳಿಂದ ವಿಚಿತ್ರವಾದ ಕಾರ್ಯೋತ್ಪಾದನ ವ್ಯಾಪಾರಾನುಕರಣದಿಂದ ವಿಕಾರ್ಯ–ವಿಕಾರಿ ವಸ್ತು ಸ್ವರೂಪವನ್ನು ಸ್ವೀಕರಿಸುವುದರಿಂದಲೂ ದ್ರಷ್ಟೃಜನರ ಮನೋವೃತ್ತಿಯ ಭೇದದಿಂದ ತೀವ್ರ–ಮಂದ–ಮಂದತರ ಪ್ರೀತಿಯೆಂಬ ಭಕ್ತಿಗೆ ವಿಷಯವಾಗುವುದರಿಂದಲೂ ಮತ್ತು ಅಭಿವ್ಯಕ್ತ–ಅನಭಿವ್ಯಕ್ತ ಇಷ್ಟಫಲಗಳಿಗೆ ಸಾಧನಳಾದ್ದರಿಂದಲೂ ಸ್ವಕೀಯ ಪುಣ್ಯಾದಿ ತಾರತ

ತ್ರಿಭೇದೇನ ತೀವ್ರಮಂದಮಂದತರಪ್ರೀತಿರೂಪಭಕ್ತಿವಿಷಯ ತಯಾಭಿವ್ಯಕ್ತಾನಭಿವ್ಯಕ್ತೇಷ್ಟಫಲಸಾಧನತಯಾ ಸ್ವಕೀಯಪು ಣ್ಯಾದಿತಾರತಮ್ಯೇನ ಬುದ್ಧಿಶುದ್ಧಿಭೇದಾತ್ಪ್ರತಿಭಾತೀತ್ಯರ್ಥಃ ॥

---

ಮ್ಯದಿಂದ ಚಿತ್ತಶುದ್ಧಿಯನ್ನು ಅನುಸರಿಸಿ ನರ್ತಕಿಯಂತೆ ತೋರುವಳು ಎಂದು ತಾತ್ಪರ್ಯವು. ಹ್ರೀಂಕಾರ ಏವಾಸ್ಥಾನಂ ತಸ್ಯ ನರ್ತಕೀ ಎಂದು ವಿಗ್ರಹವು.

## ೫೭

**ಹ್ರೀಂಕಾರಶುಕ್ತಿಕಾಮುಕ್ತಾಮಣಿರ್ಹ್ರೀಂಕಾರಬೋಧಿತಾ**
**ಹ್ರೀಂಕಾರಮಯಸೌವರ್ಣಸ್ತಂಭವಿದ್ರುಮಪುತ್ರಿಕಾ ॥**

### ೧೧. ಹ್ರೀಂಕಾರಶುಕ್ತಿಕಾಮುಕ್ತಾಮಣಯೇ ನಮಃ

ಹ್ರೀಂಕಾರಶುಕ್ತಿಕಾಮುಕ್ತಾಮಣಿಃ । ಹ್ರೀಂಕಾರ ಏವ ಶುಕ್ತಿಕಾ ನೀಲಪೃಷ್ಠತ್ರಿಕೋಣಾಕಾರಾ, ತಸ್ಯಾಃ ಮುಕ್ತಿಕೇವ ಮುಕ್ತಾಫಲಮಿವಾಭಿವ್ಯಜ್ಯಮಾನಾ-ಯಥಾ ಸ್ವಾತೀಮಹಾನಕ್ಷತ್ರೇ ಸರ್ವದೇಶೇಷು ಮೇಘಸಂಘಾತ್ ಪತಜ್ಜಲಬಿಂದುಃ ಶುಕ್ತಿಕಾಂತಃ ಪತಿತಃ ಸಮುದ್ರದೇಶವಿಶೇಷೇ ಮುಕ್ತಾಕಾರೇಣ ಪರಿಣಮತೇ, ತಥಾ ಸತ್ತ್ವರಜಸ್ತಮೋಗುಣಾತ್ಮಕ ಹ್ರೀಂ ಬೀಜಾವಚ್ಛೇದೇನ ಮನೋಹರವಾಚಾಮಗೋಚರ ಸುಂದರತರಪರದೇವತಾಮೂರ್ತ್ಯಾ ಸರ್ವಗತಮಪಿ ಚೈತನ್ಯಂ ವಿಶಿಷ್ಯಾಭಿವ್ಯಜ್ಯತೇ । ತಥಾ ಚ ಮೌಕ್ತಿಕಾರ್ಥಿನಾಂ ಶುಕ್ತ್ಯು

---

೧೧. ಹ್ರೀಂಕಾರವೆಂಬ ಚಿಪ್ಪಿಗೆ ಮುಕ್ತಾಮಣಿಪ್ರಾಯಳು. ಶುಕ್ತಿಯೆಂದರೆ ನೀಲವರ್ಣದ ಪೃಷ್ಠಭಾಗದಿಂದ ಕೂಡಿದ ಆಕಾರವುಳ್ಳ ಚಿಪ್ಪು. ಅಲ್ಲಿ ಮುತ್ತು ಅಭಿವ್ಯಕ್ತವಾಗುವುದು. ಸ್ವಾತೀ ಮಹಾನಕ್ಷತ್ರದಲ್ಲಿ ಸಕಲದೇಶಗಳಲ್ಲಿ ಮೇಘದಿಂದ ಕೆಳಕ್ಕೆ ಬೀಳುವ ಜಲಬಿಂದುವು ಆಕಸ್ಮಿಕವಾಗಿ ಸಮುದ್ರದಲ್ಲಿರುವ ಶುಕ್ತಿಯ ಮಧ್ಯದಲ್ಲಿ ಬಿದ್ದರೆ ಅದು ಮುತ್ತಿನ ರೂಪವಾಗಿ ಪರಿಣಮಿಸುವುದು. ಹಾಗೆ ಸರ್ವಗತವಾದ ಶುದ್ಧಚೈತನ್ಯವು ಸತ್ತ್ವಾದಿ ಗುಣತ್ರಯ ಸಮಷ್ಟಿರೂಪವಾದ ಹ್ರೀಂಕಾರದ ಸಂಬಂಧದಿಂದ ಮನೋಹರವೂ, ವಾಚಾಮಗೋಚರವೂ ಮತ್ತು ಸುಂದರವೂ ಆದ ಪರದೇವತಾಮೂರ್ತಿ ರೂಪದಿಂದ ಅಭಿವ್ಯಕ್ತವಾಗುವುದು. ಆದ್ದರಿಂದ ಮುಕ್ತಾಫಲಾರ್ಥಿಗಳಿಗೆ ಶುಕ್ತಿಯ ಉಪಾದಾನವು ಆವಶ್ಯಕವಾಗಿರುವಂತೆ ಪರದೇವತಾ ಸಾಕ್ಷಾತ್ಕಾರವನ್ನು ಕಾಂಕ್ಷಿಸು

ಪಾದಾನವತ್ ಪರದೇವತಾಸಾಕ್ಷಾತ್ಕಾರೇಪ್ಸೂನಾಂ ಹ್ರೀಂಕಾ ರೋಪಾದಾನಮಾವಶ್ಯಕಮಿತಿ ಭಾವಃ ।

## ೧೨. ಓಂ ಹ್ರೀಂಕಾರಬೋಧಿತಾಯೈ ನಮಃ

ಹ್ರೀಂಕಾರಬೋಧಿತಾ । ಸಿದ್ಧೇ ಪದಾರ್ಥೇ ಇಂದ್ರಿಯಾದಿ ಸಂಬಂಧೇ ಸತಿ ಸ್ವತ ಏವ ಜ್ಞಾನೋತ್ಪತ್ತಿದರ್ಶನಾನ್ನ ಜ್ಞಾನೇ ವಿಧಿರಪೇಕ್ಷಿತಃ ಕ್ರಿಯಾಫಲತ್ವಾಭಾವಾತ್ । ತರ್ಹಿ ನಿತ್ಯಾ ಪರೋಕ್ಷಧರ್ಮಾದಿಜ್ಞಾನವತ್ ಶುದ್ಧಬ್ರಹ್ಮಾಭೇದಃ ವೇದೈ ಕದೇಶಹ್ರೀಂಕಾರೇಣೈವ ಬೋಧ್ಯತೇ, ಅಜ್ಞಾತಜ್ಞಾಪಕತ್ವೇನ ವೇದಸ್ಯ ಸ್ವತಃ ಪ್ರಾಮಾಣ್ಯಾಭ್ಯುಪಗಮಾತ್, ಪರಚೈತನ್ಯಸ್ಯ ಚ ಜ್ಞಾಯಮಾನಸ್ಯ ಪರಮಾನಂದರೂಪತಯಾ ಪುರುಷಾ ರ್ಥರೂಪತ್ವಾತ್ । ಅತಃ ಹ್ರೀಂಕಾರೇಣೈವ ಮೂಲಮಂತ್ರಾ ತ್ಮನಾ ಬೋಧಿತಾ ಜ್ಞಾಪಿತಾ । ಹಕಾರರೇಫೇಕಾರಾಣಾಂ ವ್ಯಸ್ತತ್ವದಶಾಯಾಂ ಭಿನ್ನಭಿನ್ನಾರ್ಥಕಾನಾಂ ಮೇಲನೇ ಹ್ರೀಂ ಕಾರಾತ್ಮನಾ ಪರಿಣಾಮೋ ಸಚ್ಚಿದಾನಂದಸ್ವರೂಪಶ್ರೀತ್ರಿಪುರ

---

ವವರಿಗೆ ಹ್ರೀಂಕಾರೋಪಾಸನೆಯು ಆವಶ್ಯಕವು, ಎಂದು ಭಾವವು. ಹ್ರೀಂಕಾರ ಏವ ಶುಕ್ತಿಕಾ, ತಸ್ಯಾ ಮುಕ್ತಾಮಣಿಃ ಎಂದು ವಿಗ್ರಹವು.

೧೨. ಹ್ರೀಂಕಾರದಿಂದ ಬೋಧಿಸಲ್ಪಟ್ಟವಳು. ಸಿದ್ಧವಸ್ತುವಿನಲ್ಲಿ ಇಂದ್ರಿಯಾದಿ ಪ್ರಮಾಣಗಳ ಸಂಬಂಧದಿಂದ ತಾನಾಗಿ ಜ್ಞಾನವು ಜನಿಸುವುದರಿಂದ ಜ್ಞಾನವನ್ನು ಮಾತ್ರ ವಿಧಿಸಬೇಕಾಗುವುದಿಲ್ಲ. ಕ್ರಿಯೆಯ ಫಲವು ಮಾತ್ರ ವಿಧಾನಕ್ಕೆ ಯೋಗ್ಯವು. ಆದ್ದರಿಂದ ನಿತ್ಯಾಪರೋಕ್ಷ ಧರ್ಮಜ್ಞಾನದಂತೆ ವೇದೈಕದೇಶವಾದ ಹ್ರೀಂಕಾರದಿಂದ ಶುದ್ಧಬ್ರಹ್ಮಾಭೇದವು ಬೋಧಿಸಲ್ಪಡುವುದು. ಸ್ವವಿಷಯದಲ್ಲಿ ವೇದವು ಅಜ್ಞಾತಜ್ಞಾಪಕವೂ ಸ್ವತಃ ಪ್ರಮಾಣವೂ ಆಗಿದೆ. ಅದರಿಂದ ಬೋಧ್ಯವಾದ ಪರಚೈತನ್ಯವು ಜ್ಞಾನ ವಿಷಯವಾದ ಪರಮಾನಂದರೂಪವಾದ್ದರಿಂದ ಪುರುಷಾರ್ಥರೂಪವಾದುದು. ಆದ್ದರಿಂದ ಮೂಲಮಂತ್ರ ಸ್ವರೂಪವಾದ ಹ್ರೀಂಕಾರದಿಂದ ದೇವಿಯು ಬೋಧಿಸಲ್ಪಟ್ಟಿರುವಳು.

ಸುಂದರ್ಯಾಃ ತದರ್ಥತ್ವೇನಾದ್ವೈತಸ್ವರೂಪತಯಾ ಪ್ರತಿ ಭಾನಾತ್ । "ನಾನ್ಯೋಽತೋಽಸ್ತಿ ದ್ರಷ್ಟಾ, ಇದಂ ಸರ್ವಂ ಯದಯಮಾತ್ಮಾ, ಏಕ ಏವ ತು ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾ ಚೈವ ದೃಶ್ಯತೇ ಜಲ ಚಂದ್ರವತ್" ಇತ್ಯಾದಿಶ್ರುತೇಃ । "ಆತ್ಮಾ ವಾ ಅರೇ ದ್ರ ಷ್ಟವ್ಯಃ, ತದ್ವಿಜಿಜ್ಞಾಸಸ್ವ, ಆತ್ಮಾನಂ ಪಶ್ಯೇತ್" ಇತ್ಯಾದಿ ಲಿಙ್‌ಲೋಟ್‌ತವ್ಯಪ್ರತ್ಯಯಾನಾಮರ್ಹಾರ್ಥಕತಯಾ ನ ವಿಧಿತ್ವಮಿತಿ ಸಿದ್ಧಾಂತಃ ।

೧೩. ಓಂ ಹ್ರೀಂಕಾರಮಯಸೌವರ್ಣಸ್ತಂಭವಿದ್ರುಮ ಪುತ್ರಿಕಾಯೈ ನಮಃ

ಹ್ರೀಂಕಾರಮಯಸೌವರ್ಣಸ್ತಂಭವಿದ್ರುಮಪುತ್ರಿಕಾ । ಪಿಂಗ ಲಪೃಥ್ವೀರೇಣುಃ ಸುವರ್ಣಮಿತ್ಯುಚ್ಯತೇ । ಅನುಚ್ಛಿದ್ಯಮಾನ

---

ಹ + ರ + ಈ ಕಾರಗಳು ವ್ಯಸ್ತವಾಗಿರುವಾಗ ಭಿನ್ನಭಿನ್ನಾರ್ಥಗಳಿಗೆ ವಾಚಕ ಗಳಾಗಿದ್ದರೂ ಮೇಳನದಿಂದ "ಹ್ರೀಂ" ರೂಪವಾಗಿ ಪರಿಣಮಿಸಿ ಸಚ್ಚಿದಾ ನಂದಸ್ವರೂಪಳಾದ ಮಹಾತ್ರಿಪುರಸುಂದರೀ ದೇವತೆಯನ್ನು ಬೋಧಿಸಲು ಅರ್ಹವಾಗಿವೆ. ಆ ದೇವಿಯನ್ನು ಅದ್ವೈತ ರೂಪದಿಂದ ಬೋಧಿಸುವುದು. ಅದ್ವೈತ ಬ್ರಹ್ಮಸ್ವರೂಪವನ್ನು ಪಾರಮಾರ್ಥಿಕ ತತ್ತ್ವವೆಂದು "ನಾನ್ಯೋಽತೋಽ ಸ್ತಿ ದ್ರಷ್ಟಾ, ಇದಂ ಸರ್ವಂ ಯದಯಮಾತ್ಮಾ, ಏಕ ಏವ ತು ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರ ವತ್" ಮುಂತಾದ ಬಹು ಶ್ರುತಿವಚನಗಳು ಹೇಳುವುವು. "ಆತ್ಮಾ ವಾ ಅರೇ ದ್ರಷ್ಟವ್ಯಃ, ತದ್ವಿಜಿಜ್ಞಾಸಸ್ವ, ಆತ್ಮಾನಂ ಪಶ್ಯೇತ್" ಮುಂತಾದ ವಾಕ್ಯ ಗಳಲ್ಲಿ ವಿಧಿಯನ್ನು ಬೋಧಿಸುವ ಲಿಙ್-ಲೋಟ್-ತವ್ಯ ಮುಂತಾದ ಪ್ರತ್ಯ ಯಗಳು ವಿಧ್ಯರ್ಥಕ್ಕೆ ಬಾಧವಿರುವುದರಿಂದ ದ್ರಷ್ಟವ್ಯ ದರ್ಶನಾರ್ಹ ಎಂದು ಅರ್ಹಾರ್ಥವನ್ನು ಬೋಧಿಸಿ ಕೃತಾರ್ಥವಾಗುವುವು. ಹ್ರೀಂಕಾರೇಣ ಬೋಧಿತಾ ಎಂದು ವಿಗ್ರಹವು.

೧೩. ಹ್ರೀಂಕಾರವೆಂಬ ಸುವರ್ಣಸ್ತಂಭಕ್ಕೆ ಹವಳದ ಪ್ರತಿಕೃತಿಯಾಗಿರು ವವಳು. ಹೊಂಬಣ್ಣದ ಪೃಥಿವಿಯ ರೇಣುವು ಸುವರ್ಣವು. ಇದು ಪೃಥಿವೀ

**ದ್ರವತ್ವಸ್ಯ ನೈಮಿತ್ತಿಕತ್ವೇಽಪಿ ತೈಜಸಾಂತರೇ ಪ್ರದೀಪಪ್ರಭಾದಾವದರ್ಶನಾತ್ । ಪದಾರ್ಥಾಂತರಸಂಯೋಗೇ ರಜತಾದಿವದತಿತೇಜಃಸಂಯೋಗಾತ್ ಭಸ್ಮಭಾವಾಪತ್ತೇಶ್ಚ। ಹೀರಮುಣೌ ಲೋಹಲೇಖ್ಯತ್ವಾಭಾವವತ್ತ್ವೇಽಪಿ ಪಾರ್ಥಿವತ್ವವದತ್ರ ಪಾರ್ಥಿವತ್ವೇ ಬಾಧಾಭಾವಾತ್ ದ್ರವತ್ವಸ್ಯೋದಕಸ್ವಭಾವತ್ವೇನ ತತ್ಕಾರ್ಯಪೃಥಿವ್ಯಾಮಪಿ ಉಪಲಂಭೋಪಪತ್ತೇಶ್ಚ । ತದ್ವಿಕಾರಃ ಸೌವರ್ಣಶ್ಚಾಸೌ ಸ್ತಂಭಶ್ಚ । ಸೌವರ್ಣಸ್ತಂಭಸ್ಯ ನವರತ್ನಮಂಡಪಭಾರವಾಹಿತ್ವೇ ಸತಿ ತದಭಿನ್ನತ್ವೇನ ತದಲಂಕಾರಭೂತತ್ವಸ್ಯೇವ ಸಾಧರ್ಮ್ಯಸ್ಯ ಹ್ರೀಂಕಾರೇಽಪಿ ಜಗದಾಶ್ರಯತ್ವೇ ಸತಿ ತತ್ಕಾರಣತ್ವೇ ಸತಿ ತದಂತರ್ಭೂತತ್ವೇ ಸತಿ ಪರಮಾನಂದಜನಕತ್ವಸ್ಯ ಸತ್ತ್ವೇನ ಹ್ರೀಂಕಾರಮಯ ಇತ್ಯಭೇದೋಪಚಾರಃ ಪ್ರತೀಪಾಲಂಕಾರದ್ಯೋತನಾರ್ಥ ಇತಿ ಜ್ಞಾತವ್ಯಮ್ । ಹ್ರೀಂಕಾರೇ ಉಪಮೇಯೇ ಮಯಶಬ್ದೇನೋಪಮಾನಾಭೇದಕಲ್ಪನಾತ್ । ತಸ್ಮಿನ್ ವಿಚಿತ್ರಪಿಂಗಪ್ರ**

---

ಧಾತುವಿನಲ್ಲಿ ಅಂತರ್ಗತವು. ನೈಮಿತ್ತಿಕವಾದ, ಅಗ್ನಿಸಂಯೋಗದಿಂದ ನಾಶವಾಗದ ದ್ರವತ್ವವು ಸುವರ್ಣದಲ್ಲಿದ್ದರೂ ದೀಪಪ್ರಭಾದಿರೂಪವಾದ ಮತ್ತಾವ ತೇಜಸ್ಸಿನಲ್ಲಿಯೂ ಅದನ್ನು ಕಾಣದಿರುವುದರಿಂದ ಸುವರ್ಣವನ್ನು ತೇಜೋದ್ರವ್ಯವೆಂದು ಸಾಧಿಸಲು ಆಗುವುದಿಲ್ಲ. ಮತ್ತು ಅತ್ಯಂತ ಅಗ್ನಿಸಂಯೋಗದಿಂದ ರಜತಾದಿಗಳಂತೆ ಭಸ್ಮಭಾವವನ್ನು ಹೊಂದುವುದು. ಲೋಹಲೇಖ್ಯತ್ವಲೋಹದಿಂದಾಗುವ ಗೀರು ವಜ್ರದಲ್ಲಿ ಕಾಣದಿದ್ದರೂ ಅದನ್ನು ಪೃಥಿವಿ ಯೆಂದು ಅಂಗೀಕರಿಸುವಂತೆ ನೈಮಿತ್ತಿಕ ದ್ರವತ್ವ ವೆಂಬ ಅಸಾಧಾರಣ ಧರ್ಮವಿದ್ದರೂ ಪೃಥಿವಿಯೆಂದು ಅಂಗೀಕರಿಸುವುದರಲ್ಲಿ ಬಾಧಕವಿಲ್ಲ. ಜಲದ ಧರ್ಮವಾದ ದ್ರವತ್ವವು ಜಲಕಾರ್ಯವಾದ ಪೃಥಿವಿಯಲ್ಲಿ ಇರುವುದು ಉಚಿತವಾದ್ದರಿಂದ ಪೃಥಿವೀ ರೂಪವಾದ ಸುವರ್ಣದಲ್ಲಿ ದ್ರವತ್ವಕ್ಕೆ ಬಾಧಕವಿಲ್ಲ. ಅಂತಹ ಸುವರ್ಣದ ವಿಕಾರವು ಸೌವರ್ಣವು; ಸೌವರ್ಣವಾದ ಸ್ತಂಭವು ಮಂಟಪದ ಭಾರವಾಹಕವೂ, ಮಂಟಪಕ್ಕೆ ಅಭಿನ್ನವೂ, ಅದಕ್ಕೆ ಅಲಂಕಾರ ಪ್ರಾಯವೂ, ಆಗಿರುವಂತೆ ಹ್ರೀಂಕಾರವು ಜಗತ್ತಿಗೆ ಆಶ್ರಯವೂ, ಕಾರಣವೂ, ಜಗದಂತರ್ಗತವೂ ಮತ್ತು ಪರಮಾನಂದಜನಕವೂ ಆದ್ದರಿಂದ ಹ್ರೀಂಕಾರವನ್ನು ಸೌವರ್ಣಸ್ತಂಭಾಭೇದ

**ಧಾನರೂಪೇ ತತ್ಸಂಬಂಧಿತಯಾ ವಿದ್ರುಮಪುತ್ರಿಕೇವ ಪ್ರತೀಯಮಾನಾ ವಿದ್ರುಮೇಣ ಪ್ರವಾಳೇನ ಕೃತಾ ಪುತ್ರಿಕಾ ಸಾಲಭಂಜಿಕಾ । ಸೌವರ್ಣಸ್ತಂಭಶಬ್ದಃ ಉಪಲಕ್ಷಣಂ ಭಿತ್ತ್ಯಾದೀನಾಮ್, ಪ್ರಾಯಸ್ತ್ವದರ್ಶನಾತ್ ತದುಪಾದಾನಂ ಸ್ವತಃ ಮನೋಜ್ಞಸ್ಯ ಸ್ತಂಭಸ್ಯಾತಿಶಯದರ್ಶನೀಯತಾಯೈ । ದುರ್ಲಭತರಪ್ರವಾಲಪುತ್ರಿಕಾ ಸ್ತಂಭಮಂಡಪಂ ತತ್ಸ್ವಾಮಿನಂ ತದ್ದೇಶಂ ಚ ಪ್ರಕೃಷ್ಟೀಕರೋತಿ ತಥಾ ಶ್ರೀಪರದೇವತಾಪಿ ರೂಢ್ಯೈತದ್ಬೀಜಾರ್ಥತಯಾ ತದವಚ್ಛಿನ್ನಾ ಸತೀ ತದಾದೀನ್ ಸರ್ವಾನ್ ಭೂಷಯತಿ ಸಫಲೀಕರೋತೀತ್ಯರ್ಥಃ ।**

---

ರೂಪದಿಂದ ಹೇಳಿದೆ ಈ ಸಮಾಸ ಪದದಲ್ಲಿ ಮಯಶಬ್ದದಿಂದ ಅಭೇದವು ತೋರುವುದು. ವಿಚಿತ್ರ-ಪಿಂಗಲವರ್ಣ ಪ್ರಧಾನವಾದ ಆ ಸ್ತಂಭದಲ್ಲಿ ಹವಳದಿಂದ ಮಾಡಿದ ಪ್ರತಿಕೃತಿಯು ರಮ್ಯವಾಗಿ ಪ್ರಕಾಶಿಸುವುದು. ಭಿತ್ತಿ ಮುಂತಾದುವುಗಳಿಗೆ ಸ್ತಂಭವನ್ನು ಉಪಲಕ್ಷಣವಾಗಿ ಹೇಳಿದೆ. ಪ್ರಾಯಕವಾಗಿ ಸ್ತಂಭವು ಪ್ರತಿಕೃತಿಗೆ ಆಧಾರವಾದ್ದರಿಂದ ಸ್ತಂಭವನ್ನು ಇಲ್ಲಿ ಗ್ರಹಿಸಿದೆ. ಸ್ವತಃ ಸುಂದರವಾಗಿರುವ ಸ್ತಂಭವು ಪ್ರತಿಕೃತಿಸಂಬಂಧದಿಂದ ಹೆಚ್ಚಾಗಿ ದರ್ಶನೀಯವಾಗುವುದು. ದುರ್ಲಭವೂ ಅಮೂಲ್ಯವೂ ಆದ ಹವಳದ ಪ್ರತಿಕೃತಿಯು ಮಂಟಪವನ್ನೂ, ಅದರ ಪ್ರಭುವನ್ನೂ ಆ ದೇಶವನ್ನೂ ಮಹತ್ತರವನ್ನಾಗಿ ಮಾಡುವಂತೆ ರೂಢಿಶಕ್ತಿಯಿಂದ ಹ್ರೀಂ ಬೀಜಾಕ್ಷರಕ್ಕೆ ವಾಚ್ಯಳಾದ ಪದದೇವತೆಯು ಹ್ರೀಂಕಾರಸಂಬದ್ಧಳಾಗಿ ಸರ್ವವನ್ನೂ ಪ್ರಕಾಶಪಡಿಸಿ ಸಫಲಮಾಡುವಳೆಂದು ಅಭಿಪ್ರಾಯವು. ಸುವರ್ಣವಿಕಾರಃ ಸೌವರ್ಣಃ ಸ ಚಾಸೌ ಸ್ತಂಭಶ್ಚ, ಹ್ರೀಂಕಾರ ಏವ ಸೌವರ್ಣಸ್ತಂಭಃ, ವಿದ್ರುಮಸ್ಯ ಪುತ್ರಿಕಾ, ಸ್ತಂಭೇ ವಿದ್ರುಮಪುತ್ರಿಕಾ ಎಂದು ವಿಗ್ರಹವು.

೫೮

ಹ್ರೀಂಕಾರವೇದೋಪನಿಷದ್ಧ್ರೀಂಕಾರಾಧ್ವರದಕ್ಷಿಣಾ ।
ಹ್ರೀಂಕಾರನಂದನಾರಾಮನವಕಲ್ಪಕವಲ್ಲರೀ ॥

೧೪. ಓಂ ಹ್ರೀಂಕಾರವೇದೋಪನಿಷದೇ ನಮಃ।

ಹ್ರೀಂಕಾರವೇದೋಪನಿಷತ್ । ವೇದ್ಯಂತೇ ಜ್ಞಾಯಂತೇ ಸರ್ವೇ ಪದಾರ್ಥಾ ಅನೇನೇತಿ ವೇದಃ । ಜಾತ್ಯೇಕವಚನಂ । ಹ್ರೀಂಕಾರ ಏವ ವೇದಃ ಜ್ಞಾಪಕತ್ವಾವಿಶೇಷಾತ್ । ತಸ್ಯ ಉಪನಿಷತ್ ವೇದಾಂತಭಾಗಃ ಲಕ್ಷ್ಯಾರ್ಥೋ ವಾ "ತದ್ಬ್ರಹ್ಮೋಪನಿಷತ್ ಪರಮ್" ಇತಿ ಶ್ರುತೇಃ । ಕರ್ಮೋಪಾಸನಾ ಜ್ಞಾನಕಾಂಡಭೇದೇನ ಚತ್ವಾರೋಽಪಿ ವೇದಾಃ ತ್ರಿಪ್ರಕಾರಾಃ। "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" ಇತಿ ವಾಕ್ಯೇನ ಜ್ಞಾನಸಾಧನತಯಾ ಕರ್ಮೋಪಾಸನಯೋಃ ವಿನಿಯುಕ್ತತ್ವಾತ್ । "ಅಂಧಂ ತಮಃ ಪ್ರವಿಶಂತಿ ಯೇಽವಿ

---

೧೪. ಹ್ರೀಂಕಾರವೆಂಬ ವೇದದ ಉಪನಿಷದ್ರೂಪಳು. ವೇದ್ಯಂತೇ ಜ್ಞಾಪ್ಯಂತೇ ಎಂಬ ವ್ಯುತ್ಪತ್ತಿಯಿಂದ ಪದಾರ್ಥಜ್ಞಾನ ಸಾಧನವು ವೇದವು. ಹ್ರೀಂಕಾರವು ವೇದರೂಪವೆಂದು ಹೇಳಲ್ಪಟ್ಟಿದೆ. ವೇದದಂತೆ ಹ್ರೀಂಕಾರದಲ್ಲಿಯೂ ಬೋಧಕತ್ವವೆಂಬ ಧರ್ಮವು ಸಮಾನವಾಗಿದೆ. ಆ ವೇದಕ್ಕೆ ವೇದಾಂತ ಭಾಗ ಅಥವಾ ಲಕ್ಷ್ಯಾರ್ಥರೂಪಳಾದ್ದರಿಂದ ಉಪನಿಷದ್ರೂಪಳು. "ತದ್ಬ್ರಹ್ಮೋಪನಿಷತ್ಪರಮ್" ಎಂಬ ಶ್ರುತಿಯಲ್ಲಿ ಪರದೇವತೆಯನ್ನು ಉಪನಿಷತ್ ಶಬ್ದದಿಂದ ವರ್ಣಿಸಿದೆ. ನಾಲ್ಕು ವೇದಗಳು ಕರ್ಮಕಾಂಡ–ಉಪಾಸನಾ ಕಾಂಡ–ಜ್ಞಾನಕಾಂಡ ರೂಪವಾಗಿ ಮೂರಾಗಿ ವಿಭಕ್ತಗಳಾಗಿವೆ. ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಎಂಬ ವಾಕ್ಯವು ಕರ್ಮ–ಉಪಾಸನೆಗಳನ್ನು ಜ್ಞಾನಕ್ಕೆ ಸಾಧನವಾಗಿ ವಿನಿಯೋಗಿಸಿದೆ. "ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ । ತತೋ ಭೂಯ ಇವ ತೇ ತಮೋ ಯ ಉ

ದ್ಯಾಮುಪಾಸತೇ । ತತೋ ಭೂಯ ಇವ ತೇ ತಮೋ ಯ
ಉ ವಿದ್ಯಾಯಾಗ್ಂ ರತಾಃ" ಇತಿ ಶ್ರುತ್ಯಾ ತದುಭಯೋಃ
ಸಂಸಾರಫಲಕತ್ವೇನ ನಿಂದಿತತ್ವಾಚ್ಚ, "ಆತ್ಮಾನಂ ಚೇದ್ವಿ
ಜಾನೀಯಾದಯಮಸ್ಮೀತಿ ಪೂರುಷಃ। ಕಿಮಿಚ್ಛನ್ ಕಸ್ಯ ಕಾ
ಮಾಯ ಶರೀರಮನುಸಂಜ್ವರೇತ್, ಆತ್ಮಕಾಮ ಆಪ್ತಕಾಮಃ
ಇತ್ಯಾದಿ ಶ್ರುತಿಭ್ಯಃ ಅದ್ವೈತಜ್ಞಾನೋತ್ಪಾದಕವೇದಭಾಗ
ಸ್ಯೋಪನಿಷಚ್ಛಬ್ದವಾಚ್ಯಸ್ಯ ಮೋಕ್ಷಫಲಕತ್ವೇನ ಫಲಪ್ರತಿ
ಪಾದನಾತ್ತದುಭಯಪ್ರತಿಪಾದಕವೇದಭಾಗಾಪೇಕ್ಷಯಾ ಶ್ರೇ
ಷ್ಠತ್ವಮ್। ಲೋಕೇ ಸಾಧನಾಪೇಕ್ಷಯಾ ಫಲಸ್ಯ ಶ್ರೇಷ್ಠತ್ವೇ
ನೋತ್ತಮತ್ವಪ್ರಸಿದ್ಧೇಃ। ತಥಾ ಚ ಪೂರ್ವಕಾಂಡದ್ವಯಾ
ರ್ಥಸ್ಯ ಜನ್ಯತಯಾ ತತ್ಪ್ರತಿಪಾದಕವೇದಭಾಗಸ್ಯೋಪನಿಷಚ್ಛೇ
ಷತ್ವವತ್ ಹ್ರೀಂಕಾರಸ್ಯಾಪಿ ಪರದೇವತಾಪ್ರಕಾಶಕತ್ವೇನ
ತಚ್ಛೇಷತ್ವಾತ್ತಸ್ಯಾಃ ಪ್ರಾಧಾನ್ಯಮುಕ್ತಮಿತಿ ದ್ರಷ್ಟವ್ಯಮ್।
ವೇದಾಂತೇಷೂಪನಿಷಚ್ಛಬ್ದಃತಜ್ಜನ್ಯತಾರೂಪಶಕ್ಯಸಂಬಂಧೇನ

---

ವಿದ್ಯಾಯಾಗ್ಂ ರತಾಃ" ಎಂಬ ಶ್ರುತಿವಚನವು ಸ್ವತಂತ್ರವಾದ ಕರ್ಮ–ಉಪಾ
ಸನೆಗಳನ್ನು ತಮಃ ಪ್ರಾಪಕವೆಂದು ನಿಂದಿಸಿದೆ. "ಆತ್ಮಾನಂ ಚೇದ್ವಿಜಾನೀ
ಯಾದಯಮಸ್ಮೀತಿ ಪೂರುಷಃ। ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂ
ಜ್ವರೇತ್, ಆತ್ಮಕಾಮ ಆಪ್ತಕಾಮಃ" ಇತ್ಯಾದಿ ವಚನಗಳು ಉಪನಿಷತ್ತೆಂಬ
ಅದ್ವೈತಜ್ಞಾನೋತ್ಪಾದಕವೇದಭಾಗರೂಪ ಜ್ಞಾನಕಾಂಡಕ್ಕೆ ಮೋಕ್ಷಫಲ
ವನ್ನು ಪ್ರತಿಪಾದಿಸುತ್ತವೆ. ಆದ್ದರಿಂದ ಎರಡು ಕಾಂಡಗಳಿಗಿಂತ ಜ್ಞಾನ
ಕಾಂಡವು ಪ್ರಶಸ್ತವು. ಲೋಕದಲ್ಲಿ ಸಾಧನ ಭಾಗಕ್ಕಿಂತ ಫಲವು ಸ್ವತಂತ್ರವಾಗಿ
ಕಾಂಕ್ಷಿತವಾದ್ದರಿಂದ ಉತ್ತಮವೆಂದು ಪ್ರಸಿದ್ಧವಾಗಿದೆ. ವೇದದಲ್ಲಿರುವ
ಪೂರ್ವಕಾಂಡದ್ವಯದ ಅರ್ಥವು ಜನ್ಯವಾದ್ದರಿಂದ ಉಪನಿಷತ್ತಿಗೆ ಕಾಂಡದ್ವ
ಯವು ಶೇಷವಾಗಿರುವಂತೆ ಪರದೇವತೆಯೆಂಬ ಉಪನಿಷತ್ತಿಗೆ ಪ್ರಕಾಶಕವಾದ
ಹ್ರೀಂಕಾರವು ಶೇಷವಾದ್ದರಿಂದ ದೇವತೆಗೆ ಪ್ರಾಧಾನ್ಯವು ವಿವಕ್ಷಿತವಾಗು
ವುದು. ಉಪನಿಷತ್ ಎಂದು ಶಬ್ದಕ್ಕೆ ರೂಢಿಯಿಂದ ಬ್ರಹ್ಮವಿದ್ಯೆ ಎಂದು ಅರ್ಥವು.
ಶಕ್ಯಸಂಬಂಧವೆಂಬ ಲಕ್ಷಣಾ ವೃತ್ತಿಯಿಂದ ವಿದ್ಯಾಜನಕವಾದ ವೇದಾಂತಭಾಗವು

ಪ್ರವರ್ತತೇ । ಮುಖ್ಯಯಾ ವೃತ್ತ್ಯಾ ತು ಬ್ರಹ್ಮವಿದ್ಯಾಯಾ ಮೇವ । ತಥಾ ಹಿ ಉಪಶಬ್ದಃ ಸಮೀಪದೇಶಾರ್ಥಕಃ । ಬ್ರಹ್ಮಣ್ಯಧ್ಯಸ್ತಮಾಯಾಸಮೀಪದೇಶಕಃ ತತ್ಪದಾರ್ಥಪ್ರತಿಬಿಂಬಿತಮವಿದ್ಯೋಪಾಧಿಕಚೈತನ್ಯಂ ಜೀವಶಬ್ದವಾಚ್ಯಮುಪಶಬ್ದಾರ್ಥಃ ಲಕ್ಷಣಯಾ ಪ್ರತಿಪಾದ್ಯತೇ । ನಿ-ಶಬ್ದಃ ಷದ್ ಇತಿ ಪದಸ್ಯ ವಿಶೇಷಣಮ್ । ಸತ್ ಇತಿ ಪದಂ ಸದನಗತ್ಯವಸಾದನೇಷು ಭವತಿ । ತಥಾ ಚ ಉಪಶಬ್ದವಾಚ್ಯೋ ಜೀವಃ ಅವಿದ್ಯಾಂ ನಿಹತ್ಯ ತ್ಯಕ್ತ್ವಾ ಬ್ರಹ್ಮಸ್ವರೂಪೇಣ ನಿಷೀದತಿ ವರ್ತತ ಇತಿ ಉಪನಿಷದಿತ್ಯೇಕೋಽರ್ಥಃ । ಜೀವಃ ಬ್ರಹ್ಮಸ್ವರೂಪತ್ವೇನ ನಿಗಚ್ಛತಿ ಜಾನಾತೀತ್ಯನ್ಯೋಽರ್ಥಃ । ಜೀವಃ ಬ್ರಹ್ಮಸ್ವರೂಪೇಣ ಅವಸೀದತಿ ಪರಿಸಮಾಪ್ನೋತೀತಿ ತೃತೀಯೋಽರ್ಥಃ । ಏವಮುಪನಿಷಚ್ಛಬ್ದಸ್ಯ ಬ್ರಹ್ಮವಿದ್ಯಾವಾಚಕತ್ವೇನ ಪ್ರಸಿದ್ಧಸ್ಯ ತದ್ವಾಚಕವೇದಭಾಗೇ ಲಕ್ಷಣವತ್ತ್ವೇಽಪ್ಯ

---

ಪ್ರತಿಪಾದ್ಯವಾಗುವುದು, ಸಮೀಪದೇಶವನ್ನು ಬೋಧಿಸುವ ಉಪ ಎಂಬ ಶಬ್ದವು ಲಕ್ಷಣೆಯಿಂದ ಬ್ರಹ್ಮನಲ್ಲಿ ಅಧ್ಯಸ್ತವಾದ ಮಾಯಾಸಮೀಪದೇಶದಲ್ಲಿರುವುದೂ ತತ್ಪದಾರ್ಥದ ಪ್ರತಿಬಿಂಬರೂಪವೂ, ಅವಿದ್ಯೋಪಾಧಿಯಿಂದ ಕೂಡಿದುದೂ ಮತ್ತು ಜೀವ ಎಂಬ ಸಂಜ್ಞಾಂಕಿತವೂ ಆದ ಚೈತನ್ಯವನ್ನು ಪ್ರತಿಪಾದಿಸುವುದು. "ನಿ" ಎಂಬುದು "ಷದ್" ಧಾತುವಿನ ಅರ್ಥದಲ್ಲಿ ವಿಶೇಷಣವು. "ಷದ್" ಧಾತುವಿಗೆ ಕುಳಿತುಕೊಳ್ಳುವುದು, ಹೊಂದುವುದು, ಸಮಾಪ್ತಿಯಾಗುವುದು ಎಂಬ ಅನೇಕ ವ್ಯಾಪಾರಗಳು ಅರ್ಥವಾಗುವುದು. ಉಪಶಬ್ದದ ಅರ್ಥನಾದ ಜೀವನು ಅವಿದ್ಯೆಯನ್ನು ಬಿಟ್ಟು ಬ್ರಹ್ಮರೂಪದಿಂದ ನಿಷಣ್ಣ=ಕುಳಿತುಕೊಂಡವನು ಆಗುವನು. ಎಂದು ಒಂದು ಬಗೆಯ ಅರ್ಥವು. ಜೀವನು ಬ್ರಹ್ಮರೂಪದಿಂದ ಅರಿಯುವನು ಎಂಬುದು ಎರಡನೆಯ ಅರ್ಥವು. ಜೀವನು ಬ್ರಹ್ಮರೂಪದಿಂದ ಪರ್ಯವಸಾನ ಹೊಂದುವನು ಎಂಬುದು ಮೂರನೆಯ ಅರ್ಥವು. ಹೀಗೆ ಉಪನಿಷತ್ ಶಬ್ದವು ಬ್ರಹ್ಮವಿದ್ಯಾ ಎಂಬ ಅರ್ಥಕ್ಕೆ ವಾಚಕ

ಪನಿಷಚ್ಛಬ್ದವಾಚ್ಯೋ ಭವತಿ । ತಥಾ ಚ ಹ್ರೀಂಕಾರ ಏವ ವೇದಃ ತಸ್ಯ ಉಪನಿಷತ್ ಪ್ರಧಾನಭೂತಾ ಬ್ರಹ್ಮವಿದ್ಯೇತ್ಯರ್ಥಃ।

## ೧೫. ಓಂ ಹ್ರೀಂಕಾರಾಧ್ವರದಕ್ಷಿಣಾಯೈ ನಮಃ ।

ಹ್ರೀಂಕಾರಾಧ್ವರದಕ್ಷಿಣಾ । ಹ್ರೀಂಕಾರ ಏವ ಅಧ್ವರಃ ಯಜ್ಞಃ ತಸ್ಯ ದಕ್ಷಿಣಾ ಸಮಾಪ್ತಿಸಾಧನಮ್, ದಕ್ಷಿಣಾಯಾಂ ದತ್ತಾಯಾಂ ಯಜ್ಞಸಮಾಪ್ತಿದರ್ಶನಾತ್ । ಹ್ರೀಂಕಾರಸ್ಯಾಪಿ ಜಪಃ ಯಜನಾತ್ಮಕತಯಾ ಅಧ್ವಾನಂ ರಾತಿ ಗಚ್ಛತೀತ್ಯಧ್ವರಃ ಮಾರ್ಗಸಾಧಕ ಇತ್ಯರ್ಥಃ । ದಕ್ಷಿಣಾಪದಂ ಫಲವಾಚಿ ಋತ್ವಿಗ್ವ್ಯಾಪಾರಾಣಾಂ ದಕ್ಷಿಣಾಫಲತ್ವದರ್ಶನಾತ್ । ಹ್ರೀಂಕಾರಾಧ್ವರಸ್ಯ ಹ್ರೀಂಕಾರಜಪಯಜ್ಞಸ್ಯ ದಕ್ಷಿಣಾ ಫಲಸಾಧನೀಭೂತಪುರುಷಾರ್ಥರೂಪಾ । ಅಥವಾ ಹ್ರೀಂಕಾರಾಧ್ವರಸ್ಯ ದಕ್ಷಿಣಾ ಪತ್ನೀ "ಮಖಸ್ಯ ದಕ್ಷಿಣಾ ಪತ್ನೀ" ಇತಿ ವಚನಾತ್ । "ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ

---

ವಾದರೂ ಲಕ್ಷಣಾ ವೃತ್ತಿಯಿಂದ ವೇದಭಾಗವನ್ನು ಬೋಧಿಸುವುದು. ಹ್ರೀಂಕಾರ ಏವ ವೇದಃ ತಸ್ಯ ಉಪನಿಷತ್ ಎಂದು ವಿಗ್ರಹವು.

೧೫. ಹ್ರೀಂಕಾರವೆಂಬ ಯಾಗಕ್ಕೆ ದಕ್ಷಿಣಾರೂಪಳು. ದಕ್ಷಿಣೆಯನ್ನು ದಾನಮಾಡಲಾಗಿ ಯಜ್ಞವು ಸಮಾಪ್ತಿಗೊಳ್ಳುವುದರಿಂದ ದಕ್ಷಿಣೆಯು ಸಮಾಪ್ತಿ ಸಾಧನವಾಗುವುದು. ಹ್ರೀಂಕಾರದ ಜಪವು ಯಜನರೂಪವಾಗಿದ್ದು ಅಧ್ವಾನಂ ರಾತಿ ಗಚ್ಛತಿ ಎಂಬ ವ್ಯುತ್ಪತ್ತಿಯಿಂದ ಮಾರ್ಗ ಸಾಧಕವಾಗುವುದು. ಋತ್ವಿಜರ ವ್ಯಾಪಾರಕ್ಕೆ ದಕ್ಷಿಣೆಯು ಫಲರೂಪವಾದ್ದರಿಂದ ದಕ್ಷಿಣಾಪದಕ್ಕೆ ಫಲವೆಂದು ಅರ್ಥವು. ಹ್ರೀಂಕಾರ ಜಪಯಜ್ಞಕ್ಕೆ ಫಲಸಾಧನವಾದ ಪುರುಷಾರ್ಥ ರೂಪಳೆಂದು ತಾತ್ಪರ್ಯವು. ಅಥವಾ ಹ್ರೀಂಕಾರಯಜ್ಞಕ್ಕೆ ದಕ್ಷಿಣಾ ಎಂಬ ಪತ್ನೀರೂಪಳು. ಯಜ್ಞಪತ್ನೀರೂಪವನ್ನು "ಮಖಸ್ಯ ದಕ್ಷಿಣಾ ಪತ್ನೀ" ಎಂಬ ವಚನವು ವಿವರಿಸಿದೆ. ಅಥವಾ ಹ್ರೀಂಕಾರಲಕ್ಷ್ಯಾರ್ಥವನ್ನು ವಿಷಯೀಕರಿಸಿದ ಜ್ಞಾನವೆಂಬ ಯಜ್ಞದಲ್ಲಿ ದಕ್ಷಿಣೆಯಂತೆ ಫಲರೂಪದಿಂದ ಪ್ರಧಾನಳಾದವಳು,

ಮತಿಃ'' ಇತಿ ಭಗವದ್ವಚನಾತ್ । ಹ್ರೀಂಕಾರಲಕ್ಷ್ಯಾರ್ಥ ಜ್ಞಾನೇನೈವ ಹ್ರೀಂಕಾರಾಧ್ವರಃ ಹ್ರೀಂಕಾರಜ್ಞಾನಯಜ್ಞಃ "ಪ್ರಧಾನಂ ದಕ್ಷಿಣಾ ಮಖೇ'' ಇತಿ ವಚನಾತ್ ದಕ್ಷಿಣಾವತ್ ಫಲಭೂತತ್ವೇನ ಪ್ರಧಾನಭೂತೇತಿ ವಾ । ದೇವತೋದ್ದೇಶೇನ ದ್ರವ್ಯತ್ಯಾಗೋ ಯಾಗ ಇತ್ಯುಚ್ಯತೇ । ತ್ಯಕ್ತದ್ರವ್ಯಸ್ಯ ಅಗ್ನೌ ಪ್ರಕ್ಷೇಪೋ ಹೋಮಃ । ಋತ್ವಿಗುದ್ದೇಶೇನ ವೇದ್ಯಾಮರ್ಥವಿಭಾಗೋ ದಕ್ಷಿಣಾ । ಅರ್ಥಿಭ್ಯಃ ವೇದಿಬಹಿರ್ದೇಶೇಽರ್ಥವಿಭಾಗೋ ದಾನಮಿತಿ ತೇಷಾಂ ಭೇದಃ ।

೧೬. ಓಂ ಹ್ರೀಂಕಾರನಂದನಾರಾಮನವಕಲ್ಪಕವಲ್ಲರ್ಯೈ ನಮಃ ।

ಹ್ರೀಂಕಾರನಂದನಾರಾಮನವಕಲ್ಪಕವಲ್ಲರೀ । ನಂದಯತ್ಯಾನಂದಯತೀತಿ ನಂದನಃ ಸ ಚಾಸೌ ಆರಾಮಶ್ಚ ತಥಾ । ದೇವೇಂದ್ರೋದ್ಯಾನಂ ವಿಚಿತ್ರಸ್ವರೂಪತಯಾ ವಿಜಾತೀಯಾ

---

"ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ'' ಎಂಬ ವಚನವು ಜ್ಞಾನವನ್ನು ಯಜ್ಞರೂಪದಿಂದ ವರ್ಣಿಸಿದೆ. ಹಾಗೆ "ಪ್ರಧಾನಂ ದಕ್ಷಿಣಾ ಮಖೇ'' ಎಂಬ ವಚನವು ಯಜ್ಞದಲ್ಲಿ ದಕ್ಷಿಣೆಗೆ ಪ್ರಾಧಾನ್ಯವನ್ನು ಪ್ರಶಂಸೆ ಮಾಡಿದೆ. ಈ ಪ್ರಸಂಗದಲ್ಲಿ ಯಾಗ–ಹೋಮ–ದಕ್ಷಿಣಾ–ದಾನವೆಂಬ ಕರ್ಮಗಳಿಗೆ ಇರುವ ಸೂಕ್ಷ್ಮವ್ಯತ್ಯಾಸವನ್ನು ಈ ರೀತಿಯಾಗಿ ತಿಳಿಯಬೇಕು. ದೇವತೆಯನ್ನು ಉದ್ದೇಶಿಸಿ ದ್ರವ್ಯವನ್ನು ತ್ಯಜಿಸುವುದು ಯಾಗವು. ತ್ಯಕ್ತ ದ್ರವ್ಯವನ್ನು ಅಗ್ನಿಯಲ್ಲಿ ಇಡುವುದು ಹೋಮವು. ವೇದಿಯಲ್ಲಿ ಋತ್ವಿಜರನ್ನು ಉದ್ದೇಶಿಸಿ ದೇಯದ್ರವ್ಯವನ್ನು ವಿಭಾಗಮಾಡುವುದು ದಕ್ಷಿಣೆಯು ಮತ್ತು ಯಾಚಕರಿಗೆ ವೇದಿಯ ಹೊರಗಡೆ ಅರ್ಥದ ಹಂಚಿಕೆಯು ದಾನರೂಪವಾಗುವುದು. ಹ್ರೀಂಕಾರ ಏವ ಅಧ್ವರಃ, ತಸ್ಯ ದಕ್ಷಿಣಾ ಎಂದು ವಿಗ್ರಹವು.

೧೬. ಹ್ರೀಂಕಾರವೆಂಬ ಸುಖಜನಕವಾದ ದೇವೇಂದ್ರೋದ್ಯಾನದಲ್ಲಿ ಕಲ್ಪಲತಾಸ್ವರೂಪಳು. ದೇವೇಂದ್ರನ ಉದ್ಯಾನವು ವಿಚಿತ್ರಸ್ವರೂಪವೂ, ವಿಜಾತೀಯ ಪದಾರ್ಥ ಸಹಿತವೂ ಆಗಿ ಆನಂದವನ್ನುಂಟುಮಾಡುವುದರಿಂದ

ರ್ಥಕತ್ವಾತ್ । ಹ್ರೀಂಕಾರ ಏವ ನಂದನಾರಾಮಃ ಸುಖಕರ್ತೃ
ವಿಶ್ರಾಮಭೂಮಿಃ, ತಸ್ಯ ನವಾ ನೂತನಾ ಅತಿಕೋಮಲೇ
ತ್ಯರ್ಥಃ । ಕಲ್ಪಯತೀತಿ ಕಲ್ಪಕಾ ಕಲ್ಪಕಾ ಚ ಸಾ ವಲ್ಲರೀ
ಚೇತಿ ತಥಾ ದೇವೋದ್ಯಾನೇ ವಿದ್ಯಮಾನಾನಾಂ ವೃಕ್ಷಗುಲ್ಮ
ಲತಾತೃಣಾದೀನಾಂ ಏತಲ್ಲೋಕಾತಿಶಾಯಿಪುಷ್ಪಫಲಾದಿಮ
ತ್ತ್ವೇಪಿ ನ ಸರ್ವೋತ್ತಮತಾಪ್ರಸಿದ್ಧಿಃ, ಕಲ್ಪವಲ್ಲ್ಯಾಸ್ತು
ಯಥಾಕರ್ಮ ಯಥಾಸೇವಾಮುಪಾಸಕಾನಾಂ ಸರ್ವಾರ್ಥ
ಪ್ರದಾನಶಕ್ತಿಮತ್ತ್ವೇನ ಸರ್ವೋತ್ಕೃಷ್ಟತಾ। ತಥಾ ಬ್ರಹ್ಮ
ವಿಷ್ಣುರುದ್ರಾಣಾಂ ತದ್ವಾಚಕವರ್ಣಭೇದಾನಾಂ ಅನ್ಯೋನ್ಯ
ಸಂಬಂಧತಯಾ ಏಕತ್ರ ಪ್ರತೀಯಮಾನತ್ವೇನ ಚಿರಜೀವಿತ್ವ
ಫಲಾದಿಪ್ರದಾನೇನ ಆನಂದಕತಯಾ ಸಂಸಾರತಾಪಶಾಮಕ
ತ್ವೇನ ಚ ಹ್ರೀಂಕಾರಸ್ಯ ನಂದನೋಪಮಾ। ತತ್ರ ಸರ್ವಾರ್ಥ
ಪ್ರದಾತೃತ್ವೇನ ಕಾಮೇಶ್ವರಾಲಿಂಗಿತಕೋಮಲತರಸುಂದರ
ಮೂರ್ತ್ಯಾ ವಿಶಿಷ್ಟಪುರುಷಾರ್ಥಚತುಷ್ಟಯಕಲ್ಪನೇನ ಸಗು

---

ನಂದನಾರಾಮ ವೆಂದು ಕರೆಯಲ್ಪಡುವುದು. ಸುಖಕರವಾದ ವಿಶ್ರಾಂತಿಸ್ಥಾನ
ವಾದುದರಿಂದ ಹ್ರೀಂಕಾರವು ನಂದನೋದ್ಯಾನರೂಪವೆಂದು ವರ್ಣಿಸಲು ಅರ್ಹ
ವಾದುದು. ಅದಕ್ಕೆ ದೇವಿಯು ಹೊಸದಾಗಿಯೂ ಕೋಮಲವಾಗಿಯೂ
ಇರುವ ಕಲ್ಪಲತಾ ರೂಪದಿಂದ ಇರುವಳೆಂದು ತಾತ್ಪರ್ಯವು. "ಕಲ್ಪಯತಿ"
ಎಂಬ ವ್ಯುತ್ಪತ್ತಿಯಿಂದ ಕಲ್ಪ ವೆಂಬಶಬ್ದವು ರೂಪಗೊಂಡಿದೆ. ದೇವೋ
ದ್ಯಾನದಲ್ಲಿರುವ ಇತರ ವೃಕ್ಷ-ಗುಲ್ಮ-ಲತಾ-ತೃಣ ಮುಂತಾದುವು ಇಹ
ಲೋಕದ ವೃಕ್ಷಾದಿಗಳಿಗಿಂತಲೂ ಅತಿಶಯವಾದ ಫಲ-ಪುಷ್ಪಾದಿಗಳಿಂದ ಕೂಡಿ
ದ್ದರೂ ಸರ್ವೋತ್ತಮವೆಂದು ಗಣ್ಯವಾಗಿಲ್ಲ. ಕಲ್ಪಲತೆಯು ಕರ್ಮ-ಉಪಾಸ
ನಾದಿ ಸುಕೃತಾನುರೂಪವಾಗಿ ಉಪಾಸಕರಿಗೆ ಸರ್ವ ಇಷ್ಟಾರ್ಥಗಳನ್ನು ಕೊಡುವ
ಶಕ್ತಿ ಸಂಪನ್ನವಾದ್ದರಿಂದ ಸರ್ವೋತ್ತಮವು. ಹ್ರೀಂಕಾರದಲ್ಲಿ ಸೇರಿದ ಹಕಾ
ರಾದಿವರ್ಣಗಳು ಬ್ರಹ್ಮ-ವಿಷ್ಣು-ರುದ್ರರನ್ನು ಬೋಧಿಸಿ ಒಂದು ಶಬ್ದದಿಂದ
ಅನ್ಯೋನ್ಯ ಸಂಬಂಧದಿಂದ ತೋರುವುದರಿಂದಲೂ ಚಿರಜೀವನಾದಿ ಫಲದಾನ
ದಿಂದ ಆನಂದಪಡಿಸುವುದರಿಂದಲೂ ಮತ್ತು ಸಂಸಾರ ತಾಪವನ್ನು ಕಳೆಯುವು
ದರಿಂದಲೂ ಹ್ರೀಂಕಾರವು ನಂದನರೂಪದಿಂದ ವರ್ಣಿಸಲ್ಪಟ್ಟಿದೆ. ಅಲ್ಲಿ

**ಣನಿರ್ಗುಣೋಪಾಸಕಾನಾಂ ತದ್ದೇವತಾತ್ಮನಾ ಪ್ರಾಧಾನ್ಯೇನ ಸಮಷ್ಟಿರೂಪತಯಾ ಸಾದೃಶ್ಯೇನ ನವಕಲ್ಪಕವಲ್ಲರೀತ್ಯುಚ್ಯತ ಇತಿ ಭಾವಃ ।**

---

ಕಾಮೇಶ್ವರನಿಂದ ಆಲಿಂಗಿಸಲ್ಪಟ್ಟ ದಿವ್ಯ ಕೋಮಲ ಸುಂದರಮೂರ್ತಿಯಿಂದ ವಿಶಿಷ್ಟ ಪುರುಷಾರ್ಥಗಳನ್ನು ಕಲ್ಪಿಸುತ್ತ ಸಗುಣ–ನಿರ್ಗುಣೋಪಾಸಕರಿಗೆ ಆಯಾಯ ದೇವತಾತ್ಮ ಭಾವದಿಂದಲೂ ಪ್ರಧಾನವಾಗಿ ಸಮಷ್ಟಿರೂಪದಿಂದಲೂ ಸರ್ವಾರ್ಥ ಪ್ರದಾಯಕಳಾಗಿರುವುದರಿಂದ ಪರದೇವತೆಯನ್ನು ಕಲ್ಪಲತಾ ಅಭೇದ ದೃಷ್ಟಿಯಿಂದ ವರ್ಣಿಸಿದೆ. ನಂದನಶ್ಚಾಸೌ ಆರಾಮಶ್ಚ, ಹ್ರೀಂಕಾರ ಏವ ನಂದನಾರಾಮಃ, ಕಲ್ಪಯತೀತಿ ಕಲ್ಪಕಾ, ಸಾ ಚ ಸಾ ವಲ್ಲರೀ ಚ, ಆರಾಮೇ ಕಲ್ಪಕವಲ್ಲರೀ ಎಂದು ವಿಗ್ರಹವು.

## ೫೯

ಹ್ರೀಂಕಾರಹಿಮವದ್ಗಂಗಾ ಹ್ರೀಂಕಾರಾರ್ಣವಕೌಸ್ತುಭಾ ।
ಹ್ರೀಂಕಾರಮಂತ್ರಸರ್ವಸ್ವಾ ಹ್ರೀಂಕಾರಪರಸೌಖ್ಯದಾ ॥

### ೧೭. ಓಂ ಹ್ರೀಂಕಾರಹಿಮವದ್ಗಂಗಾಯೈ ನಮಃ ।

ಹ್ರೀಂಕಾರಹಿಮವದ್ಗಂಗಾ । ಹಿಮಾನಿ ಅಸ್ಮಿನ್ ಸಂತೀತಿ ಹಿಮವಾನ್ ಶೀತಲಪರ್ವತರಾಜಃ। ಹ್ರೀಂಕಾರಸ್ಯ ಅಮೃತಾದಿಸಾಧಕತಯಾ ಶೀತಲತಾ ಬೋಧ್ಯಾ । ತಸ್ಮಾದ್ಗಂಗೇವ ಪಾವನೀ ಸರ್ವಪುರುಷಾರ್ಥಪ್ರದಾ ಮಂತ್ರದೇವತಾತ್ಮನಾಭಿವ್ಯಕ್ತೇತ್ಯರ್ಥಃ ।

### ೧೮. ಓಂ ಹ್ರೀಂಕಾರಾರ್ಣವಕೌಸ್ತುಭಾಯೈ ನಮಃ ।

ಹ್ರೀಂಕಾರಾರ್ಣವಕೌಸ್ತುಭಾ। ಕೌಸ್ತುಭಃ ಕ್ಷೀರಾಬ್ಧಿಜನ್ಮಸು ಚತುರ್ದಶರತ್ನೇಷು ಯಥಾ ಶ್ರೇಷ್ಠಃ ಸರ್ವಾಧಿಕಪ್ರಕಾಶಾದಿಗುಣತಯಾ; ತಥಾ ಪರದೇವತಾಪಿ ಅಪಾರಮಹಿಮಾಪರಿ

---

೧೭. ಹ್ರೀಂಕಾರವೆಂಬ ಹಿಮವತ್ಪರ್ವತಕ್ಕೆ ಗಂಗಾರೂಪಳು. ಶೀತಲವಾದ ಪರ್ವತರಾಜನನ್ನು ಹಿಮಗಳಿರುವುದರಿಂದ ಹಿಮವಾನ್ ಎಂದು ಕರೆಯುವರು. ಹ್ರೀಂಕಾರವು ಅಮೃತಸಾಧನವಾದ್ದರಿಂದ ಹಿಮಾಲಯದಂತೆ ಶೀತಲವಾಗಿರುವುದು. ಆದರಲ್ಲಿ ಮಂತ್ರದೇವತಾರೂಪದಿಂದ ಅಭಿವ್ಯಕ್ತಿ ಹೊಂದಿ ಸಕಲಪುರುಷಾರ್ಥಪ್ರದಳಾದ ದೇವಿಯು ಗಂಗೆಯಂತೆ ಪಾವನಳಾಗಿರುವಳು ಎಂದು ತಾತ್ಪರ್ಯವು. ಹ್ರೀಂಕಾರ ಏವ ಹಿಮವಾನ್, ತಸ್ಯ ಗಂಗಾ ಎಂದು ವಿಗ್ರಹವು.

೧೮. ಹ್ರೀಂಕಾರವೆಂಬ ಸಾಗರಕ್ಕೆ ಕೌಸ್ತುಭರತ್ನರೂಪಳು. ಕ್ಷೀರಸಮುದ್ರದಲ್ಲಿ ಹುಟ್ಟಿದ ಹದಿನಾಲ್ಕು ರತ್ನಗಳಲ್ಲಿ ಅಧಿಕ ಪ್ರಕಾಶ–ಕಾಂತಿಗಳಿಂದ ಕೂಡಿದ ಕೌಸ್ತುಭರತ್ನವು ಉತ್ತಮವಾದುದು. ''ಅತ್ರಾಯಂ ಪುರುಷಃ ಸ್ವಯಂ

ಚ್ಛಿನ್ನಹ್ರೀಂಕಾರಮಂತ್ರವೇದ್ಯತ್ವೇನ ತನ್ನಿಷ್ಪನ್ನಾ ಸತೀ "ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ" ಇತಿ ಶ್ರುತೇಃ ಸ್ವಯಂ ಪ್ರಕಾಶತಯಾ ವಿದ್ಯೋತತ ಇತ್ಯರ್ಥಃ । ಅತ್ರ ಕೌಸ್ತುಭಹೃದಯಸ್ಯ ಲಕ್ಷ್ಮೀಪತಿತ್ವಸರ್ವದೇವೋತ್ತಮತ್ವ ಸಕಲಸುಂದರತಮತ್ವಗುಣಾ ಇವ ವಿಷ್ಣೋಃ ಹ್ರೀಂಕಾರಾರ್ಣ ವವಿದ್ಯೋತಮಾನಹ್ರೀಂಕಾರದೇವತೋಪಾಸಕಸ್ಯಾಪಿ ನಾರಾ ಯಣಾಭೇದೇನ ಶ್ರೀಕಾಂತತ್ವಾದಿಧರ್ಮಾಃ ಸ್ವತ ಏವ ಸಿದ್ಧ್ಯಂ ತೀತಿ ಕೌಸ್ತುಭಪದೇನ ಧ್ವನಿತಮಿತಿ ದ್ರಷ್ಟವ್ಯಮ್ ।

೧೯. ಓಂ ಹ್ರೀಂಕಾರಮಂತ್ರಸರ್ವಸ್ವಾಯೈ ನಮಃ ।

ಹ್ರೀಂಕಾರಮಂತ್ರಸರ್ವಸ್ವಾ । ಸರ್ವಾಣಿ ಚ ತಾನಿ ಸ್ವಾನಿ ಚ ಧನಾನಿ ಅಣಿಮಾದ್ಯಷ್ಟೈಶ್ವರ್ಯಜನಕತ್ವಾದೀನಿ ತಾನಿ ತಥಾ ।

---

ಜ್ಯೋತಿಃ" ಎಂಬ ವಚನಾನುಸಾರವಾಗಿ ಸ್ವಯಂ ಪ್ರಕಾಶರೂಪಳಾದ ಪರ ದೇವತೆಯು ಅಪಾರ ಮಹಿಮೆಯಿಂದ ಕೂಡಿದ ಹ್ರೀಂಕಾರ ಮಂತ್ರದಿಂದ ವೇದ್ಯಳಾಗಿ ಸ್ಫುರಿಸುವಳು. ಕೌಸ್ತುಭವನ್ನು ಧರಿಸಿದ ಮಹಾವಿಷ್ಣುವಿನಲ್ಲಿ ಲಕ್ಷ್ಮೀಪತಿತ್ವ-ಸರ್ವದೇವೋತ್ತಮತ್ವ-ಸಕಲಸುಂದರತಮತ್ವ ಮುಂತಾದ ಗುಣಗಳು ಪ್ರಸಿದ್ಧವಾಗಿವೆ. ಹಾಗೆಯೇ ಹ್ರೀಂಕಾರಸಾಗರದಲ್ಲಿ ದ್ಯೋತಿಸುವ ಹ್ರೀಂಕಾರದೇವತೋಪಾಸಕನಿಗೆ ನಾರಾಯಣಾಭೇದದಿಂದ ಲಕ್ಷ್ಮೀಪತಿತ್ವಾದಿ ಧರ್ಮಗಳು ಸ್ವತಂತ್ರವಾಗಿ ಸಿದ್ಧಿಸುತ್ತವೆ. ಎಂಬುದು ಕೌಸ್ತುಭಾಭೇದವರ್ಣ ನೆಯಿಂದ ಲಭಿಸುವ ಗೂಢಾರ್ಥವು. ಹ್ರೀಂಕಾರ ಏವ ಅರ್ಣವಃ, ತಸ್ಯ ಕೌಸ್ತುಭಾ ಎಂದು ವಿಗ್ರಹವು.

೧೯. ಹ್ರೀಂಕಾರ ವೆಂಬ ಮಂತ್ರದ ಸರ್ವಸ್ವರೂಪಳು. ಮಂತ್ರವು ಹ್ರೀಂಕಾರ ರೂಪವೂ, ಹ್ರೀಂ ಎಂಬ ವರ್ಣಘಟಿತವೂ ಆಗಿದೆ. ಆ ಮಂತ್ರದಲ್ಲಿ ಸರ್ವಾರ್ಥಸಾಧಕಶಕ್ತಿರೂಪಳೂ ಸರ್ವಸಂಪದ್ರೂಪಳೂ ಆಗಿ ಪರದೇವತೆಯು ಅಭಿವ್ಯಕ್ತಿ ಹೊಂದುವಳು. "ಸರ್ವಾಣಿ ಚ ತಾನಿ ಸ್ವಾನಿ ಚ" ಎಂಬ ವಿಗ್ರಹ ದಿಂದ ಅಣಿಮಾದ್ಯಷ್ಟೈಶ್ವರ್ಯ ಪ್ರದಾಯಕತ್ವ ಮುಂತಾದ ಸಂಪತ್ತಿಯು

ಹ್ರೀಂಕಾರಘಟಿತೋ ಹ್ರೀಂಕಾರೋ ವಾ ತೇಷಾಂ ಸರ್ವಸ್ವಾ
ಸಕಲಸಂಪತ್ ಸರ್ವಾರ್ಥಸಾಧಕಶಕ್ತಿರಿತ್ಯರ್ಥಃ ।

೨೦. ಓಂ ಹ್ರೀಂಕಾರಪರಸೌಖ್ಯದಾಯೈ ನಮಃ ।

ಹ್ರೀಂಕಾರಪರಸೌಖ್ಯದಾ । ಹ್ರೀಂಕಾರಪರಾಃ ಹ್ರೀಂಕಾರಮಂತ್ರ ಜಪಪರಾಃ, ಹ್ರೀಂಕಾರಘಟಿತಶ್ರೀವಿದ್ಯಾಜಪಪರಾ ವಾ । ತೇಷಾಂ ಸೌಖ್ಯಂ ಚತುರ್ವಿಧಪುರುಷಾರ್ಥಪ್ರಾಪ್ತಿಜನ್ಯಾನಂದಃ, ತದ್ದದಾತೀತಿ ತಥಾ ಹ್ರೀಂಕಾರಾಣಾಂ ವ್ಯಷ್ಟಿರೂಪೇಣ ವಾಚ್ಯಾರ್ಥಾನಾಂ ತ್ರಿಮೂರ್ತೀನಾಂ ಪರಂ ಸೌಖ್ಯಂ ಸಾಮರಸ್ಯಸುಖಂ ಏಕೀಭಾವಮಾನಂದಂ ದದಾತೀತಿ ವಾರ್ಥಃ । "ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ । ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಮ್, ನಾಲ್ಪೇ ಸುಖಮಸ್ತಿ," ಇತಿ "ಆ

---

ಸರ್ವಸ್ವ ಶಬ್ದದ ಅರ್ಥವಾಗುವುದು. ಆ ರೂಪದಿಂದ ದೇವಿಯು, ಇರುವಳೆಂದು ತಾತ್ಪರ್ಯವು. ಹ್ರೀಂಕಾರ ಏವ ಮಂತ್ರಃ, ತಸ್ಯ ಸರ್ವಸ್ವಾ ಎಂದು ವಿಗ್ರಹವು.

೨೦. ಹ್ರೀಂಕಾರ ಜಪಪರರಿಗೆ ಸೌಖ್ಯವನ್ನು ಕೊಡುವವಳು. ಅಥವಾ ತ್ರಿಮೂರ್ತಿಗಳಿಗೆ ಪರಸೌಖ್ಯವನ್ನು ಕೊಡುವವಳು. ಹ್ರೀಂಕಾರಮಂತ್ರದ ಜಪವನ್ನು ಆಸಕ್ತಿಯಿಂದ ಮಾಡುವವರು ಹ್ರೀಂಕಾರಪರರಾದವರು. ಅವರಿಗೆ ಚತುರ್ವಿಧ ಪುರಷಾರ್ಥ ಪ್ರಾಪ್ತಿಯಿಂದ ಆಗುವ ಆನಂದವು ದೇವಿಯಿಂದ ಲಭಿಸುವುದು. ಅಥವಾ ವ್ಯಷ್ಟಿರೂಪದಿಂದ ಹ್ರೀಂಕಾರ ವಾಚ್ಯರಾದ ತ್ರಿಮೂರ್ತಿಗಳಿಗೆ ದೇವಿಯು ಏಕೀಭಾವಾನಂದ ಅಥವಾ ಸಾಮರಸ್ಯವೆಂಬ ಪರಮಸೌಖ್ಯವನ್ನು ಕೊಡುವಳೆಂದು ಭಾವವು. ಅಖಂಡಸಚ್ಚಿದಾನಂದ ರೂಪಳಾದ ಪರದೇವತೆಯ ಸಾಕ್ಷಾತ್ಕಾರದಿಂದ ಅಂತಹ ಪರದೇವತಾ ರೂಪವಾದ ಮೋಕ್ಷವು ಲಭಿಸುವುದು. ಪರದೇವತಾ ಜ್ಞಾನದಿಂದ ಬೇರೊಂದು ರೂಪವಾದ ಫಲಪ್ರಾಪ್ತಿಯು ನ್ಯಾಯವಿರುದ್ಧವಾದುದು. ಅಖಂಡಸಚ್ಚಿದಾನಂದ ಬ್ರಹ್ಮಸ್ವರೂಪವು ಫಲ

ನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ" ಇತಿ "ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋಽಭಯಂ ಗತೋ ಭವತಿ, ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್" ಇತ್ಯಾದಿ ಬಹುಶ್ರುತಿಭ್ಯಃ ಅಖಂಡಸಚ್ಚಿದಾನಂದಬ್ರಹ್ಮಸ್ವರೂಪತಯಾ ಸ್ಯೈವ ಫಲಂ ಭವತಿ। ಅನ್ಯಜ್ಞಾನಾದನ್ಯಫಲಪ್ರಾಪ್ತೇರಯೋಗಾತ್। "ಬ್ರಹ್ಮ ವೇದ ಬ್ರಹ್ಮೈವ ಭವತಿ, ತರತಿ ಶೋಕಮಾತ್ಮವಿತ್, ಯೇನ ಮಾಮುಪಯಾಂತಿ ತೇ, ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್, ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಇ

---

ವೆಂಬುದಾಗಿ "ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ। ಯತ್ರಾನ್ಯತ್ಪಶ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಮ್, ನಾಲ್ಪೇ ಸುಖಮಸ್ತಿ, ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ, ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೆ ಅಥ ಸೋಽಭಯಂ ಗತೋ ಭವತಿ, ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್" ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ. ಇಂತಹ ಫಲವು ಬ್ರಹ್ಮಸ್ವರೂಪ ಜ್ಞಾನದಿಂದ ಲಭ್ಯವೆಂಬುದನ್ನು "ಬ್ರಹ್ಮ ವೇದ ಬ್ರಹ್ಮೈವ ಭವತಿ, ತರತಿ ಶೋಕಮಾತ್ಮವಿತ್, ಯೇನ ಮಾಮುಪಯಾಂತಿ ತೇ, ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್, ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಇತ್ಯಾದಿ ಶ್ರುತಿಸ್ಮೃತಿ ವಚನಗಳು ಹೇಳುತ್ತಿವೆ. ಆದ್ದರಿಂದ ಪರದೇವತಾ ಸಾಕ್ಷಾತ್ಕಾರದಿಂದ ಹುಟ್ಟುವ ಮುಕ್ತ್ಯಾನಂದ ಫಲವು ಪರದೇವತಾರೂಪವೇ ಆದುದೆಂದು ಸಿದ್ಧಾಂತವು. ಹ್ರೀಂಕಾರೀ

ತ್ಯಾದಿ ಶ್ರುತಿಸ್ಮೃತಿಶತೇಭ್ಯಃ ಸ್ವಸ್ವರೂಪಪ್ರಾಪ್ತೇರೇವ ಪುರುಷಾರ್ಥಸ್ಯ ಪ್ರದಾತೃತ್ವಂ ಸಿದ್ಧಮ್ ॥

**ಇತಿ ತ್ರಿಶತ್ಯಾಂ ವಿದ್ಯಾಯಾಂ ಪಂಚದಶಾಕ್ಷರನಾಮ ವ್ಯಾಖ್ಯಾಯಾಂ ಹ್ರೀಂಕಾರವರ್ಣಪ್ರಕಾಶಃ ಪಂಚದಶಃ**

**ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಸ್ಯ ಶ್ರೀಗೋವಿಂದಭಗವತ್ಪೂಜ್ಯಪಾದಶಿಷ್ಯಸ್ಯ ಶ್ರೀಮಚ್ಛಂಕರಭಗವತಃ ಕೃತೌ ಶ್ರೀಲಲಿತಾತ್ರಿಶತೀಭಾಷ್ಯಂ ಸಂಪೂರ್ಣಮ್**

---

ಪರಾಃ, ತೇಷಾಂ, ಸೌಖ್ಯಂ ದದಾತಿ ಅಥವಾ ಹ್ರೀಂಕಾರೇಭ್ಯಃ ಪರಂ ಸೌಖ್ಯಂ ದದಾತೀ ಎಂದು ವಿಗ್ರಹವು.

ಲಲಿತಾ ತ್ರಿಶತೀ ನಾಮ ವ್ಯಾಖ್ಯಾನದಲ್ಲಿ ಪಂಚದಶ ಪ್ರಕಾಶವು ಸಮಾಪ್ತವು.

ಲಲಿತಾ ತ್ರಿಶತೀ ಸ್ತೋತ್ರಭಾಷ್ಯಾನುವಾದವು ಸಮಾಪ್ತವು.

*

॥ ಶ್ರೀ ॥

# ಲಲಿತಾ ತ್ರಿಶತೀ ಸ್ತೋತ್ರ ಫಲಶ್ರುತಿಃ.

ಇತ್ಯೇವಂ ತೇ ಮಯಾಖ್ಯಾತಂ ದೇವ್ಯಾ ನಾಮಶತತ್ರಯಮ್ ।
ರಹಸ್ಯಾತಿರಹಸ್ಯತ್ವಾದ್ಗೋಪನೀಯಂ ತ್ವಯಾ ಮುನೇ ॥ ೧ ॥
ಶಿವವರ್ಣಾನಿ ನಾಮಾನಿ ಶ್ರೀ ದೇವ್ಯಾ ಕಥಿತಾನಿ ಹಿ ।
ಶಕ್ತ್ಯಕ್ಷರಾಣಿ ನಾಮಾನಿ ಕಾಮೇಶಕಥಿತಾನಿ ಚ ॥ ೨ ॥
ಉಭಯಾಕ್ಷರನಾಮಾನಿ ಹ್ಯುಭಾಭ್ಯಾಂ ಕಥಿತಾನಿ ವೈ ।
ತದನ್ಯೈರ್ಗ್ರಥಿತಂ ಸ್ತೋತ್ರಮೇತಸ್ಯ ಸದೃಶಂ ಕಿಮು ॥ ೩ ॥

---

೧. ಮುನಿಯೇ! ಈ ರೀತಿಯಾಗಿ ದೇವಿಯ ನಾಮತ್ರಿಶತೀ ಸ್ತೋತ್ರವನ್ನು ನಾನು ನಿನಗೆ ಉಪದೇಶಿಸಿರುವೆನು. ನೀನು ರಹಸ್ಯಗಳಲ್ಲಿ ಅತಿರಹಸ್ಯವಾದ ಈ ಸ್ತುತಿಯನ್ನು ಪ್ರಕಾಶವಾಗದಂತೆ ಯತ್ನದಿಂದ ರಕ್ಷಿಸಬೇಕು.

೨. ಇವುಗಳಲ್ಲಿ ಶಿವವರ್ಣಗಳಿಂದ ಉಪಕ್ರಮವಾಗುವ ನಾಮಗಳು ಶ್ರೀ ಕಾಮೇಶೀ ದೇವಿಯಿಂದಲೂ ಶಕ್ತಿ ಅಕ್ಷರಗಳಿಂದ ಕೂಡಿದ ನಾಮಗಳು ಶ್ರೀ ಕಾಮೇಶ್ವರನಿಂದಲೂ ಪಠಿಸಲ್ಪಟ್ಟಿವೆ.

೩. ಶಿವ–ಶಕ್ತಿಯೆಂಬಿಬ್ಬರ ವರ್ಣಗಳಿಂದ ಮೊದಲಾಗುವ ನಾಮಗಳು ಅವರಿಬ್ಬರಿಂದ ಹೇಳಲ್ಪಟ್ಟಿವೆ ಯೆಂದು ಪ್ರಸಿದ್ಧವಾಗಿವೆ. ಆದ್ದರಿಂದ ಇತರರಿಂದ ರಚಿತವಾದ ಸ್ತೋತ್ರಗಳು ಶ್ರೀ ಕಾಮೇಶ–ಕಾಮೇಶಿಯರಿಂದ ರಚಿತವಾದ ಸ್ತೋತ್ರಕ್ಕೆ ಸಮಾನವಾಗುವುದು ಹೇಗೆ?

ನಾನೇನ ಸದೃಶಂ ಸ್ತೋತ್ರಂ ಶ್ರೀ ದೇವೀಪ್ರೀತಿದಾಯಕಮ್ ।
ಲೋಕತ್ರಯೇಽಪಿ ಕಲ್ಯಾಣಂ ಸಂಭವೇನ್ನಾತ್ರ ಸಂಶಯಃ ॥ ೪ ॥

ಇತಿ ಹಯಮುಖಗೀತಂ ಸ್ತೋತ್ರರಾಜಂ ನಿಶಮ್ಯ
ಪ್ರಗಲಿತಕಲುಷೋಽಭೂಚ್ಚಿತ್ತಪರ್ಯಾಪ್ತಿಮೇತ್ಯ ।
ನಿಜಗುರುಮಥ ನತ್ವಾ ಕುಂಭಜನ್ಮಾ ತದುಕ್ತಂ
ಪುನರಧಿಕರಹಸ್ಯಂ ಜ್ಞಾತುಮೇವಂ ಜಗಾದ ॥ ೫ ॥

॥ ಅಗಸ್ತ್ಯ ಉವಾಚ ॥

ಅಶ್ವಾನನ ಮಹಾಭಾಗ ರಹಸ್ಯಮಪಿ ಮೇ ವದ ।
ಶಿವವರ್ಣಾನಿ ಕಾನ್ಯತ್ರ ಶಕ್ತಿವರ್ಣಾನಿ ಕಾನಿ ಹಿ ॥ ೬ ॥

ಉಭಯೋರಪಿ ವರ್ಣಾನಿ ಕಾನಿ ವಾ ವದ ದೇಶಿಕ ।
ಇತಿ ಪೃಷ್ಟಃ ಕುಂಭಜೇನ ಹಯಗ್ರೀವೋಽವದತ್ ಪುನಃ ॥ ೭ ॥

---

೪. ಶ್ರೀ ದೇವಿಗೆ ಪ್ರೀತಿಯನ್ನುಂಟುಮಾಡಿ ಲೋಕತ್ರಯಕ್ಕೆ ಕಲ್ಯಾಣವನ್ನುಂಟುಮಾಡುವ ಸಾಧನವಾದ ಸ್ತೋತ್ರವು ಇದಕ್ಕೆ ಸಮಾನವಾಗಿ ಮತ್ತೊಂದು ಇಲ್ಲ.

೫. ಅಗಸ್ತ್ಯಮುನಿಯು ಹಯಗ್ರೀವಗುರುವಿನಿಂದ ಉಪದೇಶಿಸಲ್ಪಟ್ಟ ಈ ಸ್ತೋತ್ರರಾಜವನ್ನು ಶ್ರವಣಮಾಡಿ ನಾಶಹೊಂದಿದ ಸಕಲ ದುರಿತವುಳ್ಳವನಾಗಿ ಚಿತ್ತದಲ್ಲಿ ಕೃತಕೃತ್ಯತೆಯಿಂದ ವಿಶ್ರಾಂತಿಯನ್ನು ಹೊಂದಿದನು, ತರುವಾಯ ತನ್ನ ಗುರುವನ್ನು ಮತ್ತೊಮ್ಮೆ ವಂದಿಸಿ ಅವನಿಂದ ಉಪದಿಷ್ಟವಾದ ಇನ್ನೂ ಹೆಚ್ಚಿನ ರಹಸ್ಯವನ್ನು ತಿಳಿಯಲು ಮತ್ತೆ ಈ ರೀತಿಯಾಗಿ ಪ್ರಶ್ನಿಸಿದನು.

೬. ಅಗಸ್ತ್ಯಮುನಿಯು ಈ ರೀತಿಯಾಗಿ ಹೇಳಿದನು; ಮಹಾತ್ಮನಾದ ಹಯಗ್ರೀವ ಮುನಿಯೇ! ರಹಸ್ಯವಾಗಿದ್ದರೂ ಇದೊಂದು ವಿಷಯವನ್ನು ನನಗೆ ಉಪದೇಶಿಸು. ವಿಶಿಷ್ಟಮಂತ್ರದಲ್ಲಿ ಶಿವವರ್ಣಗಳು ಯಾವುವು? ಹಾಗು ಶಕ್ತಿವರ್ಣಗಳು ಯಾವುವು?

೭. ಗುರುವೇ! ಶಿವ-ಶಕ್ತಿ ಉಭಯರವರ್ಣಗಳು ಯಾವುವು? ಇದನ್ನು ಹೇಳಬೇಕು. ಎಂಬುದಾಗಿ ಅಗಸ್ತ್ಯನಿಂದ ಪ್ರಶ್ನಿಸಲ್ಪಟ್ಟ ಹಯಗ್ರೀವ ಮುನಿಯು ಮತ್ತೆ ಹೀಗೆ ಹೇಳಿದನು.

**ತವ ಗೋಪ್ಯಂ ಕಿಮಸ್ತೀಹ ಸಾಕ್ಷಾದಂಬಾನುಶಾಸನಾತ್ ।**
**ಇದಂ ತ್ವತಿರಹಸ್ಯಂ ತೇ ವಕ್ಷ್ಯಾಮಿ ಶೃಣು ಕುಂಭಜ ॥ ೮ ॥**

**ಏತದ್ವಿಜ್ಞಾನಮಾತ್ರೇಣ ಶ್ರೀ ವಿದ್ಯಾ ಸಿದ್ಧಿದಾ ಭವೇತ್ ।**
**ಕತ್ರಯಂ ಹದ್ವಯಂ ಚೈವ ಶೈವೋ ಭಾಗಃ ಪ್ರಕೀರ್ತಿತಃ ॥ ೯ ॥**

**ಶಕ್ತ್ಯಕ್ಷರಾಣಿ ಶೇಷಾಣಿ ಹ್ರೀಂಕಾರ ಉಭಯಾತ್ಮಕಃ ।**
**ಏವಂ ವಿಭಾಗಮಜ್ಞಾತ್ವಾ ಯೇ ವಿದ್ಯಾಜಪಶಾಲಿನಃ ॥೧೦॥**

**ನ ತೇಷಾಂ ಸಿದ್ಧಿದಾ ವಿದ್ಯಾ ಕಲ್ಪಕೋಟಿಶತೈರಪಿ ।**
**ಚತುರ್ಭಿಃ ಶಿವಚಕ್ರೈಶ್ಚ ಶಕ್ತಿಚಕ್ರೈಶ್ಚ ಪಂಚಭಿಃ ॥೧೧॥**

---

೮. ಕುಂಭದಲ್ಲಿ ಜನ್ಮವೆತ್ತಿದ ಮಹಾಮಹಿಮನಾದ ಅಗಸ್ತ್ಯಮುನಿಯೆ! ಸಾಕ್ಷಾತ್ತಾಗಿ ಲಲಿತಾಂಬಿಕೆಯು ಆಜ್ಞೆಮಾಡಿರುವುದರಿಂದ ನಿನಗೆ ತಿಳಿಸದೆ ಗೋಪ್ಯವಾಗಿರಿಸಬೇಕಾದ್ದು ಏನು ತಾನೆ ಇದೆ? ಅತಿ ರಹಸ್ಯವಾದ ಈ ವಿಷಯವನ್ನು ನಿನಗೆ ಹೇಳುತ್ತೇನೆ ಕೇಳು.

೯. ಈ ರಹಸ್ಯ ವಿಜ್ಞಾನ ಮಾತ್ರದಿಂದ ಶ್ರೀವಿದ್ಯೆಯು ಮಂತ್ರ ಸಿದ್ಧಿ ಫಲವನ್ನು ಕೊಡುವುದು. ಮಂತ್ರರಾಜದಲ್ಲಿ ಮೂರು ಕವರ್ಣಗಳು ಮತ್ತು ಎರಡು ಹಕಾರಗಳು ಶಿವಾಕ್ಷರಭಾಗವೆಂದು ಕೀರ್ತಿಸಲ್ಪಟ್ಟಿವೆ.

೧೦. ಮಿಕ್ಕ ಅಕ್ಷರಗಳೆಲ್ಲವೂ ಶಕ್ತಿವರ್ಣಗಳು. ಹ್ರೀಂಕಾರವು ಉಭಯಾಕ್ಷರವೆಂದು ಕೀರ್ತಿಸಲ್ಪಟ್ಟಿರುವುದು. ಶ್ರೀ ಲಲಿತಾ ಮಂತ್ರ ಜಪವನ್ನು ಆಚರಿಸುವವರು ಈ ರೀತಿಯ ಮಂತ್ರವರ್ಣ ವಿಭಾಗವನ್ನು ತಿಳಿದುಕೊಳ್ಳುವುದು ಆವಶ್ಯಕವು.

೧೧. ಮಂತ್ರವರ್ಣ ವಿಭಾಗ ಜ್ಞಾನವಿಲ್ಲದಿದ್ದರೆ ಶ್ರೀ ವಿದ್ಯೆಯು ಅಂತಹವರಿಗೆ ನೂರಾರು ಕೋಟಿ ಕಲ್ಪಗಳು ಕಳೆದರೂ ಸಿದ್ಧಿಯನ್ನು ಕೊಡುವುದಿಲ್ಲ.

ನವಚಕ್ರೈಶ್ಚ ಸಂಸಿದ್ಧಂ ಶ್ರೀ ಚಕ್ರಂ ಶಿವಯೋರ್ವಪುಃ ।
ತ್ರಿಕೋಣಮಷ್ಟಕೋಣಂ ಚ ದಶಕೋಣದ್ವಯಂ ತಥಾ ॥೧೨॥

ಚತುರ್ದಶಾರಂ ಚೈತಾನಿ ಶಕ್ತಿಚಕ್ರಾಣಿ ಪಂಚ ಚ ।
ಬಿಂದುಶ್ಚಾಷ್ಟದಲಂ ಪದ್ಮಂ ಪದ್ಮಂ ಷೋಡಶಪತ್ರಕಮ್ ॥೧೩॥

ಚತುರಶ್ರಂ ಚ ಚತ್ವಾರಿ ಶಿವಚಕ್ರಾಣ್ಯನುಕ್ರಮಾತ್ ।
ತ್ರಿಕೋಣೇ ಬೈಂದವಂ ಶ್ಲಿಷ್ಟಮಷ್ಟಾರೇಽಷ್ಟದಲಾಂಬುಜಮ್ ॥೧೪॥

ದಶಾರಯೋಃ ಷೋಡಶಾರಂ ಭೂಗೃಹಂ ಭುವನಾಶ್ರಕೇ
ಶೈವಾನಾಮಪಿ ಶಾಕ್ತಾನಾಂ ಚಕ್ರಾಣಾಂ ಚ ಪರಸ್ಪರಮ್ ॥೧೫॥

ಅವಿನಾಭಾವಸಂಬಂಧಂ ಯೋ ಜಾನಾತಿ ಸ ಚಕ್ರವಿತ್ ।
ತ್ರಿಕೋಣರೂಪಿಣೀ ಶಕ್ತಿರ್ಬಿಂದುರೂಪಪರಃ ಶಿವಃ ॥೧೬॥

---

೧೨. ಶ್ರೀ ಚಕ್ರರಾಜವು ನಾಲ್ಕು ಶಿವಚಕ್ರಗಳಿಂದಲೂ ಐದು ಶಕ್ತಿ ಚಕ್ರಗಳಿಂದಲೂ ಸಂಪೂರ್ಣವಾಗಿ ಒಟ್ಟು ಒಂಭತ್ತು ಚಕ್ರಮಯವಾಗಿ ಶಿವದಂಪತಿಗಳ ಶರೀರರೂಪವಾಗಿರುವುದು.

೧೩. ಮತ್ತು ಇವುಗಳಲ್ಲಿ ತ್ರಿಕೋಣ, ಅಷ್ಟ ಕೋಣ, ಎರಡು ದಶ ಕೋಣ, ಮತ್ತು ಚತುರ್ದಶಕೋಣ ವೆಂಬ ಐದು ಚಕ್ರಗಳು ಶಕ್ತಿ ಚಕ್ರಗಳೆಂದೆನಿಸಿರುವುವು.

೧೪. ಹಾಗು ಬಿಂದು, ಅಷ್ಟದಳಪದ್ಮ, ಷೋಡಶದಳಪದ್ಮ, ಮತ್ತು ಚತುರಸ್ರಗಳೆಂಬುವು ನಾಲ್ಕು ಕ್ರಮವಾಗಿ ಶಿವಚಕ್ರಗಳೆಂಬುದಾಗಿ ತಿಳಿಯಬೇಕು.

೧೫. ಹಿಂದೆ ಹೇಳಿರುವ ಶಿವ-ಶಕ್ತಿ ಚಕ್ರಗಳ ಪೈಕಿ ತ್ರಿಕೋಣವೆಂಬ ಶಕ್ತಿ ಚಕ್ರದಲ್ಲಿ ಬೈಂದವವೆಂಬ ಶಿವಚಕ್ರವು ಅವಿನಾಭೂತ ಸಂಬಂಧವನ್ನು ಹೊಂದಿದೆ. ಹಾಗೆಯೇ ಅಷ್ಟಕೋಣದಲ್ಲಿ ಅಷ್ಟದಲಪದ್ಮವೂ, ಎರಡು ದಶಕೋಣಗಳಲ್ಲಿ ಷೋಡಶದಳಪದ್ಮವೂ, ಚತುರ್ದಶಕೋಣದಲ್ಲಿ ಚತುರಶ್ರ ಅಥವಾ ಭೂಗೃಹವೂ ನಿತ್ಯಸಂಬಂಧವನ್ನು ಹೊಂದಿಕೊಂಡಿರುವುದು. ಹೀಗೆಯೇ ಶೈವ-ಶಾಕ್ತಚಕ್ರಗಳು ಪರಸ್ಪರ ಸಂಬಂಧವನ್ನು ಹೊಂದಿಕೊಂಡಿವೆ.

೧೬. ಈ ಪರಸ್ಪರವಾದ ಅವಿನಾಭಾವ ಸಂಬಂಧವನ್ನು ಯಾವ ಮಾನವನು ತಿಳಿಯುವನೋ ಅವನು ಶ್ರೀ ಚಕ್ರವಿಷಯದ ತಾತ್ತ್ವಿಕಜ್ಞಾನವುಳ್ಳವ

ಅವಿನಾಭಾವಸಂಬಂಧಂ ತಸ್ಮಾದ್ಬಿಂದುತ್ರಿಕೋಣಯೋಃ ।
ಏವಂ ವಿಭಾಗಮಜ್ಞಾತ್ವಾ ಶ್ರೀ ಚಕ್ರಂ ಯಃ ಸಮರ್ಚಯೇತ್ ॥೧೭॥

ನ ತತ್ಫಲಮವಾಪ್ನೋತಿ ಲಲಿತಾಂಬಾ ನ ತುಷ್ಯತಿ ।
ಯೇ ಚ ಜಾನಂತಿ ಲೋಕೇಽಸ್ಮಿನ್ ಶ್ರೀ ವಿದ್ಯಾ ಚಕ್ರವೇದಿನಃ ॥೧೮॥

ಸಾಮಾನ್ಯವೇದಿನಃ ಸರ್ವೇ ವಿಶೇಷಜ್ಞೋಽತಿದುರ್ಲಭಃ ।
ಸ್ವಯಂ ವಿದ್ಯಾವಿಶೇಷಜ್ಞೋ ವಿಶೇಷಜ್ಞಂ ಸಮರ್ಚಯೇತ್ ॥೧೯॥

ತಸ್ಮೈ ದೇಯಂ ತತೋ ಗ್ರಾಹ್ಯಮಶಕ್ತಸ್ತಸ್ಯ ದಾಪಯೇತ್ ।
ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಂ ಸಮುಪಾಸತೇ ॥೨೦॥

---

ನೆಂದು ಭಾವಿಸಬೇಕು. ಶಕ್ತಿಯು ತ್ರಿಕೋಣರೂಪಳಾಗಿ ಇರುವಳು, ಶಿವನು ಬಿಂದು ರೂಪದಿಂದ ಇರುವನು.

೧೭. ಆದುದರಿಂದ ಬಿಂದು ತ್ರಿಕೋಣಗಳಿಗೆ ಅವಿನಾಭಾವ ಸಂಬಂಧವು ಇರುವುದು. ಈ ರೀತಿಯ ವಿಭಾಗವನ್ನು ತಿಳಿಯದೆ ಶ್ರೀ ಚಕ್ರವನ್ನು ಪೂಜಿಸುವುದು ಉತ್ತಮವಲ್ಲ.

೧೮ ಹಾಗೆ ಅಜ್ಞಾನದಿಂದ ಪೂಜಿಸಿದರೆ ಲಲಿತಾಂಬಿಕೆಗೆ ತೃಪ್ತಿಯಾಗದಿರುವುದರಿಂದ ಪೂಜಾಫಲವನ್ನು ಹೊಂದುವುದಿಲ್ಲ. ಈ ಲೋಕದಲ್ಲಿ ಶ್ರೀ ವಿದ್ಯಾ ಶ್ರೀ ಚಕ್ರಗಳ ಸ್ವರೂಪವನ್ನು ಅರಿತವರು ಇರಬಹುದು.

೧೯. ಆದರೆ ಅವರೆಲ್ಲರೂ ಸಾಮಾನ್ಯಜ್ಞರಾಗಿರುವರು. ವಿಶೇಷ ಜ್ಞಾನಿಯು ಬಹು ವಿರಳನಾಗಿರುವನು. ವಿದ್ಯಾವಿಶೇಷವನ್ನು ಅರಿತ ಮಾನವನು ತಾನು ಮತ್ತೊಬ್ಬ ವಿದ್ಯಾವಿಶೇಷಜ್ಞನನ್ನು ಸತ್ಕರಿಸಬೇಕು.

೨೦. ಅಂತಹ ವಿಶೇಷಜ್ಞನಲ್ಲಿ ಸಂತೋಷದಿಂದ ಪೂಜಾಸತ್ಕಾರದಾನ ಮಾನಾದಿಗಳನ್ನು ಆಚರಿಸಬೇಕು. ಮತ್ತು ಅಂತಹವನಿಂದಲೇ ತಾನು–ಗ್ರಹಿಸಬೇಕು. ಅಂತಹ ವಿಶೇಷಜ್ಞನಿಗೆ ದಾನಮಾಡಲು ತನಗೆ ಶಕ್ತಿಯಿಲ್ಲದ ಪಕ್ಷದಲ್ಲಿ ಬೇರೊಬ್ಬರಿಂದ ಅವನಿಗೆ ದಾನಮಾಡಿಸಬೇಕು. ದಾನಮಾಡುವುದಾದರೆ ವಿಶೇಷಜ್ಞನಿಗೆ ಕೊಡುವ ಅಥವಾ ವಿಶೇಷಜ್ಞನಿಂದ ಪ್ರತಿಗ್ರಹಿಸುವ ದಾನವು ಉತ್ತಮವಾದುದು "ಯಾರು ಅವಿದ್ಯೆಯನ್ನು ಉಪಾಸನೆ ಮಾಡುವರೋ ಅವರು ಅಂಧ ತಮಸ್ಸನ್ನು ಹೊಂದುತ್ತಾರೆ"

ಇತಿ ಶ್ರುತಿರಪಾಹೈತಾನವಿದ್ಯೋಪಾಸಕಾನ್ ಪುನಃ ।
ವಿದ್ಯಾನ್ಯೋಪಾಸಕಾನೇವ ನಿಂದತ್ಯಾರುಣಿಕೀ ಶ್ರುತಿಃ ॥೨೧॥
ಅಶ್ರುತಾ ಸಶ್ರುತಾಸಶ್ಚ ಯಜ್ವಾನೋ ಯೇಽಪ್ಯಯಜ್ವನಃ ।
ಸ್ವರ್ಯಂತೋ ನಾಪೇಕ್ಷಂತೇ ಇಂದ್ರಮಗ್ನಿಂ ಚ ಯೇ ವಿದುಃ । ॥೨೨॥
ಸಿಕತಾ ಇವ ಸಂಯಂತಿ ರಶ್ಮಿಭಿಃ ಸಮುದೀರಿತಾಃ ।
ಅಸ್ಮಾಲ್ಲೋಕಾದಮುಷ್ಮಾಚ್ಚೇತ್ಯಾಹ ಚಾರಣ್ಯಕಶ್ರುತಿಃ ॥೨೩॥
ಯಸ್ಯ ನೋ ಪಶ್ಚಿಮಂ ಜನ್ಮ ಯದಿ ವಾ ಶಂಕರಃ ಸ್ವಯಮ್ ।
ತೇನೈವ ಲಭ್ಯತೇ ವಿದ್ಯಾ ಶ್ರೀಮತ್ಪಂಚದಶಾಕ್ಷರೀ ॥೨೪॥
ಇತಿ ಮಂತ್ರೇಷು ಬಹುಧಾ ವಿದ್ಯಾಯಾ ಮಹಿಮೋಚ್ಯತೇ ।
ಮೋಕ್ಷೈಕಹೇತುವಿದ್ಯಾ ತು ಶ್ರೀವಿದ್ಯಾ ನಾತ್ರ ಸಂಶಯಃ ॥೨೫॥

---

೨೧. ಎಂಬುದಾಗಿ ಶ್ರುತಿಯು ಅವಿದ್ಯೋಪಾಸಕರನ್ನು ನಿಂದಿಸಿರುವುದು. ಹಾಗೆಯೇ ಆರುಣ ಶ್ರುತಿಯು ವಿದ್ಯೆಯನ್ನು ಬಿಟ್ಟು ಯಾವುದನ್ನೇ ಉಪಾಸನೆ ಮಾಡಿದರೂ ಅಂತಹ ಉಪಾಸಕರನ್ನು ನಿಂದಿಸಿದೆ.

೨೨ ವೇದಶಾಸ್ತ್ರಾಧ್ಯಯನವನ್ನು ಮಾಡಲಿ,ಮಾಡದಿರಲಿ,ಯಾಗಾದಿಸತ್ಕರ್ಮಗಳನ್ನು ಆಚರಿಸಲಿ, ಆಚರಿಸದಿರಲಿ, ಅಥವಾ ಇಂದ್ರ, ಅಗ್ನಿ ಮುಂತಾದ ದೇವತಾ ವಿಜ್ಞಾನವು ಇದ್ದು ಸ್ವರ್ಗಲೋಕಕ್ಕೆ ಹೋಗುವ ಅಭಿಲಾಷೆಯುಳ್ಳವರು ಈ ಶ್ರೀ ವಿದ್ಯೆಯನ್ನು ಅಪೇಕ್ಷಿಸುವುದಿಲ್ಲ.

೨೩. ಮುಕ್ತಿ ಪುರುಷಾರ್ಥಕ್ಕೆ ಬಾಹ್ಯವಾದ ಇತರ ಫಲಾಪೇಕ್ಷೆಯಿಂದ ಕಾಮ್ಯ ಕರ್ಮಾನುಷ್ಠಾನವನ್ನು ಮಾಡುವವರು ಸೂರ್ಯರಶ್ಮಿಗಳಿಂದ ಪ್ರೇರಿಸಲ್ಪಟ್ಟ ಧೂಳಿಯ ಚೂರುಗಳಂತೆ ಇಹ-ಪರಲೋಕಗಳಿಂದ ಸಂತತವಾಗಿ ಚಲಿಸುತ್ತಿರುವರು ಎಂದು ಆರಣ್ಯಕ ಶ್ರುತಿಯು ಹೇಳುವುದು.

೨೪. ಕಡೆಯ ಮತ್ತೊಂದು ಜನ್ಮವಿಲ್ಲದವನೂ ಅಥವಾ ಸ್ವಯಂ ಶಂಕರನೂ ಆಗಿದ್ದವನಿಗೆ ಶ್ರೀಮತ್ಪಂಚದಶಾಕ್ಷರೀ ವಿದ್ಯೆಯು ಲಭಿಸುವುದು.

೨೫. ಈ ರೀತಿಯಾಗಿ ಶ್ರುತಿಮಂತ್ರಗಳಲ್ಲಿ ಅನೇಕ ಬಗೆಯಿಂದ ಶ್ರೀ ವಿದ್ಯೆಯ ಮಹಿಮೆಯು ಶ್ಲಾಘಿಸಲ್ಪಟ್ಟಿದೆ. ಮೋಕ್ಷಪುರುಷಾರ್ಥಕ್ಕೆ ಮುಖ್ಯ ಸಾಧನವಾದ ವಿದ್ಯೆಯು ಶ್ರೀ ವಿದ್ಯೆಯೆಂಬುದರಲ್ಲಿ ಸಂಶಯವಿಲ್ಲ.

ನ ಶಿಲ್ಪಾದಿಜ್ಞಾನಯುಕ್ತೇ ವಿದ್ವಚ್ಛಬ್ಧಃ ಪ್ರಯುಜ್ಯತೇ ।
ಮೋಕ್ಷೈಕಹೇತುವಿದ್ಯಾ ಸಾ ಶ್ರೀ ವಿದ್ಯೈವ ನ ಸಂಶಯಃ ॥೨೬॥

ತಸ್ಮಾದ್ವಿದ್ಯಾವಿದೇವಾತ್ರ ವಿದ್ವಾನ್ ವಿದ್ವಾನಿತೀರ್ಯತೇ ।
ಸ್ವಯಂ ವಿದ್ಯಾವಿದೇ ದದ್ಯಾತ್ ಖ್ಯಾಪಯೇತ್ತದ್ಗುಣಾನ್ ಸುಧೀಃ ॥೨೭॥

ಸ್ವಯಂ ವಿದ್ಯಾರಹಸ್ಯಜ್ಞೋ ವಿದ್ಯಾಮಾಹಾತ್ಮ್ಯವೇದ್ಯಪಿ ।
ವಿದ್ಯಾವಿದಂ ನಾರ್ಚಯೇಚ್ಚೇತ್ ಕೋ ವಾ ತಂ ಪೂಜಯೇಜ್ಜನಃ ॥೨೮॥

ಪ್ರಸಂಗಾದಿದಮುಕ್ತಂ ತೇ ಪ್ರಕೃತಂ ಶೃಣು ಕುಂಭಜ ।
ಯಃ ಕೀರ್ತಯೇತ್ ಸಕೃದ್ಭಕ್ತ್ಯಾ ದಿವ್ಯನಾಮ ಶತತ್ರಯಮ್ ॥೨೯॥

ತಸ್ಯ ಪುಣ್ಯಮಹಂ ವಕ್ಷ್ಯೇ ಶೃಣು ತ್ವಂ ಕುಂಭಸಂಭವ ।
ರಹಸ್ಯನಾಮಸಾಹಸ್ರಪಾಠೇ ಯತ್ಫಲಮೀರಿತಮ್ ॥೩೦॥

---

೨೬. ಶಿಲ್ಪಾದಿ ವಿಜ್ಞಾನಾತಿಶಯದಿಂದ ಕೂಡಿದ ಮಾತ್ರಕ್ಕೆ ಅಂತಹ ಮಾನವನಿಗೆ ವಿದ್ವಾನ್ ಎಂಬ ಸಂಜ್ಞಾಶಬ್ದ ಪ್ರಯೋಗವು ಅನ್ವಯಿಸುವುದಿಲ್ಲ, ಮೋಕ್ಷಕ್ಕೆ ಅಸಾಧಾರಣಕಾರಣವಾದ ಅಂತಹ ವಿದ್ಯೆಯು ಶ್ರೀ ವಿದ್ಯೆಯಾಗಿರುವುದು. ಇದು ನಿಸ್ಸಂದೇಹವಾದುದು.

೨೭. ಆದ್ದರಿಂದ ಶ್ರೀ ವಿದ್ಯಾ ಅಭಿಜ್ಞನು ಇಲ್ಲಿ ವಿದ್ವಾನ್, ಎಂಬ ಹೆಸರಿನಿಂದ ಕರೆಯಲ್ಪಡುತ್ತಾನೆ. ಆದ್ದರಿಂದ ಜ್ಞಾನಿಯು ತಾನು ವಿದ್ಯಾವೇತ್ತನಿಗೆ ದಾನಮಾಡಬೇಕು. ಮತ್ತು ಅವನ ಸದ್ಗುಣಗಳನ್ನು ಪ್ರಕಾಶಪಡಿಸಬೇಕು.

೨೮. ತಾನು ವಿದ್ಯಾರಹಸ್ಯವನ್ನು ತಿಳಿದವನಾಗಿ, ವಿದ್ಯಾಮಾಹಾತ್ಮ್ಯವನ್ನು ಅರಿತವನಾಗಿ ಅಂತಹ ಮತ್ತೊಬ್ಬ ವಿದ್ಯಾವಿಶೇಷಜ್ಞನನ್ನು ಪೂಜಿಸದಿದ್ದರೆ ಮತ್ತಾವ ಜನರು ಅವನನ್ನು ಪೂಜಿಸುವರು?

೨೯. ಅಗಸ್ತ್ಯಮುನಿಯೆ! ಪ್ರಾಸಂಗಿಕವಾಗಿ ಈ ವಿಚಾರವನ್ನು ನಿನಗೆ ಹೇಳಿರುವೆನು. ಪ್ರಕೃತ ವಿಷಯವನ್ನು ಕೇಳು; ಈ ದಿವ್ಯವಾದ ನಾಮತ್ರಿಶತೀಸ್ತೋತ್ರವನ್ನು ಒಂದಾವರ್ತಿ ಭಕ್ತಿಯಿಂದ ಕೀರ್ತಿಸಿದ ಮಾನವನು ಪುಣ್ಯವಂತನಾಗುವನು.

೩೦. ಅಗಸ್ತ್ಯನೆ! ಅವನ ಪುಣ್ಯರಾಶಿಯನ್ನು ನಾನು ವರ್ಣಿಸುತ್ತೇನೆ.

ತತ್ಫಲಂ ಕೋಟಿಗುಣಿತಮೇಕನಾಮಜಪಾದ್ಭವೇತ್ ।
ಕಾಮೇಶ್ವರೀಕಾಮೇಶಾಭ್ಯಾಂ ಕೃತಂ ನಾಮಶತತ್ರಯಮ್ ॥೩೧॥

ನಾನ್ಯೇನ ತುಲಯೇದೇತತ್ ಸ್ತೋತ್ರೇಣಾನ್ಯಕೃತೇನ ಚ ।
ಶ್ರಿಯಃ ಪರಂಪರಾ ಯಸ್ಯ ಭಾವಿ ವಾ ಚೋತ್ತರೋತ್ತರಮ್ ॥೩೨॥

ತೇನೈವ ಲಭ್ಯತೇ ಚೈತತ್ ಪಶ್ಚಾತ್ ಶ್ರೇಯಃ ಪರೀಕ್ಷಯೇತ್ ।
ಅಸ್ಯಾ ನಾಮ್ನಾಂ ತ್ರಿಶತ್ಯಾಸ್ತು ಮಹಿಮಾ ಕೇನ ವರ್ಣ್ಯತೇ ॥೩೩॥

ಯಾ ಸ್ವಯಂ ಶಿವಯೋರ್ವಕ್ತ್ರಪದ್ಮಾಭ್ಯಾಂ ಪರಿನಿಃಸೃತಾ ।
ನಿತ್ಯಂ ಷೋಡಶಸಂಖ್ಯಾಕಾನ್ ವಿಪ್ರಾನಾದೌ ತು ಭೋಜಯೇತ್ ॥೩೪॥

ಅಭ್ಯಕ್ತಾಂಸ್ತಿಲತೈಲೇನ ಸ್ನಾತಾನುಷ್ಣೇನ ವಾರಿಣಾ ।
ಅಭ್ಯರ್ಚ್ಯ ಗಂಧಪುಷ್ಪಾದ್ಯೈಃ ಕಾಮೇಶ್ವರ್ಯಾದಿನಾಮಭಿಃ ॥೩೫॥

---

ನೀನು ಕೇಳು, ರಹಸ್ಯವಾದ ನಾಮಸಹಸ್ರವನ್ನು ಪಠಿಸುವುದು ಉತ್ತಮ ಫಲಸಿದ್ಧಿಗೆ ಸಾಧನವೆಂದು ಹೇಳಲ್ಪಟ್ಟಿರುವುದಲ್ಲವೆ.

೩೧. ನಾಮ ತ್ರಿಶತಿಯಲ್ಲಿ ಅಂತರ್ಗತವಾದ ಒಂದು ನಾಮ ಜಪದಿಂದ ಅಂತಹ ಫಲವು ಕೋಟಿಗುಣಿತವಾಗಿ ಉಂಟಾಗುವುದು. ಈ ನಾಮ ತ್ರಿಶತಿಯು ಕಾಮೇಶ್ವರೀ ಕಾಮೇಶರಿಂದ ಸ್ವಯಂ ರಚಿತವಾಗಿರುವುದು.

೩೨. ಇದನ್ನು ಇತರರು ರಚಿಸಿರುವ ಸ್ತೋತ್ರಗಳ ಸಂಗಡ ಹೋಲಿಸುವುದು ಉಚಿತವಲ್ಲ. ಲಕ್ಷ್ಮಿಯ ಪರಂಪರೆಗೂ ಉತ್ತರೋತ್ತರ ಶ್ರೇಯಸ್ಸುಗಳಿಗೂ ಭಾಗಿಯಾಗುವವನು ಶ್ರೀ ವಿದ್ಯಾಭಕ್ತನಾಗುವನು.

೩೩. ಈ ನಾಮಶತತ್ರಯವು ಅಂತಹವನಿಗೆ ಲಭಿಸುವುದು. ಇದರ ಪ್ರಾಪ್ತಿಯಿಂದ ಅವನು ಶ್ರೇಯೋವಂತನೆಂದು ಶ್ರೇಯಸ್ಸನ್ನು ಪರೀಕ್ಷಿಸಬೇಕು. ಈ ನಾಮತ್ರಿಶತಿಯ ಮಹಿಮೆಯನ್ನು ವರ್ಣಿಸುವುದು ಯಾರಿಂದ ಸಾಧ್ಯವು?

೩೪. ಇದು ಕಾಮೇಶ್ವರಿ–ಕಾಮೇಶ ಮುಖ ಕಮಲಗಳಿಂದ ತಾನಾಗಿ ಹೊರಟಿರುವುದು. ಇದರ ಉಪಾಸನಾ ಸಮಯದಲ್ಲಿ ಆದಿಯಲ್ಲಿ ನಿತ್ಯವೂ ಹದಿನಾರು ಮಂದಿ ವಿಪ್ರರಿಗೆ ಅನ್ನದಾನಮಾಡಬೇಕು.

೩೫. ಭೋಜನಕ್ಕೆ ನಿಮಂತ್ರಿಸಿದ ಬ್ರಾಹ್ಮಣರಿಗೆ ತಿಲತೈಲ ಉದ್ವರ್ತನ

ಸೂಪಾಪೂಪೈಃ ಶರ್ಕರಾದ್ಯೈಃ ಪಾಯಸೈಃ ಫಲಸಂಯುತೈಃ ।
ವಿದ್ಯಾವಿದೋ ವಿಶೇಷೇಣ ಭೋಜಯೇತ್ ಷೋಡಶ ದ್ವಿಜಾನ್ ॥೩೬॥

ಏವಂ ನಿತ್ಯಾರ್ಚನಂ ಕುರ್ಯಾತ್ ಆದೌ ಬ್ರಾಹ್ಮಣಭೋಜನಮ್ ।
ತ್ರಿಶತೀನಾಮಭಿಃ ಪಶ್ಚಾದ್ಬ್ರಾಹ್ಮಣಾನ್ ಕ್ರಮಶೋಽರ್ಚಯೇತ್ ॥೩೭॥

ತೈಲಾಭ್ಯಂಗಾದಿಕಂ ದತ್ವಾ ವಿಭವೇ ಸತಿ ಭಕ್ತಿತಃ ।
ಶುಕ್ಲಪ್ರತಿಪದಾರಭ್ಯ ಪೌರ್ಣಮಾಸ್ಯವಧಿಕ್ರಮಾತ್ ॥೩೮॥

ದಿವಸೇ ದಿವಸೇ ವಿಪ್ರಾ ಭೋಜ್ಯಾ ವಿಂಶತಿಸಂಖ್ಯಯಾ ।
ದಶಭಿಃ ಪಂಚಭಿರ್ವಾಪಿ ತ್ರಿಭಿರೇಕೇನ ವಾ ದಿನೈಃ ॥೩೯॥

---

ದಿಂದಲೂ ಉಷ್ಣೋದಕದಿಂದಲೂ ಅಭ್ಯಂಜನ ಸ್ನಾನವನ್ನು ಮಾಡಿಸಿ ಕಾಮೇಶ್ವರೀ ನಾಮಗಳಿಂದ ಗಂಧಪುಷ್ಪಾದಿ ಉಪಚಾರಗಳಿಂದ ಅರ್ಚಿಸಬೇಕು.

೩೬. ಮತ್ತು ಸೂಪ, ಅಪೂಪ, ಶರ್ಕರಾ, ಪಾಯಸ, ವಿವಿಧ ಫಲಗಳನ್ನು ನಿವೇದನಮಾಡಿ ವಿಶೇಷವಾಗಿ ವಿದ್ಯಾವಂತರಾದ ಹದಿನಾರುಮಂದಿ ದ್ವಿಜರನ್ನು ಭೋಜನಮಾಡಿಸಬೇಕು.

೩೭. ಈ ರೀತಿಯಾಗಿ ನಿತ್ಯಾರ್ಚನ ಪ್ರಯೋಗದಲ್ಲಿ ಆದಿಯಲ್ಲಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಅನಂತರದಲ್ಲಿ ತ್ರಿಶತೀನಾಮಗಳಿಂದ ಕ್ರಮವಾಗಿ ಬ್ರಾಹ್ಮಣರನ್ನು ಅರ್ಚಿಸಬೇಕು.

೩೮. ಸಂಪತ್ತಿನಸಮೃದ್ಧಿ ಮತ್ತು ಇತರ ಸರ್ವವಿಧ ಶಕ್ತಿಯೂ ಇದ್ದ ಪಕ್ಷದಲ್ಲಿ ಭಕ್ತಿಯಿಂದ ತೈಲಾಭ್ಯಂಗ ಮುಂತಾದುದನ್ನು ಕಲ್ಪಿಸಬೇಕು. ಕ್ರಮವಾಗಿ ಶುಕ್ಲ ಪಕ್ಷದ ಪ್ರತಿಪತ್ ಮೊದಲುಗೊಂಡು ಪೂರ್ಣಿಮಾಪರ್ಯಂತವಾಗಿ ನಿತ್ಯಾರ್ಚನವನ್ನು ಆಚರಿಸಬೇಕು.

೩೯. ಆ ಹದಿನೈದು ದಿನಗಳಲ್ಲಿ ಪ್ರತಿನಿತ್ಯವೂ ಇಪ್ಪತ್ತು ಸಂಖ್ಯೆಯಿಂದ ಬ್ರಾಹ್ಮಣ ಭೋಜನ ಮಾಡಿಸಿದರೆ ಒಟ್ಟಾಗಿ ಮೂರು ನೂರುಮಂದಿ ಬ್ರಾಹ್ಮಣರಿಗೆ ಭೋಜನವು ಆಗುವುದು. ಅಥವಾ ಹತ್ತು, ಐದು, ಮೂರು ಮತ್ತು ಒಂದು ದಿನದಲ್ಲಿಯಾದರೂ ಪೂರ್ತಿ ಬ್ರಾಹ್ಮಣ ಭೋಜನವನ್ನು ಮಾಡಿಸಬಹುದು.

ತ್ರಿಂಶಚ್ಛಷ್ಟಿಃ ಶತಂ ವಿಪ್ರಾಃ ಸಂಭೋಜ್ಯಾಸ್ತ್ರಿಶತಂ ಕ್ರಮಾತ್ ।
ಏವಂ ಯಃ ಕುರುತೇ ಭಕ್ತ್ಯಾ ಜನ್ಮಮಧ್ಯೇ ಸಕೃನ್ನರಃ ॥೪೦॥

ತಸ್ಯೈವ ಸಫಲಂ ಜನ್ಮ ಮುಕ್ತಿಸ್ತಸ್ಯ ಕರೇ ಸ್ಥಿರಾ ।
ರಹಸ್ಯನಾಮಸಾಹಸ್ರಭೋಜನೇಽಪ್ಯೇವಮೇವ ಹಿ ॥೪೧॥

ಆದೌ ನಿತ್ಯಬಲಿಂ ಕುರ್ಯಾತ್ ಪಶ್ಚಾದ್ಬ್ರಾಹ್ಮಣಭೋಜನಮ್ ।
ರಹಸ್ಯನಾಮಸಾಹಸ್ರ ಮಹಿಮಾ ಯೋ ಮಯೋದಿತಃ ॥೪೨॥

ಸ ಶೀಕರಾಣುರತ್ರೈಕನಾಮ್ನೋ ಮಹಿಮವಾರಿಧೇಃ ।
ವಾಗ್ದೇವೀರಚಿತೇ ನಾಮಸಾಹಸ್ರೇ ಯದ್ಯದೀರಿತಮ್ ॥೪೩॥

ತತ್ಫಲಂ ಕೋಟಿಗುಣಿತಂ ನಾಮ್ನೋಽಪ್ಯೇಕಸ್ಯ ಕೀರ್ತನಾತ್ ।
ಏತದನ್ಯೈರ್ಜಪೈಃ ಸ್ತೋತ್ರೈರರ್ಚನೈರ್ಯತ್ಫಲಂ ಭವೇತ್ ॥೪೪॥

---

೪೦. ಪ್ರತಿದಿನವೂ ಮೂವತ್ತರಂತೆ ಹತ್ತು ದಿನಗಳಲ್ಲಿ, ಅರವತ್ತರಂತೆ ಐದು ದಿನಗಳಲ್ಲಿ, ಒಂದುನೂರರಂತೆ ಮೂರು ದಿನಗಳಲ್ಲಿ ಮೂರುನೂರು ಒಂದೇ ದಿನದಲ್ಲಿ ಯಾದರೂ,ಮೂರುನೂರುಮಂದಿ ಬ್ರಾಹ್ಮಣ ಭೋಜನವನ್ನು ಮಾಡಿಸ ಬಹುದು. ಮಾನವನು ತನ್ನ ಜನ್ಮಾಯುಷ್ಯ ಮಧ್ಯದಲ್ಲಿ ಭಕ್ತಿಯಿಂದ ಒಂದುಸಲ ವಾದರೂ ಮಾಡಬೇಕು.

೪೧. ಅಂತಹ ಮಾನವನ ಜನ್ಮವು ಸಫಲವು. ಮುಕ್ತಿಯು ಸ್ಥಿರವಾಗಿ ಅವನ ಕರಗತವಾಗಿರುವುದು. ರಹಸ್ಯನಾಮಸಹಸ್ರದ ಅರ್ಚನಾಂಗ ಭೋಜನ ದಲ್ಲಿಯೂ ಇದೇ ಕ್ರಮವನ್ನು ಅರಿಯಬೇಕು.

೪೨. ಆದಿಯಲ್ಲಿ ನಿತ್ಯಬಲಿಯನ್ನು ಆಚರಿಸಿ, ಅನಂತರದಲ್ಲಿ ಬ್ರಾಹ್ಮಣ ಭೋಜನವನ್ನು ಅನುಷ್ಠಾನಮಾಡಬೇಕು. ಹಿಂದೆ ರಹಸ್ಯನಾಮ ಸಹಸ್ರಸ್ತೋ ತ್ರದ ಮಹಿಮೆಯು ವರ್ಣಿಸಲ್ಪಟ್ಟಿರುವುದಲ್ಲವೆ.

೪೩. ಆ ಮಹಿಮೆಯೆಲ್ಲವೂ ತ್ರಿಶತಿಯಲ್ಲಿರುವ ನಾಮಗಳಲ್ಲಿ ಒಂದು ನಾಮ ಮಹಿಮೆಯ ಬಿಂದುವಿನ ಒಂದು ಕಣವಾಗುವುದು. ವಾಗ್ದೇವಿಯಿಂದ ರಚಿ ಸಲ್ಪಟ್ಟ ನಾಮಸಹಸ್ರಸ್ತೋತ್ರದಲ್ಲಿ ಅನೇಕ ಫಲಗಳು ಹೇಳಲ್ಪಟ್ಟಿರುತ್ತವೆ.

೪೪. ಆ ಫಲವು ತ್ರಿಶತೀನಾಮಾವಳಿಯ ಒಂದುನಾಮ ಕೀರ್ತನದಿಂದ

ತತ್ಫಲಂ ಕೋಟಿಗುಣಿತಂ ಭವೇನ್ನಾಮಶತತ್ರಯಾತ್ ।
ವಾಗ್ದೇವೀರಚಿತೇ ಸ್ತೋತ್ರೇ ತಾದೃಶೋ ಮಹಿಮಾ ಯದಿ ॥೪೫॥

ತಸ್ಮಾತ್ಕಾಮೇಶ ಕಾಮೇಶೀ ಕೃತೇಽಸ್ಮಿನ್ ಗೃಹ್ಯತಾಮಿತಿ ।
ಸಕೃತ್ ಸಂಕೀರ್ತನಾದೇವ ನಾಮ್ನಾಮಸ್ಮಿನ್ ಶತತ್ರಯೇ ॥೪೬॥

ಭವೇಚ್ಚಿತ್ತಸ್ಯ ಪರ್ಯಾಪ್ತಿರ್ನೂನಮನ್ಯಾನಪೇಕ್ಷಿಣೀ ।
ನ ಜ್ಞಾತವ್ಯಮಿತೋಽಪ್ಯನ್ಯನ್ನ ಜಪ್ತವ್ಯಂ ಚ ಕುಂಭಜ ॥೪೭॥

ಯದ್ಯತ್ಸಾಧ್ಯತಮಂ ಕಾರ್ಯಂ ತತ್ತದರ್ಥಮಿದಂ ಜಪೇತ್ ।
ತತ್ತತ್ಫಲಮವಾಪ್ನೋತಿ ತಸ್ಮಾತ್ ಕಾರ್ಯಂ ಪರೀಕ್ಷಯೇತ್ ॥೪೮॥

---

ಕೋಟಿಗುಣಿತವಾಗಿ ಉಂಟಾಗುವುವು. ಇತರ ಜಪ, ಸ್ತೋತ್ರ, ಅರ್ಚನ ಮುಂತಾದ ಪುರುಷಾರ್ಥಸಾಧನ ಕರ್ಮಗಳಿಂದಲೂ ಅನೇಕ ಫಲ ಪ್ರಾಪ್ತಿಯಾಗುವುದು.

೪೫. ಆದರೆ ತ್ರಿಶತೀನಾಮ ಪಾಠದಿಂದ ಆ ಫಲವೆಲ್ಲವೂ ಕೋಟಿಗುಣಿತವಾಗಿ ಲಭಿಸುವುದು. ವಾಗ್ದೇವಿಯಿಂದ ರಚಿತವಾದ ಸಹಸ್ರನಾಮ ಸ್ತೋತ್ರದಲ್ಲಿಯೇ ಅಷ್ಟೊಂದು ಮಹಿಮೆಯಿದೆಯೆಂದು ಪ್ರಮಾಣ ಸಿದ್ಧವಾಗಿದೆ.

೪೬. ಸಾಕ್ಷಾತ್ ಕಾಮೇಶ-ಕಾಮೇಶಿಯರಿಂದ ರಚಿತವಾದ ಈ ಸ್ತೋತ್ರದಲ್ಲಿ ಆ ಮಹಿಮೆಯು ಇದೆಯೆಂಬುದು ಸ್ವತಸ್ಸಿದ್ಧವೆಂದು ಗ್ರಹಿಸು. ಈ ನಾಮ ತ್ರಿಶತೀಸ್ತೋತ್ರವನ್ನು ಒಂದುಸಲಮಾತ್ರ ಕೀರ್ತಿಸುವುದೂ ಮಹಾಫಲದಾಯಕವಾಗಿರುವುದು.

೪೭. ಅದರ ಕೀರ್ತನವು ನಿಜವಾಗಿ ಮತ್ತೊಂದನ್ನು ಅಪೇಕ್ಷಿಸದಿರುವಂತೆ ಚಿತ್ತಕ್ಕೆ ಸಂಪೂರ್ಣ ವಿಶ್ರಾಂತಿಯ ಆನಂದವನ್ನು ಕೊಡುವುದು. ಆಗಸ್ತ್ಯನೇ,ಇದಕ್ಕಿಂತ ಬೇರೆ ತಿಳಿಯಬೇಕಾದ್ದು,ಜಪಿಸಬೇಕಾದ್ದು ಅವಶಿಷ್ಟವಾಗಿಲ್ಲ.

೪೮. ಸಾಧಿಸಬೇಕಾದ ಕಾರ್ಯವು ಯಾವುದು ಪ್ರಸಕ್ತವಾದರೂ ಅದಕ್ಕೋಸ್ಕರ ಈ ಸ್ತೋತ್ರವನ್ನು ಜಪಿಸಿದರೆ ಆಯಾಯ ಕಾರ್ಯದ ಫಲವು ತಪ್ಪದೇ ದೊರೆಯುವುದು, ಅನಂತರದಲ್ಲಿ ಕಾರ್ಯವನ್ನು ಪರೀಕ್ಷಿಸಬೇಕು.

ಯೇ ಯೇ ಪ್ರಯೋಗಾಸ್ತಂತ್ರೇಷು ತೈಸ್ತೈರ್ಯತ್ಸಾಧ್ಯತೇ ಫಲಮ್ ।
ತತ್ಸರ್ವಂ ಸಿದ್ಧ್ಯತಿ ಕ್ಷಿಪ್ರಂ ನಾಮತ್ರಿಶತಕೀರ್ತನಾತ್ ॥೪೯॥

ಆಯುಷ್ಕರಂ ಪುಷ್ಟಿಕರಂ ಪುತ್ರದಂ ವಶ್ಯಕಾರಕಮ್ ।
ವಿದ್ಯಾಪ್ರದಂ ಕೀರ್ತಿಕರಂ ಸುಕವಿತ್ವಪ್ರದಾಯಕಮ್ ॥೫೦॥

ಸರ್ವಸಂಪತ್ಪ್ರದಂ ಸರ್ವಭೋಗದಂ ಸರ್ವಸೌಖ್ಯದಮ್ ।
ಸರ್ವಾಭೀಷ್ಟಪ್ರದಂ ಚೈವ ದೇವ್ಯಾ ನಾಮಶತತ್ರಯಮ್ ॥೫೧॥

ಏತಜ್ಜಪಪರೋ ಭೂಯಾನ್ನಾನ್ಯದಿಚ್ಛೇತ್ ಕದಾ ಚನ ।
ಏತತ್ಕೀರ್ತನಸಂತುಷ್ಟಾ ಶ್ರೀದೇವೀ ಲಲಿತಾಂಬಿಕಾ ॥೫೨॥

ಭಕ್ತಸ್ಯ ಯದ್ಯದಿಷ್ಟಂ ಸ್ಯಾತ್ತತ್ತತ್ಪೂರಯತೇ ಧ್ರುವಮ್ ।
ತಸ್ಮಾತ್ ಕುಂಭೋದ್ಭವ ಮುನೇ ಕೀರ್ತಯ ತ್ವಮಿದಂ ಸದಾ ॥೫೩॥

---

೪೯. ತಂತ್ರಶಾಸ್ತ್ರಗಳಲ್ಲಿ ಯಾವ ಯಾವ ಪ್ರಯೋಗಗಳು ವಿವರಿಸಲ್ಪಟ್ಟಿವೆಯೋ ಆಯಾಯ ಪ್ರಯೋಗಗಳಿಂದ ದೊರೆಯುವ ಫಲವು ಯಾವುದೋ ಅದೆಲ್ಲವೂ ನಾಮತ್ರಿಶತಿಯ ಕೀರ್ತನದಿಂದ ಕ್ಷಿಪ್ರದಲ್ಲಿ ಸಿದ್ಧಿಸುವುದು.

೫೦. ಈ ಸ್ತೋತ್ರ ಕೀರ್ತನವು ಆಯುಷ್ಯ, ಪುಷ್ಟಿ, ಸತ್ಸಂತಾನ, ವಶ್ಯತೆ, ವಿದ್ಯಾ, ಕೀರ್ತಿ, ಮತ್ತು ಸುಕವಿತ್ವ ಮುಂತಾದ ಅನೇಕ ಪ್ರಯೋಜನಗಳನ್ನು ಉಂಟುಮಾಡುವುದು.

೫೧, ಮತ್ತು ದೇವಿಯ ನಾಮ ತ್ರಿಶತೀಸ್ತೋತ್ರ ಕೀರ್ತನವು, ಸರ್ವ ಸಂಪತ್ತುಗಳನ್ನೂ, ಸಮಸ್ತಭೋಗಗಳನ್ನೂ ಸರ್ವಸೌಖ್ಯಗಳನ್ನೂ ಮತ್ತು ಸಕಲ ಇಷ್ಟಾರ್ಥಗಳನ್ನೂ ಕೊಡುವುದು.

೫೨. ಮಾನವನು ಈ ಸ್ತೋತ್ರಜಪದಲ್ಲಿ ಆಸಕ್ತಿಯನ್ನು ಹೊಂದಬೇಕು. ಯಾವಾಗಲೂ ಮತ್ತೊಂದನ್ನು ಆಶಿಸಬಾರದು. ಶ್ರೀಲಲಿತಾಂಬಿಕಾ ದೇವಿಯು ಈ ಸ್ತೋತ್ರ ಕೀರ್ತನದಿಂದ ಸಂತುಷ್ಟಳಾಗುವಳು.

೫೩. ಮತ್ತು ಭಕ್ತನ ಆಯಾಯ ಇಷ್ಟ ಫಲವನ್ನು ತಪ್ಪದೇ ಸಂಪೂರ್ಣವಾಗಿ ದೊರಕಿಸುವಳು. ಅಗಸ್ತ್ಯಮುನಿಯೇ! ಆದ್ದರಿಂದ ನೀನು ಇದನ್ನು ಯಾವಗಲೂ ಕೀರ್ತಮಾಡುತ್ತಲಿರು.

ನಾಪರಂ ಕಿಂಚಿದಪಿ ತೇ ಬೋದ್ಧವ್ಯಂ ನಾವ ಶಿಷ್ಯತೇ ।
ಇತಿ ತೇ ಕಥಿತಂ ಸ್ತೋತ್ರಂ ಲಲಿತಾಪ್ರೀತಿದಾಯಕಮ್ ॥೫೪॥

ನಾವಿದ್ಯಾವೇದಿನೇ ಬ್ರೂಯಾನ್ನಾಭಕ್ತಾಯ ಕದಾ ಚನ
ನ ಶಠಾಯ ನ ದುಷ್ಟಾಯ ನಾವಿಶ್ವಾಸಾಯ ಕರ್ಹಿಚಿತ್ ॥೫೫॥

ಯೋ ಬ್ರೂಯಾತ್ತ್ರಿಶತೀಂ ನಾಮ್ನಾಂ ತಸ್ಯಾನರ್ಥೋ ಮಹಾನ್ ಭವೇತ್ ।
ಇತ್ಯಾಜ್ಞಾ ಶಾಂಕರೀ ಪ್ರೋಕ್ತಾ ತಸ್ಮಾದ್ಗೋಪ್ಯಮಿದಂ ತ್ವಯಾ ॥೫೬॥
ಲಲಿತಾಪ್ರೇರಿತೇನೈವ ಮಯೋಕ್ತಂ ಸ್ತೋತ್ರ ಮುತ್ತಮಮ್ ।
ರಹಸ್ಯನಾಮಸಾಹಸ್ರಾದಪಿ ಗೋಪ್ಯಮಿದಂ ಮುನೇ ॥೫೭॥

---

೫೪. ಇದಕ್ಕಿಂತ ಬೇರೆಯಾಗಿ ನೀನು ತಿಳಿಯ ಬೇಕಾದ್ದು ಇಲ್ಲ. ತಿಳಿಯ ಬೇಕಾದ್ದು ಯಾವುದೂ ಅವಶಿಷ್ಟವಾಗಿ ಇಲ್ಲ. ಈ ರೀತಿಯಾಗಿ ಶ್ರೀಲಲಿತಾಂಬಿಕೆಗೆ ಪ್ರೀತಿಯನ್ನುಂಟುಮಾಡುವ ಸ್ತೋತ್ರವು ನಿನಗೆ ಉಪದೇಶಿಸಲ್ಪಟ್ಟಿದೆ.

೫೫. ಇದನ್ನು ಅವಿದ್ಯೋಪಾಸಕ, ಭಕ್ತಿಶೂನ್ಯ, ವಂಚಕ, ದುಷ್ಟ ಮತ್ತು ಶ್ರದ್ಧಾರಹಿತ ಮುಂತಾದ ಅನಧಿಕಾರಿಗೆ ಯಾವಾಗಲೂ ಎಲ್ಲಿಯೂ ದಾನಮಾಡ ಬಾರದು.

೫೬. ಇದನ್ನು ಉಲ್ಲಂಘಿಸಿ ಅನಧಿಕಾರಿಗೆ ಇದನ್ನು ಯಾರಾದರೂ ಉಪ ದೇಶಿಸಿದರೆ ಅವನಿಗೆ ದೊಡ್ಡ ಅನರ್ಥವು ಸಂಭವಿಸುವುದು. ಹೀಗೆಂಬುದು ಸಾಕ್ಷಾತ್ ಶಂಕರನ ಆಜ್ಞೆಯಿಂದು ಹೇಳಲ್ಪಟ್ಟಿದೆ. ಆದುದರಿಂದ ಇದು ನಿನ್ನಿಂದ ಗೋಪ್ಯವಾಗಿರುವಂತೆ ರಕ್ಷಿಸಲ್ಪಡಬೇಕು.

೫೭. ಮುನಿಯೇ ! ಶ್ರೀಲಲಿತಾಂಬಿಕೆಯಿಂದ ಪ್ರೇರಿತನಾದ ನಾನು ಉತ್ತಮವಾದ ಈ ಸ್ತೋತ್ರವನ್ನು ನಿನಗೆ ಪ್ರಕಾಶಪಡಿಸಿರುವೆನು. ಲಲಿತಾ ಸಹಸ್ರನಾಮ ಸ್ತೋತ್ರಕ್ಕಿಂತಲೂ ಇದು ವಿಶೇಷವಾಗಿ ಗೋಪನಕ್ಕೆ ಅರ್ಹವಾಗಿ ರುವುದು.

ಏವಮುಕ್ತ್ವಾ ಹಯಗ್ರೀವಃ ಕುಂಭಜಂ ತಾಪಸೋತ್ತಮಮ್ ।
ಸ್ತೋತ್ರೇಣಾನೇನ ಲಲಿತಾಂ ಸ್ತುತ್ವಾ ತ್ರಿಪುರಸುಂದರೀಮ್
ಆನಂದಲಹರೀಮಗ್ನ ಮಾನಸಃ ಸಮವರ್ತತ ॥೫೮॥

ಇತಿ ಶ್ರೀ ಲಲಿತಾ ತ್ರಿಶತೀಸ್ತೋತ್ರಂ ಸಂಪೂರ್ಣಮ್

---

೫೮. ಹಯಗ್ರೀವ ಮುನಿಯು ಶ್ರೇಷ್ಠ ತಪಸ್ವಿಯಾದ ಅಗಸ್ತ್ಯ ಶಿಷ್ಯನಿಗೆ ಈ ರೀತಿಯಾಗಿ ಹೇಳಿ ಈ ನಾಮ ತ್ರಿಶತೀಸ್ತೋತ್ರದಿಂದ ತ್ರಿಪುರಸುಂದರೀ ದೇವಿಯನ್ನು ಸ್ತುತಿಸಿ, ಆನಂದ ತರಂಗಪರಂಪರೆಯಲ್ಲಿ ಮುಳುಗಿದ ಮಾನಸವುಳ್ಳವನಾದನು.

ಫಲಶ್ರುತಿಯು ಸಂಪೂರ್ಣವು



ಬೆಂಗಳೂರು ಪ್ರೆಸ್ ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು.